# ವಿಷಯಾನುಕ್ರಮಣಿಕೆ.

# II

# III



**ಹೊಸ ವೇದವು.**

# ಶುದ್ಧಾಶುದ್ಧ ಪತ್ರಿಕೆ.

| ಪುಟ | ತಪ್ಪು | ಸರಿ |
|---|---|---|
| 27 | ಒಂದಿಸಿ | ವಂದಿಸಿ |
| 28 | ಜಾದನೆಂಬವನು | ಜೂದನೆಂಬವನು |
| 30 | ಆಲ್ಲಿಗೇರಿಸಲ್ಪಡಲು | ಗಲ್ಲಿಗೇರಿಸಲ್ಪಡಲು |
| 31 | ಈವುಗಳ | ಇವುಗಳ |
| 32 | ದಿಬ್ಬರು | ಇಬ್ಬಗು |
| 32 | ಎಲ್ಲಪು | ಎಲ್ಲವು |
| 32 | ಅರ್ದವನ್ನು | ಅರ್ಥವನ್ನು |
| 38 | ಜಾದನೆಂಬವನು | ಜೂದನೆಂಬವನು |
| 41 | ಭಜಿಸುತ್ತಿರುವಲ್ಲಿ | ಭುಜಿಸುತ್ತಿರುವಲ್ಲಿ |
| 50 | ಕರೆದೊಯ್ಯುದೆವು | ಕರೆದೊಯ್ಯುವೆವು |
| 53 | ಮೊಸನು | ಮೋಯಿಸನು |
| 55 | ಗೊಡುವೆನು | ಗೊಡುವನು |
| 74 | ಮಲಗಿಕ್ಕೆ | ಮಲಗಲಿಕ್ಕೆ |
| 78 | ಪರ್ವದ | ಪರ್ವತದ |
| 93 | ಜಾದಾ | ಜೂದಾ |
| 99 | ಕೊಂಡು | ಕೊಡು |
| 100 | ಈನತು | ಈತನು |
| 107 | ವಾಳಿಯು | ಪಾಳಿಯು |

| | | |
|---|---|---|
| 109 | ನಮ್ಮನಸ್ಸಿನ | ಸಮ್ಮನಸ್ಸಿನ |
| 121 | ಮಪನಾದ | ಮಗನಾದ |
| 130 | ಜೀಸುನಾಥರು | ಜೀಸುನಾಥರು |
| 133 | ಸಾಮರ್ಯರ | ಸಾಮರ್ಥ್ಯರ |
| 135 | ಭೀಜನ | ಭೋಜನ |
| 139 | ಅಂದಿಯಪ್ಪನು | ಅಂದ್ರಿಯಪ್ಪನು |
| 141 | ನರಕರಲ್ಲಿ | ನರಕದಲ್ಲಿ |
| 149 | ನಿದೆ | ನಿಷ್ಟೆ |
| 180 | ಹೆಟ್ಟೆ | ಹೊಟ್ಟೆ |
| 181 | ಉದ | ಊದ |
| 190 | ತೊಳೆಯುತಿದ್ದರೆ | ತೊಳೆಯುದಿದ್ದರೆ |
| 191 | ಕಾಲುನೆಗಳನ್ನು | ಕಾಲುಗಳನ್ನು |
| 193 | ನೋಡು | ನೋಡಿ |
| 214 | ಗೊದ್ತಿದ್ದಿಲ್ಲ | ಗೊತ್ತಿದ್ದಿಲ್ಲ |
| 215 | ಏಂದು | ಎಂದು |



# ಹಳೇ ವೇದದ ಚರಿತ್ರೆಯು



## 1 ಪ್ರಪಂಚ ಸೃಷ್ಟಿಯನ್ನು ಕುರಿತು

ದೇವರು ಯಾವಾಗಲೂ ಇರುತ್ತಿದ್ದರು ಅವರಿಗೆ ಆದಿಯು ಇಲ್ಲವು, ಅಂತ್ಯವು ಇರುವದಿಲ್ಲ. ಒಂದಾನೊಂದು ಕಾಲದಲ್ಲಿ ದೇವರು ಒಬ್ಬರೇ ಇರುತ್ತಿದ್ದರು. ಯಾವದೊಂದು ಇಲ್ಲದೆ ಇರುವಲ್ಲಿ ದೇವರು ತಮ್ಮ ಸರ್ವ ಶಕ್ತಿಯಿಂದ ಪರಲೋಕವನ್ನು ಭೂಲೋಕವನ್ನು ಅವುಗಳಲ್ಲಿ ಅಡಗಿರುವ ಸಕಲವನ್ನು ಸೃಷ್ಟಿಸಿದರು.

ಏನೂ ಇಲ್ಲದೆ ದೇವರು ಭೂಲೋಕವನ್ನು ಸೃಷ್ಟಿಸಿದರು. ಮೊದಲು ಲೋಕವು ಕತ್ತಲೆಯಾಗಿದ್ದು ನೀರಿನಿಂದ ತುಂಬಿತ್ತು. ಆಗ ದೇವರು ಪ್ರಕಾಶವುಂಟಾಗಲಿ ಎಂದು ಹೇಳುತ್ತಲೇ ಪ್ರಕಾಶ ಉಂಟಾಯಿತು. ದೇವರು ಪ್ರಕಾಶವನ್ನೂ ಕತ್ತಲೆಯನ್ನು ವಿಂಗಡಿಸಿ, ಪ್ರಕಾಶಕ್ಕೆ ಹಗಲೆಂದೂ, ಅಂಧಕಾರಕ್ಕೆ ರಾತ್ರಿಯೆಂದೂ ಹೆಸರನ್ನಿಟ್ಟರು. ಇವೆಲ್ಲವೂ ಮೊದಲನೇಯದಿವಸ ಸೃಷ್ಟಿಸಲ್ಪಟ್ಟವು.

ಎರಡನೇಯದಿವಸ ದೇವರು ನೀರನ್ನು ವಿಂಗಡಿಸುವದಕ್ಕಾಗಿ ಆಕಾಶವುಂಟಾಗಲಿ ಎಂದು ಹೇಳಿದಾಕ್ಷಣವೇ ಆಕಾಶವುಂಟಾಯಿತು. ದೇವರು ಅದನ್ನು ಪರಲೋಕವೆಂದು ಕರೆದರು

ಮೂರನೇಯ ದಿವಸ ಕರ್ತರು ಆಕಾಶವ ಕೆಳಗಿರುವ ನೀರೆಲ್ಲಾ ಒಂದೇ ಸ್ಥಳದಲ್ಲಿ ಸೇರಿ ಒಣಗಿದ ಭೂಮಿಯು ಏರ್ಪಡಲಿ ಎಂದರು. ಮತ್ತು ಒಣಗಿದ ಭೂಮಿಯು ವೃಕ್ಷ ಪೈರು ಮೊದಲಾದವುಗಳನ್ನು ಕೊಡುವಹಾಗೆ ಆಜ್ಞಾಪಿಸಿ ಒಣಗಿದ ಭೂಮಿಗೆ ಪೃಥ್ವಿಯೆಂತಲೂ, ನೀರಿನ ಭಾಗಕ್ಕೆ ಸಮುದ್ರವೆಂತಲೂ ಕರೆದರು.

ನಾಲ್ಕನೇ ದಿವಸದಲ್ಲಿ ದೇವರು ಸೂರ್ಯ, ಚಂದ್ರ, ನಕ್ಷತ್ರಗಳನ್ನು ಉಂಟುಮಾಡಿ ಹೇಳಿದ್ದೇನಂದರೆ ಆಕಾಶದ ಬೆಳಕು ರಾತ್ರಿಯಿಂದ ಹಗಲನ್ನು ವಿಂಗಡಿಸಲಿ, ಮತ್ತು ಕಾಲಗಳನ್ನು ವರ್ಷಗಳನ್ನು ಗುರ್ತಿಸಲಿ ಎಂದರು.

ಐದನೇ ದಿವಸದಲ್ಲಿ ದೇವರು ನೀರಿನಲ್ಲಿ ಈಜುವ ನಾನಾ ವಿಧದ ಮಿನಾನ ಮೊದಲಾದವುಗಳನ್ನು ಸೃಷ್ಟಿಸಿದರು. ಮತ್ತು ಆಕಾಶದಲ್ಲಿ ಹಾರುವ ನಾನಾವಿಧದ ಪಕ್ಷಿಗಳನ್ನು ಉಂಟುಮಾಡಿದರು. ಸರ್ವೇಶ್ವರನು ಅವುಗಳನ್ನು ಆಶೀರ್ವದಿಸಿ ನೀವು ಬೆಳೆದು ವರ್ಧಿಸಿ ಪ್ರಬಲವಾಗುವಿರಾಗಲಿ ಎಂದು ನುಡಿದರು.

ಆರನೇ ದಿವಸದಲ್ಲಿ ದೇವರು ಭೂಮಿಯ ಮೇಲೆ ಸಂಚರಿಸುವ ಮೃಗ ಮೊದಲಾದ ಜೀವ ಜಂತುಗಳನ್ನು ಸೃಷ್ಟಿಸಿದರು. ಆಗ ದೇವರು ತಮ್ಮ ಹೋಲ್ಕಿಕೆಯಾಗಿ[ತಮ್ಮ ರೂಪದ ಹಾಗೆ] ಒಬ್ಬ ಮನುಷ್ಯನನ್ನು ಉಂಟುಮಾಡಿ, ನಾನು, ಸೃಷ್ಟಿಸಿದಂಥಾ ಎಲ್ಲ ವಸ್ತುಗಳ ಮೇಲೆ ಆತನಿಗೆ ಅಧಿಕಾರವನ್ನು ಕೊಡುವೆನು ಎಂದು ಹೇಳಿದರು. ಮತ್ತು ಮಣ್ಣಿನಿಂದ ಮನುಷ್ಯನನ್ನು ಉಂಟುಮಾಡಿ ಆತನಿಗೆ ಯಾವಾಗಲೂ ಸಾಯದಂಥ ಆತ್ಮವನ್ನು ಕೊಟ್ಟರು.

ಏಳನೇಯ ದಿವಸದಲ್ಲಿ ದೇವರು ಯಾವ ಕೆಲಸವನ್ನೂ ಮಾಡದೆ ವಿಶ್ರಾಂತಿಯನ್ನು ತಕ್ಕೊಂಡರು. ಆದಿವಸವನ್ನು ಆಶೀರ್ವಾದಿಸಿ ಪರಿಶುದ್ಧ ಮಾಡಿದರು.

ಕತೋಲಿಕ್ ಕ್ರಿಸ್ತುವರಿಗೆ ಆದಿತ್ಯವಾರದಲ್ಲಿಯೂ ಸಾಲದ ಹಬ್ಬದಲ್ಲಿಯೂ ತುಂಬ ಪೂಜೆಯನ್ನು ನೋಡುವದಕ್ಕೂ ಕಷ್ಟವಾದ ಕೆಲಸಗಳನ್ನು ಮಾಡದೆ ಇರುವದಕ್ಕೂ ಸಾಲ ಉಂಟು.

## 2 ಸಮ್ಮನಸ್ಸುಗಳು ಕೆಟ್ಟುಹೋದ ವರ್ತಮಾನವು

ಸರ್ವೇಶ್ವರನು ಪರಲೋಕವನ್ನು ಸೃಷ್ಟಿಸಿದ ಬಳಿಕ ಅದರಲ್ಲಿ ನಿವಾಸಿಸುವದಕ್ಕಾಗಿ ಸಮ್ಮನಸ್ಸುಗಳನ್ನು ಸೃಷ್ಟಿಸಿದರು. ಇವರು ಶುದ್ಧ ಅರೂಪಿಗಳು, ಅಂದರೆ ಇವರಿಗೆ ಶರೀರವಿಲ್ಲದೆ ಆತ್ಮ ಮಾತ್ರ ವಿರುವದು. ಆದ್ದರಿಂದ ನಾವು ಇವರನ್ನು ನೋಡಲಾರೆವು. ದೇವರು ತಮ್ಮನ್ನು ಆರಾಧಿಸಿ, ತಮ್ಮ ಅಪ್ಪಣೆಗನುಸಾರವಾಗಿ ನಡೆಯಲು ಸಮ್ಮನಸ್ಸುಗಳನ್ನು ಸೃಷ್ಟಿಸಿದರು.

ಮೊದಲು ಸಮ್ಮನಸ್ಸುಗಳು ಪರಿಶುದ್ಧವಾಗಿಯೂ, ಭಾಗ್ಯವಾದ ಅಂತಸ್ಥಿನಲ್ಲಿಯೂ ಇದ್ದರು. ಅವರು ದೇವರ ಕೂಡ ಬಹಳ ಸಂತೋಷದಿಂದ ಇರುತ್ತಿದ್ದರು. ಈ ಸಮ್ಮನಸ್ಸುಗಳಲ್ಲಿ ಒಬ್ಬರು ಮಾತ್ರ ಬಹಳ ಶ್ರೇಷ್ಟವಾದ ವರಗಳನ್ನು ಹೊಂದಿದವರಾಗಿದ್ದರು. ಇವರೇ ಲೂಸಿಫೇರನು ( ಅಂದರೆ ಪ್ರಕಾಶವನ್ನು ಹೊಂದಿದವನು. )

ಲೂಸಿಫೇರನು ಬಹಳ ಸೌಂಧರ್ಯವಂತನೂ, ಗೌರವವುಳ್ಳವನೂ ಆಗಿದ್ದದರಿಂದ ತನ್ನ ಅಂತಸ್ಥನ್ನು ನೋಡಿ ಗರ್ವಪಡಲಾರಂಭಿಸಿದನು. ಆತನ ವರಪ್ರಸಾದಗಳು ಆತನ ನಾಶಕ್ಕೆ

ಗುರಿಯಾದವು ಅವನು ಗರ್ವದಿಂದ ಪಾಪವನ್ನು ಕಟ್ಟಿಕೊಂಡನು. ದೇವರಹಾಗೆಯೇ ತಾನೂ ಇರಬೇಕೆಂಬು ನೆನೆಸಿ ತಾನು ದೇವರಿಗೆ ಸರಿಸಮಾನನಾಗಿ ದ್ದಾನೆಂದು ಹೇಳಿ ದೇವರ ಮಾತಿಗೆ ವಿಧೇಯಿಸಬೆ ಹೋದನು. ಹೀಗೆಯೇ ಉಳಿದ ಸಮ್ಮನಸ್ಸುಗಳಿಗೆ ದುರ್ಬುದ್ಧಿ ಹೇಳಿ ತನ್ನ ಕಡೆಗೆ ಸೇರಿಸಲು ಪ್ರಯಾಸಪಟ್ಟನು ಅನೇಕರು ಇವನಕಡೆಗೆ ಸೇರಿದರು, ಮತ್ತು ಲೂಸಿಫೇರನು ತಾನು ದೇವರಿಗೆ ಸರಿಸಮಾನನಾಗಿರವನೆಂದು ಹೇಳಿದನು.

ಆದರೆ ಒಳ್ಳೇ ಸಮ್ಮನಸ್ಸುಗಳಲ್ಲಿ ಪ್ರಧಾನ ಸಮ್ಮನಸ್ಸಾದ ಮಿಖಯೇಲ್ ಎಂಬವರು "ಸರ್ವೇಶ್ವರನ ಹಾಗೆ ಯಾರೆಂದು?" ಮಹಾ ಶಬ್ದದೊಂದಿಗೆ ಕೂಗಿ ಸರ್ವೇಶ್ವರನಿಗೆ ಪ್ರಮಾಣಿಕ್ಯವಾಗಿದ್ದಂಥಾ ಸಮ್ಮನಸ್ಸುಗಳನ್ನು ಸೈನ್ಯವಾಗಿ ಕೂಟಿಸಿ, ಕೆಟ್ಟ ಸಮ್ಮನಸ್ಸುಗಳಮೇಲೆ ಬಿದ್ದು ಯುದ್ಧ ಮಾಡಿದರು. ಲೂಸಿಫೇರನನ್ನು ಆತನ ಸಂಗಡದವರನ್ನು ನರಕದಲ್ಲಿ ತಳ್ಳಿ ಬಿಟ್ಟರು.

ಈಗ ಲೂಸಿಫೇರನು ಸೈತಾನನೆಂದೂ, ಪಿಶಾಚಿಯೆಂದೂ ಕರೆಯಲ್ಪಡುತ್ತಾನೆ.

ಒಳ್ಳೇ ಸಮ್ಮನಸ್ಸುಗಳ ಮೇಲೆ ಸರ್ವೇಶ್ವರನು ಅತ್ಯಂತ ಪ್ರೀತಿಯನ್ನಿರಿಸಿ, ಅವರನ್ನುತನ್ನೊಂದಿಗೆ ಮೋಕ್ಷದಲ್ಲಿಟ್ಟುಕೊಂಡರು, ಆದರೆ ಸೈತಾನನನ್ನು ಉಳಿದ ಪಿಶಾಚಿಗಳನ್ನು ಶಿಕ್ಷಿಸಿ ನಿತ್ಯಕಾಲದವರೆಗೆ ಅವರನ್ನು ನರಕದಲ್ಲಿ ಹಾಕಿದರು.

ಸಮ್ಮನಸ್ಸುಗಳಲ್ಲಿ ಒಂಭತ್ತು ವಿಲಾಸಸಭೆಯ ಸಮ್ಮನಸ್ಸುಳಿರುತ್ತಾರೆ. ಯಾರೆಂದರೆ, ದೂತರು, ಅತಿದೂತರು, ಪ್ರಾಧ್ಮೀಕರು, ಬಲವಂತರು, ಶಕ್ತಿವಂತರು, ನಾಥಕೃತ್ಯರು, ಭದ್ರಾಸನರು, ಜ್ಞಾನಾಧಿಕರು, ಭಕ್ತಿ ಜ್ವಾಲಕರು.

ಸಮ್ಮನಸ್ಸುಗಳಲ್ಲಿ ಮನುಷ್ಯರನ್ನು ಕಾಪಾಡುವದಕ್ಕಾಗಿ ನೇಮಿಸಿದಂಥ ಸಮ್ಮನಸ್ಸುಗಳಿಗೆ ಕಾವಲಾದ ಸಮ್ಮನಸ್ಸುಗಳೆಂದು ಹೆಸರು. ಅವರು ನಮ್ಮನ್ನು ಕಾಪಾಡಿ ರಕ್ಷಿಸುತ್ತಾರೆ, ಮತ್ತು ಒಳ್ಳೇಯೋಚನೆಗಳನ್ನು ಕೊಡುತ್ತಾರೆ. ಇವರು ಯಾವಾಗಲೂ ನಮ್ಮ ಹತ್ತರವೇ ಇರುತ್ತಾರೆ; ನಾವು ಯಾವಾಗಲೂ ಸಮ್ಮನಸ್ಸುಗಳ ಬುದ್ಧಿ ಮಾತಿಗೆ ಕಿವಿಕೊಡಬೇಕು, ಮತ್ತು ಅಪಾಯದಿಂದ ಕಾಪಾಡುವಹಾಗೆ ಅವರನ್ನು ಬೇಡಿಕೊಳ್ಳಬೇಕು. ದೇವರಿಗೆ ನಮ್ಮ ಮೇಲೆ ಪ್ರೀತಿಯಿರುವದರಿಂದ ನಮ್ಮನ್ನು ಕಾಪಾಡುವದಕ್ಕಾಗಿ ಪ್ರತಿ ಒಬ್ಬೊಬ್ಬನಿಗೆ ಒಬ್ಬೊಬ್ಬ ಕಾವಲಾದ ಸಮ್ಮನಸ್ಸನ್ನು ನೇಮಿಸಿರುತ್ತಾರೆ.

ಪಾಪವನ್ನು ಕಟ್ಟಿಕೊಳ್ಳುವಹಾಗೆ ಪಿಶಾಚಿಗಳು ನಮ್ಮನ್ನು ಶೋಧಿಸಬಹುದು, ಆದರೆ ದೇವರ ಸಹಾಯದಿಂದ ಈ ಶೋಧನೆಗಳನ್ನು ಜಯಿಸಬಹುದು. ನಾವು ಪಾಪಕ್ಕೆ ಹೇತುವೆಯಾದ ಶೋಧನೆಗಳಿಂದಲೂ, ಸಮಯಗಳಿಂದಲೂ ತೊಲಗಿ ಹೋಗಬೇಕು.

## ೩ ಶೃಂಗಾರ ತೋಪು. ಆದಾಮ ಮತ್ತು ಏವ

ಸರ್ವೇಶ್ವರನು ಆದಿ ಮನುಷ್ಯನನ್ನು ಆದಮ್ ಎಂತಕರೆದರು. ದೇವರು ಅವನನ್ನು ಪ್ರೀತಿಸಿದ್ದರಿಂದ ಅವನು ಜೀವಿಸುವದಕ್ಕಾಗಿ ಒಂದು ಸೌಂಧರ್ಯವಾದ ತೋಟವನ್ನು ನಿರ್ಮಿಸಿದರು. ಇದೇ ಶೃಂಗಾರ ತೋಪು. ಅಥವಾ ನಂದಾವನ. ಇದರಲ್ಲಿ ನಾನಾತರದ ಹಣ್ಣು, ಹೂವು, ಕಾಯಿ ಮೊದಲಾದವುಗಳನ್ನು ಕೊಡುವಂಥ ಅನೇಕ ಗಿಡಗಳನ್ನು ನಡಿಸಿದ್ದರು- ಯಾವಾಗಲೂ ಹರಿಯುವಂಥ ತಿಳಿ ನೀರಿನ ಒಂದು ನದಿಯನ್ನು ಉಂಟುಮಾ

ಡಿದ್ದರು. ಮತ್ತು ಎಲ್ಲಾ ಮೃಗಗಳನ್ನು, ಪಕ್ಷಿಗಳನ್ನು ತಂದು; ಆದಾಮನು ಮುಂದೆ ನಿಲ್ಲಿಸಿ ಅವುಗಳಿಗೆ ಹೆಸರುಗಳನ್ನು ಕೊಡುವ ಹಾಗೆ ಮಾಡಿದರು.

ಆಗ ತೋಟದ ಮಧ್ಯದಲ್ಲಿ ದೇವರು ಎರಡು ವೃಕ್ಷಗಳನ್ನು ನಡಿಸಿದ್ದರು, ಒಂದು ಚಿರಂಜೀವಿಯ ಮರವು, ಮತ್ತೊಂದು ಒಳ್ಳೇದನ್ನು ಕೇಡನ್ನು ತಿಳಿಸುವಂಥ ಮರವು. ದೇವರು ಆದಾಮನನ್ನು ಕರೆದು ಹೇಳಿದ್ದೇನಂದರೆ, "ನೀನು ಎಲ್ಲಾ ಮರದ ಫಲಗಳನ್ನು ಭಕ್ಷಿಸಬಹುದು. ಆದರೆ ಒಳ್ಳೇದನ್ನು ಕೆಡಕನ್ನು ತಿಳಿಸುವಮರದ ಹಣ್ಣನ್ನು ಮಾತ್ರ ತಿನ್ನಬಾರದು. ಅದನ್ನು ತಿಂದರೆ ತಪ್ಪದೇ ನೀನು ಸಾಯುವಿ."

ಸರ್ವೇಶ್ವರನು ತಮ್ಮ ಜ್ಞಾನದಿಂದ ಮನುಷ್ಯನಿಗೆ ಸ್ವತಂತ್ರತೆಯೆಂಬ ವರವನ್ನು ಕೊಡಬೇಕೆಂದು ಯೋಚಿಸಿದರು. ಇದೇ ಒಳ್ಳೇದನ್ನು ಕೆಟ್ಟದನ್ನು ತಿಳಕೊಳ್ಳುವದು. ಮನುಷ್ಯನು ಒಳ್ಳೇದನ್ನು ಮಾಡಿದರೆ ಮೋಕ್ಷದಲ್ಲಿ ನಿತ್ಯ ಸಂಭಾವನೆಯನ್ನು ಹೊಂದುವನು. ಆದರೆ ದೇವರ ಮಾತಿಗೆ ಕಿವಿಕೊಡದೆ ಕೆಟ್ಟದನ್ನು ಮಾಡಿದರೆ ಶಿಕ್ಷಿಸಲ್ಪಟ್ಟು ನರಕಕ್ಕೆ ಹೋಗುವನು. ಸರ್ವೇಶ್ವರನು ಒಳ್ಳೇಯವರು, ಆದರೆ ನೀತಿವಂತರಾಗಿಯೂ ಇರುತ್ತಾರೆ; ಒಳ್ಳೇಯವರನ್ನು ರಕ್ಷಿಸಿ ಕೆಟ್ಟವರನ್ನು ಶಿಕ್ಷಿಸುವರು.

ಆಗ ಸರ್ವೇಶ್ವರನು ಮನುಷ್ಯನು ಒಬ್ಬನೇ ಇರುವದು ಒಳ್ಳೇದಲ್ಲಾ, ಆತನಿಗೆ ಒಂದು ಜತೆ ಮಾಡುವದು ಒಳ್ಳೇದೆಂದು ನೆನಸಿದರು. ಆದ್ದರಿಂದ ದೇವರು ಆದಾಮನಿಗೆ ಗಾಢನಿದ್ರೆ ಹತ್ತುವಹಾಗೆ ಮಾಡಿ, ಆತನ ಪಕ್ಕೆಲುಬುಗಳಲ್ಲಿ ಒಂದನ್ನು ತೆಗೆದು, ಒಬ್ಬ ಸ್ತ್ರೀಯ ರೂಪವನ್ನು ಮಾಡಿದರು ಆದಾಮನು

ಎದ್ದ ಬಳಿಕ ದೇವರು ಈ ಸ್ತ್ರೀಯನ್ನು ಆತನಿಗೆ ಜತೆಯಾಗಿರಲು ಕೊಟ್ಟರು.

ಈಕೆಯು ಹೆಸರು ಏವ ಅಂದರೆ ಆದಿತಾಯಿ. ಆಗ ಆದಾಮನು ಅವಳನ್ನು ಕಂಡು "ಈಕೆ ನನ್ನ ಎಲುಬಿನ ಎಲುಬಾಗಿಯೂ ನನ್ನ ಮಾಂಸದ ಮಾಂಸವಾಗಿಯೂ ಇರುತ್ತಾಳೆ." ಎಂದನು.

ಈ ಪ್ರಕಾರವಾಗಿ ಸರ್ವೇಶ್ವರನು ನಂದಾವನದಲ್ಲಿ ಜ್ಞಾನ ವಿವಾಹವನ್ನು ಸ್ಥಾಪಿಸಿದರು. ಜೇಸುನಾಥರು ಈ ಲೋಕಕ್ಕೆ ಬಂದ ಮೇಲೆ ಈ ಜ್ಞಾನ ವಿವಾಹವನ್ನು ಒಂದುದೇವದ್ರವ್ಯ ಅನುಮಾನವಾಗಿ ನೇಮಿಸಿದರು. ತಾವೇ ಸ್ವತಃ ಗಲಿಲೇಯ ದೇಶದ ಕಾನನಗರದಲ್ಲಿಯಾದ ಮದುವೆಯನ್ನು ಗೌರವಿಸಿದರು.

ಆದಾಮನು, ಏವಳು ನಂದಾವನದಲ್ಲಿ ಬಹಳ ಸಂತೋಷದಿಂದ ಇದ್ದರು. ಚಿರಂಜೀವಿಯ ಮರವು ಅವರನ್ನು ಬೇನೆ, ವ್ಯಾಧಿಯಿಂದಲೂ, ಮರಣದಿಂದಲೂ ಕಾಪಾಡುತ್ತಿತ್ತು. ಚಿರಂಜೀವಿಯ ಮರವು ದಿವ್ಯ ಸತ್ಪ್ರಸಾದಕ್ಕೆ ಗುರುತಾಗಿದೆ, ಯಾಕಂದರೆ "ಯಾರು ಅದನ್ನು ಭಕ್ಷಿಸುವರೋ ನಿತ್ಯ ಕಾಲ ಜೀವಿಸುವರೆಂದು ಬರೆಯಲ್ಪಟ್ಟದೆ."

## 4 ಮನುಷ್ಯನು ಕಟ್ಟಿಕೊಂಡ ಮೊದಲನೇ ಪಾಪವು

ನಂದಾವನದಲ್ಲಿ ಆದಮ ಮತ್ತು ಏವಳು ಆಶಿಸಿದಂಥ ಎಲ್ಲಾ ವಸ್ತುಗಳು ಇರುತ್ತಿದ್ದವು. ಅವರಿಗೆ ದುಃಖವು, ನೋವು

ಮತ್ತು ಯಾವ ಕೊರತೆಯು ಇರುತ್ತಿದ್ದಿಲ್ಲ. ಅವರು ಸರ್ವೇಶ್ವರನ ಕಟ್ಟಳೆಪ್ರಕಾರ ನಡೆದರೆ ಎಂದೂ ಸಾಯಲಿಕ್ಕಿಲ್ಲವೆಂದು ಸರ್ವೇಶ್ವರನು ಗಟ್ಟಿಯಾಗಿ ತೀರ್ಮಾನಿಸಿದ್ದರು. ಆದರೆ ಸೈತಾನನು ಅವರ ಮೇಲೆ ಹೊಟ್ಟೆಕಿಚ್ಚುಪಟ್ಟು ಅವರನ್ನು ಕೆಡಿಸಲು ಎಣಿಸಿದನು, ಅವರು ದೇವರಿಗೆ ಅವಿಧೇಯರಾಗುವ ಹಾಗೆ ಮಾಡಿದನು. ಆದ್ದರಿಂದ ಸರ್ಪದ ರೂಪವನ್ನು ತಕ್ಕೊಂಡನು.

ಒಂದು ದಿನ ಏವಳು ಒಳ್ಳೇದನ್ನು ಕೆಟ್ಟದ್ದನ್ನು ತಿಳಿಸುವ ಮರದ ಹತ್ತರವಿರುತ್ತಿದ್ದಳು. ಸೈತಾನನು ಹಾವಿನ ರೂಪದಲ್ಲಿ ಬಂದು ಹೀಗೆ ಕೇಳಿದನು, "ಯಾಕೆ ದೇವರು ನಿಮಗೆ ನಂದಾವನದಲ್ಲಿರುವ ಎಲ್ಲಾ ಮರಗಳ ಹಣ್ಣುಗಳನ್ನು ತಿನ್ನಬಾರದೆಂದು ಆಜ್ಞಾಪಿಸಿರುತ್ತಾರೆ?" ಎಂದನು.

ಅದಕ್ಕೆ ಅವಳು, ನಂದಾ ವನದಲ್ಲಿರುವ ಎಲ್ಲಾ ಮರಗಳ ಹಣ್ಣುಗಳನ್ನು ನಾವು ಭಕ್ಷಿಸುತ್ತೇವೆ. ಆದರೆ ಈ ವನದ ಮಧ್ಯದಲ್ಲಿರುವ ಮರದ ಹಣ್ಣನ್ನು ಮಾತ್ರ ಮುಟ್ಟಬಾರದೆಂದೂ, ತಿನ್ನಬಾರದೆಂದು ದೇವರು ನಮಗೆ ಹೇಳಿದ್ದಾರೆ. ಒಂದು ವೇಳೆ ತಿಂದರೆ ಸಾಯುವೆವು.

ಆದರೆ ಸೈತಾನನು, ಏವಳನ್ನು ಶೋಧಿಸುತ್ತ ಹೇಳಿದ್ದೇನಂದರೆ "ಇಲ್ಲ ನೀವು ಸಾಯುವದಿಲ್ಲ. ನೀವು ಈ ಹಣ್ಣನ್ನು ತಿಂದ ದಿವಸವೆ,ನಿಮ್ಮ ಕಣ್ಣುಗಳು ತೆರೆಯಲ್ಪಟ್ಟು, ನೀವು ಸಹ ದೇವರ ಹಾಗೆಯೇ ಒಳ್ಳೇದನ್ನು ಕೆಟ್ಟದ್ದನ್ನು ತಿಳಕೊಳ್ಳುವಿರಿ ಎಂದು ದೇವರಿಗೆ ಗೊತ್ತಿದೆ"

ಏವಳು ಕೂಡಲೇ ಈ ಹೊಸ ಶೋಧನೆಯಿಂದ ಓಡಿ ಹೋಗಬೇಕಾಗಿತ್ತು, ಆದರೆ ಆಕೆ ಹಾಗೆ ಓಡಿ ಹೋಗಲಿಲ್ಲ,

ಮತ್ತು ಸೈತಾನನ ಮಾತನ್ನು ಕೇಳಿದಳು ಆದ್ದರಿಂದ ಪಾಪದಲ್ಲಿ ಬೀಳಲು ಕಾರಣವಾದಳು. ಆಕೆಯು ಗಿಡವನ್ನು, ಹಣ್ಣನ್ನು ನೋಡಿದಳು. ತಾನು ಸಹ ದೇವರ ಹಾಗೆ ಆಗಬೇಕೆಂದು ನೆನಿಸಿದಳು.

ನಾವು ಪಾಪವನ್ನು ಕಟ್ಟಿಕೊಳ್ಳಲು ಆಶಿಸದಿದ್ದರೆ, ಪಾಪಕ್ಕೆ ಹೇತುವೆಯಾದ ಸಮಯವನ್ನು ಸಹ ಕೂಡಲೇ ಬಿಟ್ಟುಬಿಡಬೇಕು. ಕಡೆಗೆ, ಏವಳಿಗೆ ಹಣ್ಣನ್ನು ತಿಂದರೆ ದೇವರ ಕಟ್ಟಳೆಯನ್ನು ಮೀರುವಳೆಂದು ಗೊತ್ತಿದ್ದರೂ, ಆ ಹಣ್ಣನ್ನು ತಿನ್ನಲು ಆಶಿಸಿದಳು. ಒಂದು ಹಣ್ಣನ್ನು ಕಿತ್ತು ತಿಂದಳು. ಮತ್ತು ಆದಾಮನಿಗೆ ಸಹ ಸ್ವಲ್ಪ ಕೊಟ್ಟಳು. ಹೀಗೆ ಇವರು ಗೊತ್ತಿದ್ದರೂ, ಮನಸ್ಸೊಪ್ಪಿ ದೇವರ ಕಟ್ಟಳೆಯನ್ನು ಮೀರಿ ಪಾಪದಲ್ಲಿ ಬಿದ್ದರು.

ಈ ಹಣ್ಣನ್ನು ತಿಂದಕೂಡಲೇ ತಾವು ಕಟ್ಟಿಕೊಂಡ ಪಾಪವು ಎಷ್ಟು ಅಸಹ್ಯವಾದದ್ದೆಂದು ತಿಳಕೊಂಡರು. ಭಯದಿಂದಲೂ ನಾಚಿಕೆಯಿಂದಲೂ ತುಂಬಿದವರಾದರು. ತಮ್ಮ ಬತ್ತಲೆಯನ್ನು ಮುಚ್ಚಿಕೊಳ್ಳುವದಕ್ಕಾಗಿ ಅಂಜೂರ ಮರದ ಎಲೆಗಳನ್ನು ಹರೆದು ಬಟ್ಟೆಯಾಗಿ ಮುಚ್ಚಿಕೊಂಡರು. ಸರ್ವೇಶ್ವರನು ತೋಟದಲ್ಲಿ ಬಂದ ಶಬ್ದವನ್ನು ಕೇಳಿ, ತಮ್ಮನ್ನು ಆವರು ನೋಡದ ಹಾಗೆ ಮರದಹಿಂದೆ ಅಡಗಿಕೊಳ್ಳಲು ಓಡಿಹೋದರು.

ಈ ಪಾಪದಿಂದ ನಮ್ಮ ಆದಿ ತಂದೆ ತಾಯಿಯವರು ದೇವರ ವರಪ್ರಸಾದವನ್ನು ಹೋಗಲಾಡಿಸಿಕೊಂಡರು. ಆಗ್ಗಿನಿಂದ ಅವರ ಎಲ್ಲಾ ಮಕ್ಕಳು ಸಹ ಹುಟ್ಟಿದಾಗ ವರಪ್ರಸಾದವಿಲ್ಲದೆ ಹುಟ್ಟುವದಲ್ಲದೆ, ಜನ್ಮ ಪಾಪದೊಂದಿಗೆ ಹುಟ್ಟುತ್ತಾರೆ.

ಈ ಜನ್ಮ ಪಾಪವು ಜ್ಞಾನ ಸ್ನಾನದಿಂದ ಹೋಗಲಾಡಿಸಲ್ಪಡುತ್ತದೆ.

## 5 ಅವಿಧೇಯತೆಗೆ ಬಂದ ಶಿಕ್ಷೆ

ನಂದಾವನದಲ್ಲಿ ದೇವರು ಆದಾಮನನ್ನು ಕರೆದು "ಎಲ್ಲಿ ಇರುತ್ತಿ"? ಎಂದರು. ಆದಾಮನು ಅಡಗಿಕೊಂಡಿದ್ದ ಸ್ಥಳವನ್ನು ಬಿಟ್ಟು ಮುಂದೆ ಬಂದು, "ನಾನು ನಿಮ್ಮ ಸ್ವರವನ್ನು ನಂದಾವನದಲ್ಲಿ ಕೇಳಿ, ಭಯಪಟ್ಟು ಅಪಿತುಕೊಂಡೆನು" ಎಂದು ಹೇಳಿದನು.

ಆಗ ಸರ್ವೇಶ್ವರನು, ಆದಾಮನನ್ನು ನೋಡಿ "ನಾವು ತಿನ್ನ ಬಾರದೆಂದು ಹೇಳಿದ ಹಣ್ಣನ್ನು ಯಾಕೆ ತಿಂದೆ?" ಎಂದು ಕೇಳಿದರು. ಆದಕ್ಕೆ ಆದಾಮನು ತಪ್ಪಿಸಿಕೊಳ್ಳಬೇಕೆಂದು, "ನೀವು ನನಗೆ ಜತೆಯಾಗಿ ಕೊಟ್ಟಂಥಾ ಹೆಣ್ಣುಮಗಳು, ನನಗೆ ತಿನ್ನಲಿಕ್ಕೆ ಕೊಟ್ಟಳು. ನಾನು ತಿಂದೆನು" ಎಂದು ನೆವ ಹೇಳಿದನು.

ದೇವರು ಏವಳ ಕಡೆಗೆ ತಿರುಗಿ "ಯಾಕೆ ಹೀಗೆಮಾಡಿದ?" ಎಂದು ಕೇಳಿದರು.

ಏವಳು ಪ್ರತ್ಯುತ್ತರವಾಗಿ "ಹಾವು ನನಗೆ ಮೋಸ ಮಾಡಿತು, ಆದ್ದರಿಂದ ನಾನು ತಿಂದೆನು." ಎಂದಳು. ಆಗ ಸರ್ವೇಶ್ವರನು ಹಾವಿಗೆ ಹೇಳಿದ್ದೇನಂದರೆ "ನೀನು ಈ ಕೆಲಸವನ್ನು ಮಾಡಿದ್ದರಿಂದ, ಭೂಮಿಯ ಮೇಲೆ ಜೀವಿಸುವ ಎಲ್ಲಾ ಮೃಗಗಳಲ್ಲಿಯೂ ಜಂತುಗಳಲ್ಲಿಯೂ ಶಪಿಸಲ್ಪಟ್ಟಿರುವಿ ಮತ್ತು ನಿನ್ನ ಜೀವವಿರುವ ತನಕ ಹೊಟ್ಟೆಯಮೇಲೆ ಹರಿದು ಮಣ್ಣು ತಿಂದು ಬದುಕಬೇಕೆ"ಂದು ಕಟ್ಟಳೆ ಮಾಡಿದರು. ಮತ್ತು ಹೇಳಿ

ದ್ದೇನಂದರೆ, "ಸ್ತ್ರೀಗೂ ಅವಳ ಸಂತತಿಗೂ, ನಿನಗೂ ನಿನ್ನ ಸಂತತಿಗೂ, ವಿರೋಧವಿಡುವೆವು. ಅವಳು ನಿನ್ನ ತಲೆಯನ್ನು ಜಜ್ಜುವಳು." ಈ ವಾಕ್ಯಗಳಲ್ಲಿ ಸರ್ವೇಶ್ವರನು ಪಿಶಾಚಿಯಿಂದ ಮನುಷ್ಯರನ್ನು ರಕ್ಷಿಸಲು ಬರುವ ಲೋಕ ರಕ್ಷಕರನ್ನು ಕುರಿತು ದೀರ್ಘ ದರ್ಶನವನ್ನು ಹೇಳಿದರು. ಈ ಲೋಕ ರಕ್ಷಕರು ಕನ್ಯ ಮರಿಯಮ್ಮನವರಲ್ಲಿ ಹುಟ್ಟುವರು.

ಸರ್ವೇಶ್ವರನು ಏವಳಿಗೆ ಹೇಳಿದ್ದೇನಂದರೆ ನೀನು ನಿನ್ನ ಅವಿಧೇಯತೆಗಾಗಿ ಮಕ್ಕಳನ್ನು ಕಷ್ಟದಿಂದ ಹೆರುವಿ. ಮತ್ತು ನೀನು ಯಾವಾಗಲೂ ನಿನ್ನ ಗಂಡನ ಆಧೀನದಲ್ಲಿರಬೇಕು. ಆದಾಮನನ್ನು ನೋಡಿ ಹೇಳಿದ್ದೇನಂದರೆ "ನಿನ್ನ ಕೆಲಸದಲ್ಲಿ ಭೂಮಿ ಶಪಿಸಲ್ಪಟ್ಟಿರುವದಾಗಲಿ; ನಿನ್ನ ಜೀವದ ಕಾಲವೆಲ್ಲಾ ಪ್ರಯಾಸದಿಂದ ಅದರ ಫಲವನ್ನು ಭಕ್ಷಿಸುವಿ; ಅದು ನಿನಗೆ ಮುಳ್ಳುಗಳನ್ನೂ, ಕಳೆಗಳನ್ನೂ ಕೊಡುವದು; ನೀನು ತೆಗೆಯಲ್ಪಟ್ಟ ಭೂಮಿಯೊಳಗೆ ತಿರುಗಿ ಹೋಗುವವರೆಗೂ ನಿನ್ನ ಹಣೆ ಬೆವರಿನಿಂದ ಆಹಾರವನ್ನು ತಿನ್ನುವಿ. ಯಾಕಂದರೆ ಮಣ್ಣಾಗಿದ್ದೀ, ತಿರುಗಿ ಮಣ್ಣಾಗಿ ಹೋಗುವಿ.

ತರುವಾಯ ಸರ್ವೇಶ್ವರನು ಆದಿ ತಂದೆತಾಯಿಯವರಿಗೆ ಉಡಲು ತೊಗಲಿನ ವಸ್ತ್ರಗಳನ್ನು ಕೊಟ್ಟು, ಅವರನ್ನು ಶೃಂಗಾರ ತೋಪಿನಿಂದ ಹೊರಗೆ ಹಾಕಿದರು. ಮತ್ತು ಅವರು ತಿರುಗಿ ಅದರೊಳಗೆ ಬಾರದ ಹಾಗೆ ಅಲ್ಲಿ ಕಾವಲಾಗಿರುವದಕ್ಕೆ ಅಗ್ನಿಯ ಕತ್ತಿಯನ್ನು ಹಿಡಿದ ಒಬ್ಬ ಸಮ್ಮನಸ್ಸನ್ನು ಬಾಗಿಲ ಮುಂದೆ ನಿಲ್ಲಿಸಿದರು.

ಯಾಕಂದರೆ ತಮ್ಮ ಅವಿಧೇಯತೆಯಿಂದ ನಮ್ಮ ಆದಿ ತಂದೆ ತಾಯಿಯವರು ನಂದಾವನದಿಂದ ಕಷ್ಟವಾದಂಥ ಲೋಕಕ್ಕೆ ತಳ್ಳಲ್ಪಟ್ಟರು. ಈಗ ನಾವು ಈ ಲೋಕದಲ್ಲಿ ಅನುಭವಿಸುವ ಎಲ್ಲಾ ಕಷ್ಟಗಳು ನಮ್ಮ ಆದಿ ತಂದೆ ತಾಯಿಯವರು ಮಾಡಿದ ಪಾಪಗಳಿಗೂ ನಾವು ಮಾಡಿದ ಪಾಪಗಳಿಗೂ ಫಲವಾಗಿರುತ್ತದೆ. ಈ ಕಷ್ಟಗಳು ದೇವರ ಮಾತನ್ನು ಮೀರಿದ್ದಕ್ಕೆ ಶಿಕ್ಷೆಯಾಗಿರುತ್ತದೆ.

## 6 ಕೈನನು ಮತ್ತು ಅಬೇಲನು

ಆದಾಮ ಏವಳಿಗೆ, ಕೈನನು ಮತ್ತು ಆಬೇಲರೆಂಬ ಇಬ್ಬರು ಮೊದಲನೇ ಮಕ್ಕಳು ಹುಟ್ಟಿದರು. ಕೈನನು ವ್ಯವಸಾಯದಾರನಾದನು. ಆಬೇಲನು ಕುರಿಗಳನ್ನು ಕಾಯುತ್ತಿದ್ದನು. ಕೈನನು ಹೊಟ್ಟೆಕಿಚ್ಚಿನವನು ಕ್ರೂರನು ಆಗಿದ್ದನು; ಆಬೇಲನು ಸಾತ್ವಿಕನು, ದಯವುಳ್ಳವನು ಆಗಿದನು.

ಒಂದು ದಿವಸ ಕೈನನು ಮತ್ತು ಆಬೇಲನು ಸರ್ವೇಶ್ವರನಿಗೆ ಬಲಿಯನ್ನು ಅರ್ಪಿಸಿದರು. ಕೈನನು ತಾನು ಬೆಳಸಿದ ಹಣ್ಣುಗಳನ್ನು ಧಾನ್ಯಗಳನ್ನು ಒಪ್ಪಿಸಿದನು. ಆಬೇಲನು ತನ್ನ ಕುರಿ ಹಿಂಡಿನಿಂದ ಕೆಲವು ಸಣ್ಣ ಮರಿಗಳನ್ನು ಒಪ್ಪಿಸಿದನು.

ಸರ್ವೇಶ್ವರನು ಕೈನನ ಅಶುದ್ಧವಾದ ಹೃದಯವನ್ನು ಕಂಡು ಆತನ ಕಾಣಿಕೆಯನ್ನು ತಿರಸ್ಕರಿಸಿದರು. ಆದರೆ ಆಬೇಲನ ಹೃದಯವನ್ನು ನೋಡಿದಾಗ, ಆತನ ಹೃದಯವು ಒಳ್ಳೇದಾಗಿತ್ತು. ಆದ್ದರಿಂದ ಸರ್ವೇಶ್ವರನು ಆಬೇಲನ ಬಲಿಯನ್ನು ಸ್ವೀಕರಿಸಿದರು. ಇದು ಕೈನನಿಗೆ ಮೊದಲಿಗಿಂತಲೂ ಹೆಚ್ಚು ಹೊಟ್ಟೆಕಿಚ್ಚುಪಡಲು ಕಾರಣವಾಯ್ತು. ಅದಕ್ಕಾಗಿ ಅವನು ಆಬೇಲನನ್ನು ಕೊಲ್ಲಲು ನಿಶ್ಚೈಸಿದನು.

ಕೆಲವು ದಿವಸಗಳಾದಮೇಲೆ ಕೈನನು ಆಬೇಲನನ್ನು ತನ್ನ ಸಂಗಡ ಹೊಲಕ್ಕೆ ಕರೆದುಕೊಂಡು ಹೋದನು. ಸ್ವಲ್ಪ ದೂರ ನಡೆದು ಹೋದಬಳಿಕ, ಅಲ್ಲಿ ಬೇರೆ ಯಾವ ಮನುಷ್ಯರೂ ಇಲ್ಲದ್ದರಿಂದ ಕೈನನು ಆಬೇಲನನ್ನು ತಿವಿದು ಗುದ್ದಿ ಕೊಂದು ಹಾಕಿದನು.

ಸರ್ವೇಶ್ವರನು ಕೈನನು ಮಾಡಿದ ಎಲ್ಲಾ ದುಷ್ಟ ಕೃತ್ಯಗಳನ್ನು ನೋಡಿ "ನಿನ್ನ ತಮ್ಮನಾದ ಆಬೇಲನು ಎಲ್ಲಿ ಇರುವನು"? ಎಂದು ಕೇಳಿದರು.

ಕೈನನೋ ಎಂದರೆ ತನ್ನ ಪಾಪಗಳನ್ನು ದೇವರಿಂದ ಮುಚ್ಚಲು ಪ್ರಯತ್ನ ಮಾಡಿ ಹೇಳಿದ್ದೇನಂದರೆ, "ಅದು ನನಗೆ ಗೊತ್ತಿಲ್ಲ ನಾನು ನನ್ನ ತಮ್ಮನಿಗೆ ಕಾವಲುಗಾರನೇನು?" ಎಂದನು.

ಸರ್ವೇಶ್ವರನು ಅವನನ್ನು ಶಪಿಸಿ ಹೇಳಿದ್ದೇನಂದರೆ, "ನೀನು ಏನು ಮಾಡಿದಿ? ನಿನ್ನ ತಮ್ಮನ ರಕ್ತವು ನನ್ನ ಸನ್ನಿಧಿವರೆಗೂ ಕೂಗುತ್ತಿದೆ. ನೀನು ನಿನ್ನ ತಮ್ಮನನ್ನು ಅನ್ಯಾಯವಾಗಿ ಕೊಂದದ್ದರಿಂದ ಈ ಲೋಕದಲ್ಲಿ ನೀನು ಶಪಿಸಲ್ಪಟ್ಟಿರುವಿ. ನೀನು ಭೂಮಿಯನ್ನು ಉತ್ತರೂ, ಅದು ನಿನಗೆ ಫಲವನ್ನು ಕೊಡಲಿಕ್ಕಿಲ್ಲ. ನೀನು ಲೋಕದ ಮೇಲೆ ಒಬ್ಬ ಹುಚ್ಚನ ಹಾಗೆ ಇರುವಿಯಾಗಲಿ ಎಂದರು."

ಇಂಥ ದೇವ ಶಾಪವನ್ನು ಕೇಳಿದ ಕೂಡಲೇ ಕೈನನು ಭಯ ಭ್ರಾಂತನಾಗಿ, "ಮಹಾ ಸ್ವಾಮಿ ನನ್ನ ಪಾತಕವು ಮಹಾ ಘೋರವಾದ ಪಾತಕವು, ಕ್ಷಮಿಸಲಾಗದಂಥ ಪಾತಕವು!

ನಾನು ನಿನ್ನಿಂದ ದೂರ ಹೋಗಬೇಕು. ಹುಚ್ಚನೆಂದು ನನ್ನನ್ನು ಕಂಡವರೆಲ್ಲರೂ ಕೊಲ್ಲುವರಲ್ಲ ಎಂದು ಪರಿತಾಪಿಸಿದನು.

ಆದರೆ ಸರ್ವೇಶ್ವರನು ಹೇಳಿದ್ದೇನಂದರೆ, "ಇಲ್ಲ ಇಲ್ಲ ಕೈನನ್ನು ಕೊಂದವರು ಏಳುಸಾರಿ ಶಿಕ್ಷಿಸಲ್ಪಡುವರು. ಮತ್ತು ಸರ್ವೇಶ್ವರನು ಕೈನನ್ನು ಯಾರೂ ಕೊಲ್ಲನಂತೆ ಅವನ ಹಣೆಯ ಮೇಲೆ ಒಂದು ವಿಕಾರ ಗುರ್ತನ್ನು ಮಾಡಿದರು. ಕೈನನು ತನ್ನ ಪಾಪಕ್ಕಾಗಿ ಬಾಧೆಯನ್ನು ಅನುಭವಿಸುತ್ತ ಲೋಕದಲ್ಲೆಲ್ಲಾ ತಿರುಗುತ್ತ ಹೋದನು. ಆತನ ಮಕ್ಕಳು ಸಹ ತಮ್ಮ ತಂದೆಯ ಪಾಪಕ್ಕಾಗಿ ಬಾಧೆಯನ್ನು ಅನುಭವಿಸಿದರು.

ನಾವು ಕೈನನ ಹಾಗೆ ನಮ್ಮ ಪಾಪಗಳನ್ನು ದೇವರಿಂದ ಮುಚ್ಚಿಡಲು ಪ್ರಯತ್ನಿಸಬಾರದು. ಒಂದುವೇಳೆ ನಾವು ಪಾಪ ದಲ್ಲಿ ಬಿದ್ದರೆ, ಕೂಡಲೇ ನಮ್ಮ ಪಾಪಕ್ಕಾಗಿ ದುಃಖಪಟ್ಟು, ಪಾಪ ಸಂಕೀರ್ತನೆ ಮಾಡಿ ಇನ್ನು ಮೇಲೆ ಪಾಪವನ್ನು ಮಾಡು ವದಿಲ್ಲವೆಂದು ಘಟ್ಟಿ ಪ್ರತಿಜ್ಞೆ ಮಾಡಬೇಕು.

## 7 ನೋವೆಯೆಂಬವರನ್ನು ಕುರಿತು

ಕೈನನು ಆಬೇಲನನ್ನು ಕೊಂದ ಸಂಗತಿಯನ್ನು ಆದಿ ತಂದೆತಾಯಿಯವರು ಕೇಳಿ ಬಹಳ ದುಃಖಪಟ್ಟರು. ಸರ್ವೇ ಶ್ವರನು ಇವರ ಮೇಲೆ ಕನಿಕರ ಪಟ್ಟು ಮೂರನೇ ಮಗನನ್ನು ಕೊಟ್ಟರು. ಇವನನ್ನು ಸೇತನೆಂದು ಕರೆಯುತ್ತಿದ್ದರು. ಇವನು ಸದ್ಗುಣವುಳ್ಳವನಾಗಿದ್ದನು.

ಸೇಥನ ಮಕ್ಕಳು ಸರ್ವೇಶ್ವರನನ್ನು ಆರಾಧಿಸುತ್ತಾ ದೇವರ ಕಟ್ಟಳೆಗಳ ಪ್ರಕಾರ ನಡೆಯುತ್ತಾ ಬಂದರು. ಇವರು

ತಮ್ಮ ಸುಮಾತೃಕೆಯಿಂದ ದೇವ ಪುತ್ರರೆಂದು ಕರೆಯಲ್ಪಟ್ಟರು.

ಕೈನನ ಮಕ್ಕಳು ದುಷ್ಟತನದಲ್ಲಿ ಬೆಳೆದು ದುಷ್ಟರಾಗಿದ್ದರು. ಇವರು ಸರ್ವೇಶ್ವರನನ್ನು ಕಾಣದೆ, ಅವರಿಗೆ ಸೇವೆಯನ್ನು ಸಹ ಮಾಡಲು ಆಶಿಸಲಿಲ್ಲ. ಹೀಗೆ ಕೆಲವು ದಿವಸಗಳು ಆದನಂತರ ಕೈನನ ಮಕ್ಕಳು ದೇವಪುತ್ರರೊಡನೆ ವಿವಾಹ ಮಾಡಿಕೊಂಡರು. ಈ ತಂದೆತಾಯಿಗಳಿಗೆ ಹುಟ್ಟಿದ ಮಕ್ಕಳು ಸಹ ದುಷ್ಟರಾಗಿದ್ದರು. ಕಡೆಗೆ ಲೋಕದ ಮೇಲೆ ಇದ್ದ ಎಲ್ಲಾ ಜನರು ಸಹ ಕ್ರಮೇಣ ಕೆಟ್ಟುಹೋದರು. ಯಾಕಂದರೆ ಇವರೆಲ್ಲರೂ ಕೈನನ ಮಕ್ಕಳಾಗಿದ್ದರು.

ಸರ್ವೇಶ್ವರನು, ಮನುಷ್ಯರೆಲ್ಲರು ತಮ್ಮನ್ನು ಅವಿಧೇಯಿಸಿ, ಮರೆತು ಹೋಗುವದನ್ನು ಕಂಡು ಬಹಳ ದುಃಖಪಟ್ಟು ಹೇಳಿದ್ದೇನಂದರೆ, "ಮನುಷ್ಯರನ್ನು ಸೃಷ್ಟಿಸಿದಕ್ಕಾಗಿ ನಾವು ಬಹಳ ವ್ಯಸನಪಡುತ್ತೇವೆ. ಯಾಕಂದರೆ ಈಗ ಮನುಷ್ಯರೆಲ್ಲ ಪಾಪದಲ್ಲಿ ಮುಳುಗಿ ಹೋಗಿದ್ದಾರೆ. ನಾವು ಅವರೆಲ್ಲರನ್ನೂ ನಾಶನ ಮಾಡಿ ಭೂಮಿಯ ಮೇಲೆ ಯಾವ ವಸ್ತುವು ಸಹ ಇಲ್ಲದ ಹಾಗೆ ಮಾಡುತ್ತೇವೆ" ಎಂದರು. ಈ ದುಷ್ಟ ಮನುಷ್ಯರಲ್ಲಿ ನೋವೆಯೆಂಬ ಒಬ್ಬ ಒಳ್ಳೇ ಪುಣ್ಯಾತ್ಮನಿದ್ದನು. ಈತನು ಸರ್ವೇಶ್ವರನನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಆದ್ದರಿಂದ ಸರ್ವೇಶ್ವರನು ಆತನಿಗೆ ಅಂದದ್ದೇನಂದರೆ, "ಮನುಷ್ಯರೆಲ್ಲರೂ ನಮ್ಮನ್ನು ಮರೆತು ಪಾಪದಲ್ಲಿ ಮುಳುಗಿ ಹೋಗಿದ್ದಾರೆ; ನಾವು ಸೃಷ್ಟಿಸಿದಂಥ ಈ ಲೋಕವನ್ನು ಕೆಡಿಸುತ್ತಿದ್ದಾರೆ. ಇನ್ನೂ ಅವರು ನಮ್ಮ ಮಾತನ್ನು ಕೇಳದೆ ನಮ್ಮ ಆಜ್ಞೆಗಳನ್ನು ಮೀರುತ್ತಿದ್ದಾರೆ. ಆದ್ದರಿಂದ ನಾವು ಅವರನ್ನು ನಾಶನ ಮಾಡುತ್ತೇವೆ.

ನಾಲ್ವತ್ತು ದಿವಸಗಳ ವರೆಗೆ ಮಳೆಯನ್ನು ಕಳುಹಿಸುವೆವು. ಈ ಜಲಪ್ರಳಯವು ಪಾಪವನ್ನು ನಿಲ್ಲಿಸಿ, ಭೂಲೋಕವನ್ನು ಶುದ್ಧೀಕರಿಸುವದು. ನೀನು ನಮ್ಮ ಕಟ್ಟಳೆಪ್ರಕಾರ ನಡೆದು ನಮ್ಮನ್ನು ಗೌರವಿಸುವದರಿಂದ ನಿನ್ನನ್ನು ಕಾಪಾಡುತ್ತೇವೆ. ಆದ್ದರಿಂದ ನೀನು ಹೋಗಿ ಪೆಟ್ಟಿಗೆಯ ರೂಪವಾಗಿ ಒಂದು ದೊಡ್ಡ ಹಡಗವನ್ನು ಮಾಡು. ಅದು ಮುಗಿದ ಕೂಡಲೇ, ನಿನ್ನ ಹೆಂಡತಿಯನ್ನು, ನಿನ್ನ ಮಕ್ಕಳನ್ನು, ಅವರ ಹೆಂಡತಿಯರನ್ನು ಕರಕೊಂಡು ಹಡಗದೊಳಗೆ ಪ್ರವೇಶಿಸು" ಎಂದರು.

ನೋವೆಯೆಂಬವರು ಸರ್ವೇಶ್ವರನ ಕಟ್ಟಳೆ ಪ್ರಕಾರ ಹಡಗವನ್ನು ಮಾಡಿದರು. ಅದರೊಳಗೆ ಅನೇಕ ಕೋಣೆಗಳಿದ್ದವು. ಅದು ಮೂರು ಅಂತಸ್ತಾಗಿ ಕಟ್ಟಲ್ಪಟ್ಟಿತ್ತು. ಇದನ್ನು ಮುಗಿಸಲು ನೋವೆಂಬವರಿಗೆ ಸುಮಾರು ನೂರು ವರ್ಷಗಳು ಹಿಡಿದವು. ಇದು ಮುಗಿದ ಮೇಲೆ ನೋವೆಂಬವರು ಸರ್ವೇಶ್ವರನ ಕಟ್ಟಳೆ ಪ್ರಕಾರ, ಸಕಲ ಪ್ರಾಣಿಗಳಲ್ಲಿ ಶುದ್ಧವಾದ ಜಾತಿಯಲ್ಲಿ ಗಂಡು ಹೆಣ್ಣುಗಳಾದ ಏಳೇಳು ಜತೆಗಳನ್ನೂ ಅಶುದ್ಧವಾದ ಜಾತಿಯಲ್ಲಿ ಎರಡೆರಡು ಜತೆಗಳನ್ನೂ, ಅವುಗಳಿಗೆ ಬೇಕಾದ ಆಹಾರವನ್ನೂ ತೆಗೆದುಕೊಂಡು ತನ್ನ ಕುಟುಂಬ ಸಮೇತನಾಗಿ ಹಡಗವನ್ನು ಪ್ರವೇಶಿಸಿ, ಬಾಗಿಲನ್ನು ಮುಚ್ಚಿಕೊಂಡರು.

ಸರ್ವೇಶ್ವರನು ಇಷ್ಟು ಭಯಂಕರವಾದ ಶಿಕ್ಷೆಯನ್ನು ಕಳುಹಿಸಬೇಕಾದರೆ ಪಾಪವೆಂಬುದು ಎಷ್ಟು ಭಯಂಕರವಾಗಿರಬೇಕು?

## 8 ಜಲಪ್ರಳಯವು

ನೋವೆಂಬವರು ಹಡಗದ ಬಾಗಿಲವನ್ನು ಮುಚ್ಚಿದ

ಕೂಡಲೇ, ಸರ್ವೇಶ್ವರನು ಭಯಂಕರವಾದ ಮಳೆಯನ್ನು ಕಳಿಸಿದನು. ಇದು ನಾಲ್ವತ್ತು ಹಗಲು ನಾಲ್ವತ್ತು ರಾತ್ರಿಗಳ ವರೆಗೆ ಬಿಡದೆ ಒಂದೇಸವನಾಗಿ ಸುರಿಯಿತು.

ನೀರು ಮೇಲಕ್ಕೇರುತ್ತ, ಮೇಲಕ್ಕೇರುತ್ತ ಎಲ್ಲಾ ಸರ್ವತಗಳನ್ನೂ ದಿಣ್ಣೆಗಳನ್ನೂ ಮುಚ್ಚಿದವು. ನೋವೆಂಬವರು, ಅವರ ಕೂಡ ಹಡಗದಲ್ಲಿದ್ದವರು ಬಿಟ್ಟು ಲೋಕದ ಮೇಲೆ ಇದ್ದ ಎಲ್ಲಾ ಜೀವರಾಶಿಗಳು ನೀರಿನಲ್ಲಿ ಸಿಕ್ಕು ಮುಳುಗಿ ನಾಶವಾದರು. ನಾಲ್ವತ್ತು ದಿವಸಗಳಾದನಂತರ ಮಳೆಯು ನಿಂತಿತು. ಆದರೆ ನೀರು ಭೂಮಿಯಮೇಲೆ ಒಂದು ನೂರು ಐವತ್ತು ದಿವಸಗಳವರೆಗೆ ನಿಂತಿತ್ತು. ಕಡೆಗೆ ಒಂದು ದೊಡ್ಡ ಗಾಳಿಯು ಬೀಸಲು ಜಲವು ಕಡಿಮೆಯಾಗಿ, ಭೂಮಿ ಒಣಗಲಾರಂಭಿಸಿದಾಗ ಹಡಗವು ಒಂದು ಸರ್ವತದ ಮೇಲೆ ನಿಂತಿತು.

ನೋವೆಂಬವರು ನಾಲ್ವತ್ತು ದಿವಸಗಳ ವರೆಗೆ ತಡೆದು, ಹಡಗದ ಒಂದು ಗವಾಕ್ಷಿಯನ್ನು ತೆರೆದು, ಒಂದು ಕಾಗೆಯನ್ನು ಹೊರಗೆ ಬಿಟ್ಟರು. ಅದು ನೀರಿನ ಮೇಲೆ ಆಚೆ ಈಚೆ ತಿರುಗುತ್ತಾ ಹಿಂತಿರುಗಿ ಬರಲಿಲ್ಲ. ಆದ್ದರಿಂದ ಒಂದು ಪಾರಿವಾಳವನ್ನು ಬಿಟ್ಟರು. ಅದು ಭೂಮಿಯ ಮೇಲೆ ನಿಲ್ಲುವದಕ್ಕೆ ಸ್ಥಳವಿಲ್ಲದ್ದರಿಂದ ತಿರುಗಿ ಹಡಗಿಗೆ ಬಂತು. ಒಂದು ವಾರವಾದ ತರುವಾಯ ನೋವೆಂಬವರು ಪುನಃ ಒಂದು ಪಾರಿವಾಳವನ್ನು ಬಿಟ್ಟರು. ಅದು ಸಾಯಂಕಾಲದಲ್ಲಿ ಒಂದು ಹಸುರಾದ ಒಲೀವ ಮರದ ರೆಂಬೆಯನ್ನು ಬಾಯಿಯಲ್ಲಿ ಕಚ್ಚಿಕೊಂಡು ಬಂತು. ಆದ್ದರಿಂದ ಭೂಮಿಯಮೇಲಿರುವ ನೀರು ಕಡಿಮೆಯಾಗುತ್ತಿದೆ ಎಂದು ನೋವೆಂಬವರಿಗೆ ಗೊತ್ತಾಯಿತು. ತಿರುಗಿ ಒಂದು

ವಾರವಾದ ಬಳಿಕ ಮತ್ತೆ ಒಂದು ಪಾರಿವಾಳವನ್ನು ಪುನರಸೇ ಸಾರೆ ಬಿಟ್ಟರು. ಅದು ಹಿಂತಿರುಗಿ ಬಾರದ ಕಾರಣ, ನೋವೆಂಬ ವರು ನೀರು ಎಲ್ಲಾ ಒಣಗಿ ಒಣ ಭೂಮಿಯು ಇರುತ್ತದೆಂದು ತಿಳಕೊಂಡು, ತನ್ನ ಹೆಂಡತಿ, ಮಕ್ಕಳು, ಅವರ ಹೆಂಡತಿಯ ರೊಂದಿಗೂ ಉಳಿದ ಎಲ್ಲಾ ಜೀವ ಜಂತುಗಳೊಂದಿಗೂ ಹಡಗ ವನ್ನು ಬಿಟ್ಟು ನೆಲದ ಮೇಲೆ ಬಂದರು.

ನೋವೆಂಬವರು ಸರ್ವೇಶ್ವರನಿಗೆ ಬಹಳ ಕೃತಜ್ಞತೆಯಾ ಗಿದ್ದರು. ಆದಕಾರಣ ಅವರು ಒಂದು ಪೀಠವನ್ನು ಕಟ್ಟಿ ಸರ್ವೇಶ್ವರನಿಗೆ ಮೇಲರಿತ ಸ್ತೋತ್ರ ಮಾಡುವದಕ್ಕಾಗಿ ಒಂದು ಬಲಿಯನ್ನು ಸಮರ್ಪಿಸಿದನು.

ಇದನ್ನು ಕಂಡು ಸರ್ವೇಶ್ವರನು ಸಂತೋಷಪಟ್ಟು ಹೇಳಿ ದ್ದೇನಂದರೆ, ಇನ್ನು ಮುಂದೆ ಮನುಷ್ಯರನ್ನು ಮತ್ತು ಜೀವ ಜಂತುಗಳನ್ನು ನಾಶನಮಾಡಲು ಜಲಪ್ರಳಯವು ಬರಲಾರ ವೆಂಬುವದಕ್ಕೆ ಗುರುತಾಗಿ ಕಾಮನ ಬಿಲ್ಲನ್ನು ಆಕಾಶದಲ್ಲಿ ಇಡುವೆವೆಂದರು.

ಆಮೇಲೆ ಸರ್ವೇಶ್ವರನು ತಾವು ರಕ್ಷಿಸಿದಂಥಾ ನೋವೆಂಬ ವರನ್ನು, ಆತನ ಕುಟುಂಬದವರನ್ನು, ಎಲ್ಲಾ ಜೀವರಾಶಿ ಗಳನ್ನು ಆಶೀರ್ವದಿಸಿ, ಅಂದದ್ದೇನಂದರೆ ನೀವೆಲ್ಲರೂ ಬೆಳೆದು ವರ್ಧಿಸಿ ಭೂಲೋಕವನ್ನು ತುಂಬಿಸಿ ಅಂದರು.

ನೋವೆಂಬವರ ಹಡಗವು ಜೇಸು ನಾಥರು ನಮ್ಮ ಆತ್ಮ ರಕ್ಷಣೆಗಾಗಿ ಸ್ಥಾಪಿಸಿದ ಕಥೋಲಿಕೆಂಬ ಸತ್ಯ ತಿರು ಸಭೆಗೆ ಹೋಲ್ವಿಕೆಯಾಗಿದೆ.

## ೭ ಅಬ್ರಾಹಾಮನನ್ನು ಕುರಿತು

ಹಾರಾನ್ ಪಟ್ಟಣದಲ್ಲಿ ನಿವಸಿಸಿದಂಥಾ ದುಷ್ಟ ಜನರಲ್ಲಿ ಒಳ್ಳೇ ಮಾರ್ಗದಲ್ಲಿ ನಡೆದುಕೊಂಡು ಬಂದ ಮಹಾತ್ಮರಾದ ಅಬ್ರಹಾಮೆಂಬವರು ಒಬ್ಬರಿದ್ದರು. ಎಲ್ಲರು ದೇವರನ್ನು ಮರೆತು ಕೆಟ್ಟುಹೋಗಿದ್ದರೂ, ಇವರು ಮಾತ್ರ ಸನ್ಮಾರ್ಗದಲ್ಲಿ ನಡೆದು ಏಕ ಸರ್ವೇಶ್ವರನನ್ನು ಆರಾಧಿಸುತ್ತಿದ್ದರು.

ಆದ್ದರಿಂದ ಸರ್ವೇಶ್ವರನು ಅವರಿಗೆ ದರ್ಶನವಾಗಿ "ಅಬ್ರಾಮಾ ನೀನು ನಿನ್ನ ದೇಶವನ್ನು ಬಿಟ್ಟು ಖಾನಾನೆಂಬ ದೇಶಕ್ಕೆ ಹೋಗು" ಎಂದರು.

ಸರ್ವೇಶ್ವರನು ತನಗೆ ಕಟ್ಟಳೆ ಮಾಡಿದ ಹಾಗೆ ಅಬ್ರಾಮನು ಮಾಡಿದನು. ತನ್ನ ಸ್ವಂತ ದೇಶವನ್ನು, ಸ್ನೇಹಿತರನ್ನು ಬಿಟ್ಟಗಲಿ ಹೋಗುವದು ಕಷ್ಟವಾದರೂ ಅದನ್ನು ಲಕ್ಷಿಸದೆ ತನ್ನ ಹೆಂಡತಿಯಾದ ಸಾರಳೊಂದಿಗೂ, ತನ್ನ ಸಹೋದರನ ಮಗನಾದ ಲೋತನೆಂಬವನೊಂದಿಗೂ, ತನ್ನ ಸೇವಕರು ಮತ್ತು ಕುರಿ ಹಿಂಡುಗಳ ಸಂಗಡ ಕಾನಾನ್ ಶೀಮೆಗೆ ಹೋದನು.

ಆತನ ಸಂತತಿಯನ್ನು ವೃದ್ಧಿ ಮಾಡಲು ಸರ್ವೇಶ್ವರನು ಆತನಿಗೆ ವಾಗ್ದತ್ತ ಕೊಟ್ಟದ್ದೇನಂದರೆ; "ನಾವು ನಿನಗೂ ನಿನ್ನ ಪುತ್ರರಿಗೂ ಈ ಕಾನನ್ ದೇಶವನ್ನು ಕೊಡುತ್ತೇವೆ. ನೀನು ಅನೇಕ ಜನಾಂಗದವರಿಗೆ ತಂದೆಯಾಗುವಿ. ನಿನ್ನಿಂದ ಬರುವ ಎಲ್ಲ ಜನರೂ ಆಶೀರ್ವದಿಸಲ್ಪಡುವರು."

ಸರ್ವೇಶ್ವರನು ಅಬ್ರಹಾಮನಿಗೆ ಕಾನನ್ ಸೀಮೆಯನ್ನು ವಾಗ್ದತ್ತ ಮಾಡಿಕೊಟ್ಟದ್ದರಿಂದ ಈ ದೇಶಕ್ಕೆ "ವಾಗ್ದತ್ತ ದೇಶವೆಂದು" ಹೆಸರಾಯ್ತು.

ಕರ್ತನು ಅಬ್ರಹಾಮನನ್ನು ಆಶೀರ್ವದಿಸಿ ಆತನಿಗೆ ಸಕಲ ಐಶ್ವರ್ಯವನ್ನು ಪಾಲಿಸಿದರು. ಆತನ ಕುರಿಗಳ ಹಿಂಡನ್ನು ವೃದ್ಧಿ ಮಾಡಿದರು. ಆದರೆ ಅಬ್ರಹಾಮನು ವೃದ್ಧನಾಗುತ್ತಿದ್ದರೂ, ಸರ್ವೇಶ್ವರನು ಅವರಿಗೆ ಪುತ್ರ ಸಂತಾನವನ್ನು ಕೊಡಲಿಲ್ಲ.

ಕಾರಣ ಅಬ್ರಹಾಮನು ಸರ್ವೇಶ್ವರನು ತನಗೆ ಪಾಲಿಸಿದ ವಾಗ್ದತ್ತವನ್ನು ನೆನಪಿನಲ್ಲಿಟ್ಟುಕೊಂಡು, ಸರ್ವೇಶ್ವರನನ್ನು ಕುರಿತು ಪ್ರಾರ್ಥಿಸಿದ್ದೇನಂದರೆ, “ನಾನು ಮಕ್ಕಳಿಲ್ಲದೆ ಸಾಯಬೇಕೋ? ಅಥವಾ ನನ್ನ ಐಶ್ವರ್ಯವನ್ನು ನನ್ನ ಸೇವಕರ ಮಕ್ಕಳಲ್ಲಿ ಒಬ್ಬನಿಗೆ ಕೊಡಬೇಕು”? ಎಂದು ಪ್ರಾರ್ಥಿಸಿದನು.

ಸರ್ವೇಶ್ವರನು ಅಬ್ರಹಾಮನ ಮನವಿಯನ್ನು ಕೇಳಿ, ಆತನನ್ನು ಒಂದು ರಾತ್ರಿ ಗುಡಾರದಿಂದ ಹೊರಗೆ ಕರೆದು, ಆಕಾಶವನ್ನು ತೋರಿಸಿ ಹೇಳಿದ್ದೇನಂದರೆ, “ಮೇಲೆ ನೋಡು, ಆಕಾಶದಲ್ಲಿರುವ ನಕ್ಷತ್ರಗಳನ್ನು ನಿನ್ನಿಂದ ಕೂಡಿದರೆ ಎಣಿಸು. ಹಾಗೆಯೇ ನಿನ್ನ ಮಕ್ಕಳೂ. ನಿನ್ನ ಮಕ್ಕಳ ಮಕ್ಕಳೂ ನಕ್ಷತ್ರಗಳ ಹಾಗೆ ಹೆಚ್ಚಿಸುವರು. ನಾನು ನಿನಗೆ ಕೊಟ್ಟ ಸ್ಥಳವನ್ನೆಲ್ಲ ತುಂಬಿಸುವರು”. ಎಂದರು.

ಅಬ್ರಹಾಮನು, ಸರ್ವೇಶ್ವರನು ತನಗೆ ಹೇಳಿದ ಎಲ್ಲ ಮಾತುಗಳನ್ನು ನಂಬಿ, ತನಗೆ ಮಗನು ಹುಟ್ಟುವವರೆಗೆ ತಾಳ್ಮೆಯಿಂದ ಇದ್ದನು. ಒಂದು ದಿವಸ ಸರ್ವೇಶ್ವರನು ಹೇಳಿದ್ದೇನಂದರೆ, “ನೀನು ಈ ದಿವಸದಿಂದ ಅಬ್ರಾಮನೆಂದು ಕರೆಯದೆ ಅಬ್ರಾಹಾಮನೆಂದು ಕರೆಯಲ್ಪಡುವಿ. ಯಾಕಂದರೆ ನೀನ

ಅನೇಕ ಗೋತ್ರಗಳಿಗೆ ತಂದೆಯಾಗಿರುವಿ. ಮತ್ತು ನಿನ್ನ ಹೆಂಡತಿ ಸೇರ ಎಂದು ಕರೆಯದೆ, ಸಾರಳೆಂದು ಕರೆಯಲ್ಪಡುವಳು. ಯಾಕಂದರೆ ಆಕೆಯು ರಾಜಕುಮಾರರ ತಾಯಿಯಾಗುವಳು. ನಾವು ನಿನಗೆ ವಾಗ್ದತ್ತ ಕೊಟ್ಟ ಹಾಗೆ ಒಬ್ಬ ಮಗನನ್ನು ಕೊಡುವೆವು ಆತನಿಗೆ ಇಸಾಕನೆಂದು ಹೆಸರನ್ನಿಡು. ಅವನು ಅನೇಕ ರಾಜರಿಗೂ, ಗೋತ್ರಗಳಿಗೂ, ತಂದೆಯಾಗುವನು.'' ಎಂದರು.

ಅಬ್ರಹಾಮನು ಸರ್ವೇಶ್ವರನ ಕಟ್ಟಳೆಗಳಿಗೆ ವಿಧೇಯಿಸಿ ನಡೆದದ್ದರಿಂದ ಸರ್ವೇಶ್ವರನು ಆತನನ್ನು ಆಶೀರ್ವದಿಸಿದರು.

## ೧೦ ಸೋದೋಮ್ ಗೋಮೊರ್ರಾದ ನಾಶನವನ್ನು ಕುರಿತು

ಕೆಲವು ದಿವಸಗಳೊಳಗೆ ಅಬ್ರಹಾಮನ ಮತ್ತು ಲೋತನ ಕುರಿ ದನಗಳ, ಹಿಂಡುಗಳು ವೃದ್ಧಿಯಾದವು. ಆದ್ದರಿಂದ ಇವರ ಊಳಿಗದವರೊಳಗೆ ವಾಗ್ವಾದ ನಡೆಯುತ್ತಿತ್ತು. ಅಬ್ರಹಾಮನೋ ಎಂದರೆ ಸಮಾಧಾನವನ್ನು ಪ್ರೀತಿಸುತ್ತಿದ್ದನು. ಆದಕಾರಣ ತಾವು ಒಬ್ಬರನ್ನೊಬ್ಬರು ಬಿಟ್ಟು ಅಗಲುವದು ಒಳ್ಳೇಯದೆಂದು ಲೋತನಿಗೆ ತಿಳಿಸಿದನು.

ಹಾಗೆಯೇ ಲೋತನು ತನ್ನ ಹಿಂಡನ್ನು ತಕ್ಕೊಂಡು ಸೋದೋಮ ಎಂಬ ಊರಿನಲ್ಲಿ ನಿವಾಸಿಸಲು ಹೋದನು. ಅಬ್ರಹಾಮನು ತಾನು ಇದ್ದಲ್ಲಿಯೇ ಇರುತ್ತಿದ್ದನು.

ಒಂದು ದಿನ ಮೂವರು ಪ್ರಯಾಣಿಕರು ಅಬ್ರಹಾಮನ ಗುಡಾರಕ್ಕೆ ಬಂದರು. ಅವರಲ್ಲಿ ಒಬ್ಬರು ಪರಮಕರ್ತನೆಂತಲೂ

ಇಬ್ಬರು ಸಮ್ಮನಸ್ಸುಗಳಿಂತಲೂ ಆತನಿಗೆ ಕೂಡಲೇ ಗೊತ್ತಾಯಿತು. ಆದಕಾರಣ ಅವರೊಂದಿಗೆ ಸೊದೋಮು ಪಟ್ಟಣದ ದಾರಿಯಲ್ಲಿ ಸ್ವಲ್ಪ ದೂರ ಕಳಿಸಲು ಹೋದನು.

ಸರ್ವೇಶ್ವರನು ಅಬ್ರಹಾಮನಿಗೆ ಹೇಳಿದ್ದೇನಂದರೆ, "ಸೋದೋಮು ಮತ್ತು ಗೊಮೊರ್ರಾ ಪಟ್ಟಣದ ಜನರು ಅನೇಕ ಅಕ್ರಮವಾದ ಪಾಪಗಳಲ್ಲಿ ಮುಣುಗಿ ಹೋದದ್ದರಿಂದ ಅವುಗಳನ್ನು ನಾಶನಮಾಡಲು ತಾವ್ ಹೋಗುತ್ತಾರೆಂಬ ಸಮಾಚಾರವನ್ನು ತಿಳಿಸಿದರು.

ಅಬ್ರಹಾಮನು ಅಲ್ಲಿಯ ಜನರ ಸಲುವಾಗಿ ಬಹಳ ದುಃಖಪಟ್ಟು ವಿಜ್ಞಾಪಿಸಿದ್ದೇನಂದರೆ, ''ದುಷ್ಟರೊಂದಿಗೆ ನೀತಿವಂತರನ್ನು ಸಹ ನಾಶಮಾಡುತ್ತೀರಾ? ಅವರಲ್ಲಿ ಐವತ್ತು ಮಂದಿ ನೀತಿವಂತರು ಸಿಕ್ಕರೆ ಅವರ ಸಲುವಾಗಿ ಆ ಊರನ್ನು ಕಾಪಾಡುತ್ತೀರೋ?" ಎಂದು ಕೇಳಿದನು.

ಹೌದು ಎಂದು ಸರ್ವೇಶ್ವರನು ಹೇಳಿದರು.

ಆದರೆ ಅಬ್ರಹಾಮನು ಆ ಪಟ್ಟಣವನ್ನು ರಕ್ಷಿಸಲು ಬಹಳ ಪ್ರಯಾಸಪಟ್ಟನು. ಕೊನೆಗೆ ಕರ್ತರು, ಆ ಪಟ್ಟಣದಲ್ಲಿ ಹತ್ತು ಮಂದಿ ನೀತಿವಂತರು ಸಿಕ್ಕರೆ ಅದನ್ನು ರಕ್ಷಿಸುವೆವೆಂದು ಹೇಳಿದರು. ಆಗ ಅಬ್ರಹಾಮನು ಹಿಂತಿರುಗಿ ತನ್ನ ಗುಡಾರಕ್ಕೆ ಹೋದನು. ಆದರೆ ಆ ಇಬ್ಬರು ದೇವದೂತರು ಸೊದೋಮು ಪಟ್ಟಣಕ್ಕೆ ಹೋದರು.

ಈ ಇಬ್ಬರು ದೇವ ದೂತರು ಲೋತನ ಮನೆಯನ್ನು ಪ್ರವೇಶಿಸಲು, ಆತನು ಅವರನ್ನು ಬಹಳ ಸಂತೋಷದಿಂದ

ಸ್ವೀಕರಿಸಿದನು ಆ ಊರ ಜನರಿಗೆ ಇವರಿಬ್ಬರು ಬಂದ ಸಂಗತಿ ಗೊತ್ತಾದ ಕೂಡಲೇ ಅವರಿಗೆ ಕೇಡು ಮಾಡಲು ಬಯಸಿ ಲೋತನ ಮನೆಯ ಸುತ್ತಲೂ ನೆರೆದರು. ಆದಾಗ್ಯೂ ಅವರ ದುಷ್ಟ ಅಭಿಪ್ರಾಯವು ನೆರವೇರಲಿಲ್ಲ. ಯಾಕಂದರೆ ಅವರೆಲ್ಲರೂ ಅದ್ಭುತವಾಗಿ ಕುರುಡರಾಗಿ ಒಳಗೆ ಪ್ರವೇಶಿಸದೆ ಹೋದರು. ಆ ಇಬ್ಬರು ದೂತರು ಸೊದೋಮ ಗೊಮೋರ್ರದಲ್ಲಿ ಹತ್ತು ಮಂದಿ ನೀತಿವಂತರು ಸಹ ಇಲ್ಲದಕಾರಣ ಅದಕ್ಕೆ ಬರಲಿಕ್ಕಿರುವ ನಾಶನವನ್ನು ಕುರಿತು ಲೋತನಿಗೆ ತಿಳಿಸಿದರು.

ಮರುದಿನ ಬೆಳಿಗ್ಗೆ ಮುಂಜಾನೆ ದೇವದೂತರು ಲೋತನನ್ನು ಅವನ ಹೆಂಡತಿ ಮತ್ತು ಇಬ್ಬರು ಮಕ್ಕಳನ್ನೂ ಊರ ಹೊರಗೆ ಕಳುಹಿಸಿದರು. ಮತ್ತು ಅವರು ಕೂಡಲೇ ಹೊರಟು ಹೋಗಬೇಕಂತಲೂ, ಹಿಂದೆ ತಿರುಗಿ ನೋಡಬಾರದೆಂತಲೂ ಆಜ್ಞಾಪಿಸಿದರು. ಆದರೆ ಲೋತನ ಹೆಂಡತಿ ಹಿಂದೆ ಏನು ನಡೆಯುವದೋ ಎಂದು ತಿಳಕೊಳ್ಳಲು ತಿರುಗಿ ನೋಡಿದ್ದರಿಂದ ಕೂಡಲೇ ಉಪ್ಪಿನ ಕಂಭವಾಗಿ ಮಾರ್ಪಟ್ಟಳು.

ಸರ್ವೇಶ್ವರನು ಸೊದೋಮ ಗೊಮೋರ್ರಾದ ಮೇಲೆ ಆಕಾಶದಿಂದ ಬೆಂಕಿಯ ಮಳೆ ಸುರಿಯುವ ಹಾಗೆ ಮಾಡಿ ಅವರ ದನ, ಕುರಿ, ಹೊಲ, ಮನೆ ಮೊದಲಾದವುಗಳನ್ನೆಲ್ಲ ನಾಶ ಮಾಡಿದರು. ಆಗ ಪಟ್ಟಣಗಳಿದ್ದ ಸ್ಥಳವು ಸರೋವರಗಳಾಗಿ ಮಾರ್ಪಟ್ಟವು. ಆದ್ದರಿಂದ ಅದಕ್ಕೆ ಶವದ ಸಮುದ್ರ ಅಥವಾ ಹೆಣದ ಸಮುದ್ರವೆಂದು ಹೆಸರು. ಇದರಲ್ಲಿರುವ ನೀರು ಗಂಧಕವುಳ್ಳದ್ದಾಗಿರುತ್ತದೆ. ಇದರಲ್ಲಿ ಯಾವ ತರದ ಮೀನುಗಳೂ ಜೀವಿಸುವದಿಲ್ಲ. ದಂಡೆಯ ಮೇಲೆ ಯಾವ ತರದ ವೃಕ್ಷಗಳು ಸಹ

ಬೆಳೆಯುವದಿಲ್ಲ ಇದು, ಮೋಷೆ ಪಾಪಕ್ಕಾಗಿ ಸರ್ವೇಶ್ವರನು ಕಳುಹಿಸಿದ ಭಯಂಕರವಾದ ಶಿಕ್ಷೆಯ ಗುರುತಾಗಿರುತ್ತದೆ.

## 11 ಇಸಾಕನನ್ನು ಬಲಿಯಾಗಿ ಒಪ್ಪಿಸಿದ ವರ್ತಮಾನವು

ಕೊನೆಗೆ ಅಬ್ರಹಾಮ ಮತ್ತು ಸಾರಳಿಗೆ ಒಬ್ಬ ಮಗನು ಜನ್ಮಿಸಿದನು. ಆತನಿಗೆ ಇಸಾಕನೆಂದು ಹೆಸರಿಟ್ಟರು. ಅವರು ಆತನನ್ನು ಬಹು ಪ್ರೀತಿಸುತ್ತಿದ್ದರು. ಯಾಕಂದರೆ ಅವನು ಸರ್ವೇಶ್ವರನು ಅವರಿಗೆ ಪಾಲಿಸಿದ ವಾಕ್ಯದ ಪ್ರಕಾರ ಅವರ ವೃದ್ಧಾಪ್ಯದಲ್ಲಿ ಅವರನ್ನು ಸಂತೋಷಗೊಳಿಸಲು ಕಳಿಸಲ್ಪಟ್ಟಿದ್ದನು.

ಅಬ್ರಹಾಮನು ಇಸಾಕನನ್ನು ಬಹಳವಾಗಿ ಪ್ರೇಮಿಸುತ್ತಿದ್ದ ಕಾರಣ ಸರ್ವೇಶ್ವರನು ತಮಗಿಂತಲೂ ಮಗನನ್ನು ಹೆಚ್ಚು ಪ್ರೇಮಿಸುತ್ತಾನೇನೋ ಎಂಬದನ್ನು ಪರೀಕ್ಷಿಸಲು ಯತ್ನಿಸಿದರು. ಆತನ ವಿಶ್ವಾಸವನ್ನು ಕಂಡುಕೊಳ್ಳಲು ಒಂದು ದಿನ ರಾತ್ರಿ ಕರ್ತರು ಅಬ್ರಹಾಮನನ್ನು ನೋಡಿ; "ನೀನು ನಿನ್ನ ಮಗನನ್ನು ಕರೆದುಕೊಂಡು, ಹೋಗಿ, ನಾವು ನಿನಗೆ ತೋರಿಸುವ ದೊಡ್ಡ ಬೆಟ್ಟದ ಮೇಲೆ ಅವನನ್ನು ನಮಗೆ ಬಲಿಯಾಗಿ ಒಪ್ಪಿಸಬೇಕೆ"ಂದು ವಚನಿಸಿದರು.

ಅಬ್ರಹಾಮನ ಹೃದಯವು ದುಃಖದಿಂದ ತುಂಬಿತ್ತು ಆದರೆ ಆತನು ಯಾವಾಗಲೂ ಸರ್ವೇಶ್ವರನಿಗೆ ವಿಧೇಯಿಸುತ್ತಿದ್ದನು. ಮತ್ತು ಇನ್ನು ವಿಧೇಯಿಸುವದಕ್ಕೆ ಸಿದ್ಧನಾಗಿದ್ದನು. ಆದಕಾರಣ ಸರ್ವೇಶ್ವರನು ಹೇಳಿದಪ್ರಕಾರ ಮಾಡಲು ತಯಾರು ಮಾಡಿದನು.

ಅಬ್ರಹಾಮನು ಒಲಿಯನ್ನು ಒಪ್ಪಿಸುವದಕ್ಕಾಗಿ ಸೌದೆಯನ್ನು ಕಡೆದು, ಹೊರೆಯನ್ನು ಕಟ್ಟಿ, ಇಬ್ಬರು ಸೇವಕರ ಮೇಲೆ ಹೊರಸಿ, ಇಸಾಕನನ್ನು ಕರಕೊಂಡು ಸರ್ವೇಶ್ವರನು ಬಲಿ ಒಪ್ಪಿಸಲು ಹೇಳಿದ ಸ್ಥಳವನ್ನು ಹುಡುಕಲು ಹೊರಟನು

ಅಬ್ರಹಾಮನು ಮತ್ತು ಅವನ ಸಂಗಡಿಗರು ಮೂರು ದಿವಸಗಳ ವರೆಗೆ ಪ್ರಯಾಣ ಮಾಡಿ ಕಡಗೆ ಒಂದು ಪರ್ವತದ ಕೆಳಗೆ ಬಂದು ಸೇರಿದರು. ಆಗ ಅಬ್ರಹಾಮನು ತನ್ನ ಸೇವಕರಿಗೆ ಕತ್ತೆಯೊಂದಿಗೆ ತಾವು ಒರುವ ವರೆಗೂ ಕೆಳಗೆ ಇರಲು ಹೇಳಿ ತಾನೂ, ಇಸಾಕನು ಬಲಿಯನ್ನು ಒಪ್ಪಿಸಲು ಬೆಟ್ಟದ ಮೇಲೆ ಹೋದರು.

ಅಬ್ರಹಾಮನು ಸೌದೆಯ ಹೊರೆಯನ್ನು ಇಸಾಕನಮೇಲೆ ಹೊರಿಸಿ, ತಾನು ಕತ್ತಿಯನ್ನು ಬೆಂಕಿಯನ್ನು ತೆಗೆದುಕೊಂಡು ಬೆಟ್ಟವನ್ನು ಹತ್ತಿದರು. ಹೀಗೆ ಅವರು ಹೋಗುತ್ತಿರುವಾಗ ಇಸಾಕನು ತಂದೆಯನ್ನು ನೋಡಿ "ಅಪ್ಪಾ ಬಲಿಯ ಸಲುವಾಗಿ ಬೆಂಕಿಯು ಮತ್ತು ಕಟ್ಟಿಗೆಗಳಿವೆ. ಆದರೆ ಬಲಿಕೊಡುವ ವಸ್ತುವು ಇಲ್ಲವಲ್ಲ"? ಎಂದು ಕೇಳಿದನು.

ಅದಕ್ಕೆ ಅಬ್ರಹಾಮನು "ಸರ್ವೇಶ್ವರನು ಅದನ್ನು ಕೊಡುವರೆ"ಂದು ಪ್ರತ್ಯುತ್ತರ ಕೊಟ್ಟನು. ಕಡೆಗೆ ಅವರು ಬೆಟ್ಟದಮೇಲೆ ಬಂದರು. ಅಲ್ಲಿ ಒಂದು ಪೀಠವನ್ನು ಸ್ಥಾಪಿಸಿ ಅದರ ಮೇಲೆ ಕಟ್ಟಿಗೆಗಳನ್ನು ಒಟ್ಟಿದರು. ತರುವಾಯ ಅಬ್ರಹಾಮನು ಇಸಾಕನನ್ನು ಹಿಡಿದು ಬಗ್ಗಿಸಿ ಅವನನ್ನು ಕೊಲ್ಲಲು ಕತ್ತಿಯನ್ನೆತ್ತಿದಾಗ ಒಬ್ಬ ದೇವದೂತನು ಅಬ್ರಹಾಮನನ್ನು

ಕರೆದು, ನಿನ್ನ ಮಗನನ್ನು ಕೊಲ್ಲಬೇಡ ಈಗ ನೀನು ನಿನ್ನ ಮಗನಿಗಿಂತಲೂ ಸರ್ವೇಶ್ವರನನ್ನು ಹೆಚ್ಚು ಪ್ರೀತಿಸುತ್ತೀಯೆಂದು ತಿಳಿಯಿತು.

ಅಬ್ರಹಾಮನ ಸಂತೋಷಕ್ಕೆ ಮೇರೆಯೇ ಇಲ್ಲ. ಸುತ್ತಲೂ ನೋಡಲು ಗಿಡಗಳ ಕಂಟಿಯಲ್ಲಿ ಸಿಕ್ಕಿಕೊಂಡಿದ್ದ ಒಂದು ಟಗರನ್ನು ಹಿಡಿದುತಂದು ಇಸಾಕನ ಬದಲಾಗಿ ಅದನ್ನು ಕೊಂದು ಸರ್ವೇಶ್ವರನಿಗೆ ಬಲಿ ಒಪ್ಪಿಸಿದನು.

ಇಸಾಕನು ಕಟ್ಟಿಗೆಯ ಹೊರೆಯನ್ನು ಸಂತೋಷದಿಂದ ಹೊತ್ತು ಬೆಟ್ಟವನ್ನು ಹತ್ತಿದ್ದು, ಯೇಸುನಾಥ ಸ್ವಾಮಿ ತಮ್ಮನ್ನು ಬಲಿಯಾಗಿ ಒಪ್ಪಿಸಲು ಹೊತ್ತುಕೊಂಡು ಹೋದ ಶಿಲುಬೆಯ ಮರಕ್ಕೆ ಹೋಲಿಕೆಯಾಗಿರುತ್ತದೆ.

## 12 ಬಣ್ಣ ಬಣ್ಣದ ಅಂಗಿಯನ್ನು ಕುರಿತು

ಜಾಕೋಬನಿಗೆ ಹನ್ನೆರಡು ಮಂದಿ ಮಕ್ಕಳಿದ್ದರು. ಇವರಲ್ಲಿ ಜೋಸೆಫನೆಂಬವನು ಬಹಳ ಒಳ್ಳೆಯವನಾಗಿದ್ದರಿಂದ ಈತನನ್ನು ಜಾಕೋಬನು ಬಹಳವಾಗಿ ಪ್ರೀತಿಸುತ್ತಿದ್ದನು. ಮತ್ತು ಅವನಿಗೆ ಒಂದು ಬಣ್ಣ ಬಣ್ಣದ ಅಂಗಿಯನ್ನು ಹೊಲಿಸಿದ್ದನು. ಆದ್ದರಿಂದ ಇವನ ಮೇಲೆ ಉಳಿದ ಅಣ್ಣನವರು ಬಹಳ ಹೊಟ್ಟೆಕಿಚ್ಚು ಪಡಲಾರಂಭಿಸಿದರು.

ಜೋಸೇಫನಿಗೆ ಹದಿನಾರು ವರ್ಷ ಪ್ರಾಯ ನಡೆಯುತ್ತಿರುವಾಗ ಆತನಿಗೆ ಎರಡು ಕನಸುಗಳು ಬಿದ್ದವು. ಒಂದರಲ್ಲಿ ತಾನು ತನ್ನ ಸಹೋದರರೂ ಗೋಧಿಯನ್ನು ಕೊಯ್ದು ತೆನೆಗಳನ್ನು ಕಂತೆ ಕಟ್ಟುತ್ತಿರುವಾಗ ತನ್ನ ಕಂತೆಯು ನೆಟ್ಟಗೆ ನಿಲ್ಲ

ಲಾಗಿ ತನ್ನ ಸಹೋದರರ ಕಂತೆಗಳು ತನ್ನದರ ಮುಂದೆ ತಲೆ ಬೊಗ್ಗಿಸಿ ವಂದಿಸಿದ ಹಾಗೂ ಕನಸು ಕಂಡನು. ಮತ್ತೊಂದರಲ್ಲಿ ಸೂರ್ಯನೂ, ಚಂದ್ರನೂ, ಹನ್ನೊಂದು ನಕ್ಷತ್ರಗಳು ತನ್ನ ಮುಂದೆ ಸಾಷ್ಟಾಂಗ ಬಿದ್ದು ನಮಸ್ಕಾರ ಮಾಡುವ ಹಾಗೆ ಸ್ವಪ್ನ ಕಂಡನು.

ಜಾಕೋಬನು ಈ ಕನಸುಗಳನ್ನು ಕೇಳಿ ಬಹಳ ಆಶ್ಚರ್ಯ ಪಟ್ಟು "ಏನು ನಾನೂ ನಿಮ್ಮ ತಾಯಿಯು ಮತ್ತು ನಿನ್ನ ಸಹೋದರರು ನಿನ್ನನ್ನು ಒಂದಿಸಿ, ನಿನ್ನ ಸೇವಕರರಾಗುವೆವೆಂದು ನೆನಸುತ್ತೀಯೋ? ನೀನು ನಮ್ಮನ್ನು ಆಳುತ್ತೀಯೋ"? ಎಂದು ಗದ್ದರಿಸಿದನು.

ಒಂದು ದಿನ ಜಾಕೋಬನು ಜೋಸೇಫನನ್ನು ಕರೆದು ಆತನ ಅಣ್ಣನವರು ಮಂದೆಯನ್ನು ಮೇಯಿಸಲು ಹೋದ ಸ್ಥಳಕ್ಕೆ ಕಳುಹಿಸಿದನು. ಇವನು ಬರುವವನ್ನು ದೂರದಲ್ಲಿ ಕಂಡು; ಇಗೋ, ಸ್ವಪ್ನಗಾರನು ಬರುತ್ತಾನೆ; ಇವನನ್ನು ಕೊಂದು ಪ್ರೇತವನ್ನು ಒಂದು ತಗ್ಗಿನೊಳಗೆ ಹಾಕಿ ಬಿಡೋಣ; ಎಂದು ತಮ್ಮೊಳಗೆ ಮಾತನಾಡಿಕೊಂಡರು.

ಆದರೆ ರೂಬೇನನು ದೊಡ್ಡವನಾದ್ದರಿಂದ ತನ್ನ ಸಹೋದರನ ಜೀವವನ್ನು ಕಾಪಾಡಲು ಯತ್ನಿಸಿ ತನ್ನ ಸಹೋದರರನ್ನು ನೋಡಿ; ಇವನನ್ನು ಕೊಲ್ಲದೆ, ದೊಡ್ಡ ಗುಣಿಯಲ್ಲಿ ದೊಬ್ಬಿ ಬಿಡೋಣ ಎಂದನು.

ಜೋಸೇಫನು ತಮ್ಮ ಹತ್ತಿರ ಬಂದಕೂಡಲೇ ಆತನ ಸಹೋದರರು ಆತನ ಬಣ್ಣ ಬಣ್ಣದ ಅಂಗಿಯನ್ನು ಬಿಚ್ಚಿ

ಕೊಂಡು ಆತನನ್ನು ಒಂದು ದೊಡ್ಡ ಗುಣಿಯಲ್ಲಿ ದೊಬ್ಬಿಬಿಟ್ಟು ತಾವು ಊಟ ಮಾಡಲು ಕುಳಿತರು. ಆದರೆ ಆಗ ಅಲ್ಲಿ ರೂಬೇನನು ಇದ್ದಿಲ್ಲ. ಅಷ್ಟರಲ್ಲಿ ಅಲ್ಲಿಗೆ ಕೆಲವು ಮಂದಿ ವರ್ತಕರು ಆ ಮಾರ್ಗವಾಗಿ ಈಜಿಪ್ತ ದೇಶಕ್ಕೆ ಹೋಗುತ್ತಿದ್ದರು ಇದನ್ನು ಕಂಡು ಜೂದನೆಂಬವನು "ನಮ್ಮ ತಮ್ಮನನ್ನು ಕೊಂದರೆ ನಮಗೇನು ಒಳ್ಳೇದು? ಆತನನ್ನು ಕೊಲ್ಲುವದಕ್ಕಿಂತ ಈ ವರ್ತಕರಿಗೆ ಮಾರಿಬಿಡೋಣ ಎಂದನು ಈ ಮಾತಿಗೆ ಎಲ್ಲರೂ ಒಪ್ಪಿಕೊಂಡರು. ಜೋಸೇಫನನ್ನು ಹಾಳು ಬಾವಿಯಿಂದ ತೆಗೆದು ೨೦ ಬೆಳ್ಳಿಯ ಕಾಸುಗಳಿಗೆ ಮಾರಿದರು.

ತರುವಾಯ ಜೋಸೇಪನ ಸಹೋದರರು ಆತನ ಅಂಗಿಯನ್ನು ಕುರಿಯ ರಕ್ತದಲ್ಲಿ ಅದ್ದಿ ಅದನ್ನು ತೆಗೆದುಕೊಂಡು ಹೋಗಿ ತಮ್ಮ ತಂದೆಗೆ ತೋರಿಸಿ "ಇದು ಜೋಸೇಫನ ಅಂಗಿಯೇನು"? ಎಂದು ಕೇಳಿದರು.

ರಕ್ತದಲ್ಲಿ ಮುಣಿಗಿದಂಥಾ ಅಂಗಿಯನ್ನು ಕಂಡ ಕೂಡಲೇ ಜಾಕೋಬನು "ಇದು ನನ್ನ ಮಗನ ಅಂಗಿ" ಆತನನ್ನು ದುಷ್ಟ ಮೃಗವು ಕೊಂದುಹಾಕಿತೆಂದು ಅತ್ಯಂತ ದುಃಖಪಟ್ಟನು.

ಜೋಸೇಫನು ತನ್ನ ಸಹೋದರರಿಂದ ವಿಕ್ರಯಿಸಲ್ಪಟ್ಟದ್ದು, ಜೇಸುನಾಥ ಸ್ವಾಮಿಯು ತಮ್ಮ ಅಪೋಸ್ತಲರಲ್ಲಿ ಒಬ್ಬನಾದ ಜೂದಾಸೆಂಬವನಿಂದ ೩೦ ಬೆಳ್ಳಿ ಕಾಸುಗಳಿಗೆ ಮಾರಿದ್ದಕ್ಕೆ ಹೋಲಿಕೆಯಾಗಿದೆ.

## 13 ಜೋಸೇಫನು ಸೆರಶಾಲೆಯಲ್ಲಿದ್ದದ್ದು

ಜೋಸೇಪನನ್ನು ಕ್ರಯಕ್ಕೆ ತೆಗೆದುಕೊಂಡ ವರ್ತಕರು ಇವನನ್ನು ಏಜಿಪ್ತ ಶೀಮೆಯಲ್ಲಿ ರಾಜನ ಸೇನಾನಾಯಕನಾದ

ಪ್ರತಿಫಾರನಿಗೆ ಮಾರಿದರು. ಪ್ರತಿಫಾರನು ಜೋಸೇಫನ ಮೇಲೆ ಬಹಳ ನಂಬಿಗೆ ಇಟ್ಟು ಆತನನ್ನು ತನ್ನ ಮನೆಯ ಆಳುಗಳಲ್ಲಿ ಹಿರಿಯನಾಗಿ ನೇಮಿಸಿದನು.

ಒಂದು ದಿನ, ಪ್ರತಿಫಾರನ ಹೆಂಡತಿ ಜೋಸೇಫನ ಮೇಲೆ ಬಹಳ ಕೋಪಗೊಂಡು ಆತನ ಮೇಲೆ ಬಹಳ ಕೆಟ್ಟ ಅಪವಾದ ಹೊರಿಸಿ ತನ್ನ ಗಂಡನಿಗೆ ಚಾಡಿ ಹೇಳಿದಳು. ಪ್ರತಿಫಾರನು ತನ್ನ ಹೆಂಡತಿಯ ಮಾತನ್ನು ಕೇಳಿ ಜೋಸೇಫನನ್ನು ಕಾರಾಗೃಹದಲ್ಲಿ ಹಾಕಿಸಿದನು.

ಈ ಶೆರೆ ಮನೆಯಲ್ಲಿದ್ದ ಅಧಿಕಾರಿಯು ಜೋಸೇಫನನ್ನು ನಂಬುತ್ತ ಇದ್ದನು. ಆದ್ದರಿಂದ ಅಲ್ಲಿ ಇದ್ದ ಶೆರೆಯಾಳುಗಳನ್ನು ನೋಡಿಕೊಳ್ಳಲು ಆತನಿಗೆ ಕೆಲಸ ಕೊಟ್ಟನು. ಈ ಕೈದಿಗಳಲ್ಲಿ ಅರಸನ ಉದ್ಯೋಗಸ್ಥರಾದ ಒಬ್ಬ ರೊಟ್ಟಿಗಾರನು ಮತ್ತೊಬ್ಬ ಪಾನದಾಯಕನು ಇಬ್ಬರು ಅದೇ ಶೆರೆಮನೆಯಲ್ಲಿದ್ದರು. ಒಂದು ದಿವಸ ಇವರಿಬ್ಬರೂ ಬಹಳ ವ್ಯಸನವಾಗಿರುವದನ್ನು ಜೋಸೇಫನು ಕಂಡು ತಮ್ಮ ವ್ಯಸನದ ಕಾರಣವೇನೆಂದು ಅವನನ್ನು ಕೇಳಿದನು. ಅದಕ್ಕೆ ಅವರು "ತಮಗೆ ರಾತ್ರಿ ಒಂದು ಸ್ವಪ್ನ ಬಿತ್ತೆಂದೂ ಅದರ ಅರ್ಥವನ್ನು ಹೇಳುವವರು ಯಾರೂ ಇಲ್ಲವೆಂದೂ ತಿಳಿಸಿದರು.

ಆಗ ಜೋಸೇಫನು "ದೇವರ ಸಹಾಯದಿಂದ ನಾನು ನಿಮ್ಮ ಕನಸುಗಳ ಅರ್ಥವನ್ನು ತಿಳಿಸುವೆನೆಂದು ಹೇಳಿದನು.

ಪಾನದಾಯಕನು ಜೋಸೇಫನನ್ನು ನೋಡಿ; ದ್ರಾಕ್ಷೆಯ ಬಳ್ಳಿಯಲ್ಲಿ ಮೂರು ಗೊಂಚಲು ದ್ರಾಕ್ಷೆ ಹಣ್ಣುಗಳಿದ್ದವು. ಅವು ದಿನ ದಿನಕ್ಕೆ ಬೆಳೆದು ಹಣ್ಣಾಗಲು, ನಾನು ಅವುಗಳನ್ನು ಒಂದು

ಪಾತ್ರೆಯಲ್ಲಿ ಹಿಂಡಿ, ಆ ರಸವನ್ನು ಅರಸನಿಗೆ ಕುಡಿಯಲು ಕೊಟ್ಟ ಹಾಗೆ ಕನಸು ಕಂಡೆನೆಂದನು

ಅದಕ್ಕೆ ಜೋಸೇಫನು ಇದರ ಅರ್ಥವನ್ನು ತಿಳಿಸಲು ಅಂದದ್ದೇನಂದರೆ "ಮೂರು ಗೊಂಚಲುಗಳು ಮೂರು ದಿವಸಗಳಿಗೆ ಗುರ್ತಾಗಿದೆ. ಈ ಮೂರು ದಿವಸಗಳೊಳಗಾಗಿ ಅರಸನು ನಿನ್ನನ್ನು ಮನ್ನಿಸಿ ನಿನ್ನ ಉದ್ಯೋಗವನ್ನು ತಿರುಗಿ ನಿನಗೆ ಕೊಡುವನು. ನೀನು ಬಿಡುಗಡೆಹೊಂದಿದ ಮೇಲೆ ನನ್ನನ್ನು ಮರೆಯಬೇಡ" ಎಂದನು ಅದಕ್ಕೆ ಪಾನದಾಯಕನು ತಾನು ಪುನಃ ಅರಮನೆಯೊಳಗೆ ಹೋದ ಬಳಿಕ ಅವನನ್ನು ಕಾಪಾಡುವೆನೆಂದು ಮಾತುಕೊಟ್ಟನು.

ತರುವಾಯ ರೊಟ್ಟಿಗಾರನು ಸಹ ತಾನು ಕಂಡ ಕನಸನ್ನು ಹೇಳಲಾರಂಭಿಸಿದನು ಏನಂದರೆ, "ನನ್ನ ತಲೆಯಮೇಲೆ ಮೂರು ಫಲಹಾರದ ಪುಟ್ಟಿಗಳನ್ನು ಇಟ್ಟುಕೊಂಡಿದ್ದ ಹಾಗೂ, ಆಕಾಶದ ಪಕ್ಷಿಗಳು ಬಂದು ಅವುಗಳನ್ನು ತಿಂದ ಹಾಗೂ ಕನಸನ್ನು ಕಂಡೆನೆಂದನು.

ಆಗ ಜೋಸೇಫನು "ಮೂರು ಪುಟ್ಟಿಗಳು ಮೂರು ದಿವಸಗಳಿಗೆ ಗುರ್ತಾಗಿವೆ. ಈ ಮೂರು ದಿವಸಗಳೊಳಗೆ ನೀನು ಗಲ್ಲಿಗೇರಿಸಲ್ಪಡುವಿ. ಆಗ ಆಕಾಶದ ಪಕ್ಷಿಗಳು ನಿನ್ನ ಮಾಂಸವನ್ನು ತಿನ್ನುವವು" ಎಂದು ಹೇಳಿದನು.

ಮೂರನೇ ದಿವಸ ಜೋಸೇಫನು ತಿಳಿಸಿದ ಹಾಗೆ ಎಲ್ಲವೂ ನೆರವೇರಿತು. ರೊಟ್ಟಿಗಾರನು ಗಲ್ಲಿಗೇರಿಸಲ್ಪಡಲು ಪಾನದಾಯಕನು ತನ್ನ ಉದ್ಯೋಗಕ್ಕೆ ತಿರಿಗಿ ಹೋದನು. ಆದರೆ ಜೋಸೇಫನಿಗೆ ಸಹಾಯ ಮಾಡಲು ಮರೆತು ಬಿಟ್ಟನು.

ಜೋಸೇಫನು ಸೆರೆಮನೆಯಲ್ಲಿ ಇಬ್ಬರು ಖೈದಿಗಳೊಂದಿಗೆ ಇದ್ದು ಅವರಲ್ಲಿ ಒಬ್ಬನು ರಕ್ಷಿಸಲ್ಪಟ್ಟು ಮತ್ತೊಬ್ಬನು ಶಿಕ್ಷಿಸಲ್ಪಟ್ಟದ್ದು, ಯೇಸುನಾಥ ಸ್ವಾಮಿ ಶಿಲುಬೆಯ ಮರದಲ್ಲಿರುವಾಗ ಇಬ್ಬರು ಕಳ್ಳರ ಮಧ್ಯದಲ್ಲಿದ್ದು ಅವರಲ್ಲಿ ಒಬ್ಬನು ಮೋಕ್ಷವನ್ನು ಹೊಂದಿದಕ್ಕೆ ಹೋಲಿಕೆಯಾಗಿದೆ.

## 14 ಅರಸನ ಸ್ವಪ್ನವು

ಎರಡು ವರ್ಷಗಳ ತರುವಾಯ ಏಜಿಪ್ತ ದೇಶದ ರಾಜನಿಗೆ ಎರಡು ವಿಚಿತ್ರವಾದ ಕನಸುಗಳು ಬಿದ್ದವು. ಅವು ಯಾವವೆಂದರೆ, ಆತನು ಒಂದು ನದಿಯ ಬಳಿಯಲ್ಲಿ ನಿಂತಿರುವಾಗ ಆ ನದಿಯೊಳಗಿಂದ ಪುಷ್ಟಿಕರವೂ ಅಲಂಕರವಾದ ಏಳು ಆಕಳುಗಳು ಬಂದು, ಪುಷ್ಟಿಕರವಾದ ಆಕಳುಗಳನ್ನು ನುಂಗಿಬಿಟ್ಟವು.

ಈ ಕನಸನ್ನು ಕಂಡಮೇಲೆ ಅರಸನು ಬಹಳ ಅಂಜಿ ಎಚ್ಚತ್ತನು. ಆದರೆ ತಿರುಗಿ ಮಲಗಿದಾಗ ಮತ್ತೆ ಇನ್ನೊಂದು ಕನಸಿನಲ್ಲಿ ಒಂದೇ ದಂಟಿನಲ್ಲಿ ಪುಷ್ಟಿಕರವಾದ ಏಳು ತೆನೆಗಳು ಹೊರಟ ಹಾಗೂ, ಕೂಡಲೇ ಅದೇ ದಂಟಿನಲ್ಲಿ ಸೀದ ಏಳು ತೆನೆಗಳು ಮೊಳೆತು ಪುಷ್ಟಿಕರವಾದ ತೆನೆಗಳನ್ನು ನುಂಗಿದ ಹಾಗೆ ಕಂಡನು.

ಅರಸನಿಗೆ ಈ ಕನಸಿನ ಅರ್ಥ ತಿಳಿಯದುದರಿಂದ ಬಹಳ ಆಯಾಸಗೊಂಡನು. ಮತ್ತು ಈವುಗಳ ಅರ್ಥವನ್ನು ತಿಳಿಸುವದಕ್ಕೋಸ್ಕರ ಏಜಿಪ್ತ ದೇಶದಲ್ಲಿದ್ದ ವಿದ್ಯಾ ಶಾಸ್ತ್ರಿಗಳನ್ನೆಲ್ಲ ಕರೆಸಿದನು. ಆದರೆ ಇವುಗಳ ತಾತ್ಪರ್ಯವನ್ನು ಹೇಳಲು ಅವರಿಂದ ಕೂಡದೆ ಹೋಯಿತು.

ಕಡೆಗೆ ಪಾನದಾಯಕನು ಜೋಸೇಫನನ್ನು ನೆನಸಿಕೊಂಡು ಹೇಳಿದ್ದೇನಂದರೆ "ನಾನೂ ರೊಟ್ಟಿಗಾರನೂ ಕೂಡಿ ಸೆರೆಮನೆಯಲ್ಲಿರುತ್ತಿದ್ದಾಗ ಲಿಬ್ಬರೂ ವಿಚಿತ್ರವಾದ ಕನಸುಗಳನ್ನು ಕಂಡೆವು. ಅವುಗಳನ್ನು ಒಬ್ಬ ಇಸ್ರಾಯೇಲನು ಬಿಡಿಸಿ ಹೇಳಿದನು. ಮತ್ತು ಅವನು ತಿಳಿಸಿದಂತೆ ಎಲ್ಲಾ ನೆರವೇರಿತು ಎಂದನು. ಇದನ್ನು ಕೇಳಿ ಅರಸನು ಕೂಡಲೇ ಜೋಸೇಫನನ್ನು ಕರೆಯಲು ಸೆರೆಮನೆಗೆ ಆಳನ್ನು ಕಳುಹಿಸಿದನು.

ಜೋಸೇಫನು ಬಂದಮೇಲೆ ಅರಸನು ಆತನನ್ನು ನೋಡಿ "ನೀನು ಸ್ವಪ್ನಗಳ ಅರ್ಥವನ್ನು ತಿಳಿಸುತ್ತೀಯೆಂದು ಕೇಳಿದ್ದೇನೆ. ನನ್ನ ಕನಸಿನ ಅರ್ಥವನ್ನು ಸಹ ಹೇಳಬಲ್ಲೆಯಾ?

ಅದಕ್ಕೆ ಜೋಸೇಫನು "ದೇವರ ಸಹಾಯದಿಂದ ಹೇಳುವೆನು ಎಂದು ಪ್ರತ್ಯುತ್ತರ ಕೊಟ್ಟನು. ಆಗ ಅರಸನು ತಾನು ಕಂಡ ಕನಸುಗಳನ್ನು ತಿಳಿಸಿದನು.

ಜೋಸೇಫನು ಇವುಗಳನ್ನು ಕೇಳಿ ಈ ಎರಡು ಸ್ವಪ್ನಗಳ ಅರ್ಥವು ಒಂದಾಗಿರುತ್ತದೆ. ಸರ್ವೇಶ್ವರನು ಮುಂದೆ ಬರಲಿಕ್ಕಿರುವ ಭವಿಷತ್ತನ್ನು ಅರಸನಿಗೆ ತಿಳಿಸಿರುತ್ತಾನೆ. ಏಳು ಕೊಬ್ಬಿದ ಆಕಳು ಸುಭಿಕ್ಷವಾದ ಏಳು ವರ್ಷಗಳನ್ನು ಸೂಚಿಸುತ್ತವೆ. ಏಳು ಬಡ ಆಕಳುಗಳು ಕ್ಷಾಮದ ಏಳು ವರ್ಷಗಳನ್ನು ತಿಳಿಸುತ್ತವೆ. ಪುಷ್ಟಿಕರವಾದ ಏಳು ತೆನೆಗಳು ಸುಭಿಕ್ಷವಾದ ಏಳು ವರ್ಷಗಳನ್ನು ಸೂಚಿಸುತ್ತವೆ. ಸೀದ ಏಳು ತೆನೆಗಳು ಕ್ಷಾಮದ ಏಳು ವರ್ಷಗಳನ್ನು ತಿಳಿಸುತ್ತವೆ. ಈ ಎರಡೂ ಸ್ವಪ್ನಗಳು ಒಂದೇಯಾಗಿರುತ್ತವೆ. ಮತ್ತು ಒಂದೇ ಅರ್ಥವನ್ನು ತಿಳಿಸುತ್ತವೆ. ಏನಂದರೆ ಈ ಐಜಿಪ್ಟ ದೇಶದಲ್ಲಿ ಸುಭಿಕ್ಷವಾದ ಫಲ

ಗಳನ್ನು ಕೊಡುವಂಥ ಏಳು ವರ್ಷಗಳು ಆದಮೇಲೆ ಕಠಿಣವಾದ ಕ್ಷಾಮವು ಏಳು ವರ್ಷಗಳ ವರೆಗೆ ಬರುವದು. ಆದುದರಿಂದ ತಾವು ಬುದ್ಧಿವಂತನಾದ ಒಬ್ಬ ನಿಯೋಗಿಯನ್ನು ನೇಮಿಸಿ, ಅವನಿಗೆ ಈಜಿಪ್ತ ದೇಶದ ಮೇಲೆ ಅಧಿಕಾರವನ್ನು ಕೊಟ್ಟು, ಸುಭಿಕ್ಷವಾದ ಕಾಲದಲ್ಲಿ ಬೆಳೆಯುವ ಧಾನ್ಯಗಳನ್ನು ಬರಗಾಲಕ್ಕೆ ಒದಗುವಹಾಗೆ ಮಾಡಿರೆಂದು" ಹೇಳಿದನು.

## 15 ಜೋಸೇಫನು ಈಜಿಪ್ತದೇಶದ ಅಧಿಕಾರಿಯಾದದ್ದು

ಅರಸನು ಜೋಸೇಫನು ಹೇಳಿದ್ದೆಲ್ಲವನ್ನು ಕೇಳಿ ಬಹಳ ಸಂತೋಷಪಟ್ಟನು. ಮತ್ತು "ಇಷ್ಟು ದೈವ ಶಕ್ತಿಯಿಂದ ತುಂಬಿದಂಥಾ ಇನ್ನೊಬ್ಬ ಬುದ್ಧಿಶಾಲಿಯಾದವನು ಇರುವನೋ ಎಂದು ತನ್ನ ಸೇವಕರನ್ನು ಕೇಳಿ ಜೋಸೇಫನ ಕಡೆಗೆ ತಿರುಗಿ, ಇದಕ್ಕೆ ನಿನಗಿಂತಲೂ ಬುದ್ಧಿಶಾಲಿಯಾದವನು ಬೇರೆ ಯಾರಾದರೂ ಇದ್ದಾನೋ? ಪರ್ಮೇಶ್ವರನು ನಿನಗೆ ಎಲ್ಲವನ್ನೂ ಗೊತ್ತುಮಾಡಿರುವದರಿಂದ ನೀನೇ ನನ್ನ ಉಗ್ರಾಣಿಕನಾಗಿರು. ಇಜಿಪ್ತ ರಾಜ್ಯದ ಸರ್ವಾಧಿಕಾರವನ್ನು ನಿನಗೆ ಕೊಡುತ್ತೇನೆ. ನಾನು ತಪ್ಪ ನಿನ್ನ ಮೇಲೆ ಯಾರು ಅಧಿಕಾರರಿಲ್ಲ"ಎಂದನು.

ಅರಸನು ತನ್ನ ಉಂಗುರವನ್ನು ತೆಗೆದು ಜೋಸೇಫನ ಬೆರಳಿಗೆ ಹಾಕಿ ಅಧಿಕಾರದ ಗುರ್ತನ್ನು ತೋರಿಸಿ, ಎಲ್ಲರೂ ಆತನಿಗೆ ಒಳಪಟ್ಟಿರಬೇಕು. ಎಂದು ಕಟ್ಟಳೆ ಮಾಡಿದನು ಮತ್ತು ಆತನಿಗೆ ಒಂದು ರಥವನ್ನು ಕೊಟ್ಟು ಅದರ ಮುಂದೆ ಒಬ್ಬ ಶಿಪಾಯಿಯು ಹೋಗುತ್ತಾ, "ಎಲ್ಲರೂ ಮೊಣಕಾಲು ಹಾಕಿರಿ. ಯಾಕಂದರೆ ಈಜಿಪ್ತ ದೇಶದ ಅಧಿಕಾರಿಯಾದ

ಜೋಸೇಫನು ಬರುತ್ತಿದ್ದಾನೆ" ಎಂದು ಕೂಗಿ ಹೇಳಲು ಆಜ್ಞಾಪಿಸಿದನು.

ಜೋಸೇಫನು ಸರ್ವೇಶ್ವರನಿಗೆ ನಿಂದೆ ಬರಮಾಡುವದಕ್ಕಿಂತಲೂ ಶೆರೆಮನೆಯಲ್ಲಿರಲು ಸಿದ್ಧನಾಗಿದ್ದನು. ಆದ್ದರಿಂದ ಇಂಥ ಸ್ಥಿತಿಯಲ್ಲಿ ಸಹ ದೇವರು ಅವನಿಗೆ ಆಸ್ತಿಯನ್ನು ಗೌರವವನ್ನು ಕೊಟ್ಟರು.

ಸುಭಿಕ್ಷವಾದ ಏಳು ವರ್ಷಗಳು ಪ್ರಾರಂಭಿಸಿದ ಕೂಡಲೇ ಇಜಿಪ್ತ ದೇಶದಲ್ಲೆಲ್ಲಾ ಒಳ್ಳೇ ಬೆಳೆ ಬೆಳೆಯಿತು. ಭೂಮಿಯು ಒಳ್ಳೇ ಫಲವನ್ನು ಕೊಟ್ಟಿತು. ಪ್ರತಿಯೊಬ್ಬೊಬ್ಬನಿಗೂ ಸಾಕಾಗುವಷ್ಟು ಧಾನ್ಯವಿತ್ತು. ಇದನ್ನು ನೋಡಿ ಜೋಸೇಫನು ಅನೇಕ ದೊಡ್ಡ ಕಣಜಗಳನ್ನು ಕಟ್ಟಿಸಿ ಅವುಗಳ ತುಂಬ ಧಾನ್ಯವನ್ನು ತುಂಬಿಸಲು ತನ್ನ ಸೇವಕರಿಗೆ ಆಜ್ಞಾಪಿಸಿದನು.

ಸುಭಿಕ್ಷವಾದ ಏಳು ವರ್ಷಗಳು ಕಳೆದುಹೋದಮೇಲೆ ಜೋಸೇಫನು ಹೇಳಿದ ಭವಿಷತ್ತಿನ ಪ್ರಕಾರ ಕ್ಷಾಮದ ಏಳು ವರ್ಷಗಳು ಪ್ರಾರಂಭಿಸಿದವು. ಇಂಥಾ ಕ್ಷಾಮವು ಎಂದೆಂದಿಗೂ ಬಂದಿದ್ದಿಲ್ಲ. ಈ ಸಮಯದಲ್ಲಿ ಈಜಿಪ್ತ ದೇಶದಲ್ಲಿ ಮಾತ್ರ ಧಾನ್ಯವಿತ್ತು. ಕ್ಷಾಮವು ಪ್ರಾರಂಭಿಸಿದಮೇಲೆ, ಏಜಿಪ್ತ ದೇಶದ ಜನರು ತಮ್ಮ ಹತ್ತರವಿದ್ದ ಧಾನ್ಯವೆಲ್ಲ ಮುಗಿದ ಬಳಿಕ ಅರಸನ ಹತ್ತರ ಬಂದು "ನಮ್ಮನ್ನು ಪೋಷಿಸಬೇಕು. ಇಲ್ಲವಾದರೆ ಹಸಿವೆಯಿಂದ ಸಾಯುವೆವು" ಎಂದು ಮೊರೆ ಇಟ್ಟರು. ಅದಕ್ಕೆ ಅರಸನು ''ನೀವು ಜೋಸೇಫನ ಬಳಿಗೆ ಹೋಗಿರಿ. ಮತ್ತು ಆತನು ಹೇಳಿದ ಹಾಗೆ ಮಾಡಿರಿ'' ಎಂದು ಹೇಳುತ್ತಿದ್ದನು.

ಜೋಸೇಫನು ಕಣಜಗಳನ್ನು ಒಂದು ಮುಗಿದ ಮೇಲೆ ಇನ್ನೊಂದನ್ನು ತೆಗೆಯುವಹಾಗೆ ತನ್ನ ಸೇವಕರಿಗೆ ಆಜ್ಞಾಪಿಸಿದನು. ಧಾನ್ಯವು ಪ್ರಜೆಗಳಿಗೆ ಬೆಲೆಗೆ ಕೊಟ್ಟದ್ದರಿಂದ ಈಜಿಪ್ತ ದೇಶದಲ್ಲಿ ಒಬ್ಬನಾದರೂ ಹಸಿವೆಯಿಂದ ಸಾಯಲಿಲ್ಲ, ಯಾಕಂದರೆ ಜೋಸೇಫನು ಬಹಳ ಬುದ್ಧಿಯಿಂದ ಸುಭಿಕ್ಷವಾದ ಕಾಲದಲ್ಲಿ ಧಾನ್ಯವನ್ನು ಸೇಕರಿಸಿಟ್ಟಿದ್ದನು.

ಕೂಡಲೇ ಈ ಸಂಗತಿಯು ದೇಶದ ಅನೇಕ ಭಾಗಗಳಲ್ಲಿ ಹಬ್ಬಿತು. ಆದ್ದರಿಂದ ದೂರದಿಂದಲೂ, ಹತ್ತಿರದಿಂದಲೂ ಜನರು ಜೋಸೇಫನಿಂದ ಧಾನ್ಯಗಳನ್ನು ವಯ್ಯಲು ಬರುತ್ತಿದ್ದರು.

## 16 ಜೋಸೇಫನು ಮತ್ತು ಆತನ ಸಹೋದರರು

ಕಾನನ್ ದೇಶದಲ್ಲಿ ಸಹ ಕ್ಷಾಮವು ಬಂದದರಿಂದ ಅಲ್ಲಿದ್ದವರಿಗೆ ಸಹ ಬಹಳ ಕಷ್ಟವಾಗಿತ್ತು. ಆದ್ದರಿಂದ ಜಾಕೋಬನು ತನ್ನ ಪ್ರಿಯ ಮಗನಾದ ಬೆಂಜಮಿನನನ್ನು ತನ್ನ ಹತ್ತಿರವಿಟ್ಟುಕೊಂಡು ಉಳಿದ ಹತ್ತು ಮಂದಿಯನ್ನು ಧಾನ್ಯವನ್ನು ತರುವುದಕ್ಕಾಗಿ ಈಜಿಪ್ತ ದೇಶಕ್ಕೆ ಕಳುಹಿಸಿದನು.

ಜೋಸೇಫನು ತನ್ನ ಸಹೋದರರನ್ನು ಕಂಡ ಕೂಡಲೇ ಅವರನ್ನು ಗುರ್ತಿಸಿದನು. ಆದರೆ ಅವರು ಆತನನ್ನು ಕಂಡು ಹಿಡಿಯಲಿಲ್ಲ. ಜೋಸೇಫನು ಅವರನ್ನು ಮೋಸಗಾರರೆಂದು ನಟಿಸುತ್ತಾ ಅವರು ಬೆಂಜಮಿನನನ್ನು ಕರಕೊಂಡು ಬರುವ ತನಕ ಸಿಮೋನನನ್ನು ಬಿಡುವದಿಲ್ಲವೆಂದು ಆತನನ್ನು ಸೆರೆಯಲ್ಲಿ ಹಾಕಿಸಿದನು. ಮತ್ತು ಅವರು ಒಯ್ಯಲಿಕ್ಕಾದಷ್ಟು ಧಾನ್ಯಗಳನ್ನು ಅವರಿಗೆ ಕೊಟ್ಟನು.

ಈ ಸಂಗತಿಯನ್ನು ಜಾಕೋಬನು ಕೇಳಿದ ಕೂಡಲೇ ಬಹಳ ಚಿಂತಾಕ್ರಾಂತನಾಗಿ, ಬೆಂಜಮಿನನಿಗೆ ಏನಾದರೂ ಅಪಾಯ ಬರುವದೆಂದು ಆತನನ್ನು ಕಳಿಸಲು ತಿರಸ್ಕರಿಸಿದನು.

ಹೀಗಿರುವಾಗ ಆತನ ಸಹೋದರರು ತಂದಂಥಾ ಧಾನ್ಯವೆಲ್ಲವೂ ಮುಗಿದು ಹೋಯಿತು. ಜಾಕೋಬನು ಧಾನ್ಯವನ್ನು ಕೊಂಡುಕೊಂಡು ಬರಲು ತನ್ನ ಮಕ್ಕಳಿಗೆ ಹೇಳಿದನು. ಆದರೆ ಅವರು ಬೆಂಜಮಿನನನ್ನು ಕಳಿಸುವ ವರೆಗೆ ಹೋಗುವದಿಲ್ಲವೆಂದು ಹಟ ಹಿಡಿದರು. ಯಾಕಂದರೆ ಒಂದು ವೇಳೆ ಜೋಸೇಫನು ತಮಗೆ ಧಾನ್ಯವನ್ನು ಕೊಡಲಿಕ್ಕಿಲ್ಲವೆಂದು ತಿಳಿದರು. ಅವರಲ್ಲಿ ಹಿರಿಯನಾದ ಜುದಾಸನು ತಾನು ಬೆಂಜಮಿನನನ್ನು ಮತ್ತೆ ಹಿಂತಿರುಗಿ ಕರಕೊಂಡು ಬರುವೆನೆಂದು ಪ್ರತಿಜ್ಞೆ ಮಾಡಿದನು. ಆದ್ದರಿಂದ ಜಾಕೋಬನು ಅವನ ಮಾತಿಗೆ ಒಡಂಬಟ್ಟು ತನ್ನ ಕಿರಿಯ ಮಗನನ್ನು ಅವನ ಸಹೋದರರೊಂದಿಗೆ ಈಜಿಪ್ತ ದೇಶಕ್ಕೆ ಕಳಿಸಿಕೊಟ್ಟನು.

ಜೋಸೇಫನು ಬೆಂಜಮಿನನನ್ನು ಕಂಡಕೂಡಲೇ ಆನಂದಭಾಷ್ಪಗಳನ್ನು ಸುರಿಸಿದರು. ಮತ್ತು ತನ್ನ ಸಹೋದರರ ಸಲುವಾಗಿ ಒಳ್ಳೇ ಭೋಜನವನ್ನು ತಯಾರು ಮಾಡಿಸಿದನು. ಮತ್ತು ಅವರು ತಂದ ಗೋಣಿ ಚೀಲಗಳನ್ನು ಧಾನ್ಯಗಳಿಂದ ತುಂಬಿಸಲು ತನ್ನ ಸೇವಕರಿಗೆ ಆಜ್ಞಾಪಿಸಿದನು.

ಕೊನೆಗೆ ಜೋಸೇಫನ ಸಹೋದರರು ಕಾನಾ ಪಟ್ಟಣಕ್ಕೆ ಪ್ರಯಾಣರಾದರು. ಅವರು ಸ್ವಲ್ಪ ದೂರ ಹೋಗುವದರೊಳಗೆ ಜೋಸೇಫನ ಸೇವಕರಲ್ಲಿ ಒಬ್ಬನು ಅವರ ಹತ್ತಿರ ಬಂದು ರಾಜನ ಬೆಳ್ಳಿಯ ಪಾತ್ರೆಯನ್ನು ನೀವು ಕಳವು ಮಾಡಿಕೊಂಡು

ಹೋಗುತ್ತೀರಿ ಎಂದು ಗದ್ದರಿಸಿದನು. ಆಗ ಅವರು ಅದು ತಮ್ಮಲ್ಲಿ ಇಲ್ಲವೆಂದು ಋಜುಪಡಿಸಲು ತಮ್ಮ ಚೀಲಗಳನ್ನು ಶೋಧಿಸಲು ಹೇಳಿದರು. ಆಗ ಬೆಳ್ಳಿಯ ಪಾತ್ರೆಯು ಬೆಂಜ ಮಿಾನನ ಚೀಲದಲ್ಲಿ ದೊರಕಿದ್ದರಿಂದ ಅವರು ಬಹಳ ನಾಚಿಕೆ ಪಟ್ಟು ಭಯದಿಂದ ಜೋಸೇಫನ ಹತ್ತಿರ ತಿರುಗಿ ಹೋದರು.

ಆಗ ಜೋಸೇಫನು ತನ್ನ ಸೇವಕರಲ್ಲಿ ಒಬ್ಬನಿಗೆ ಆ ಪಾತ್ರೆ ಯನ್ನು ಬೆಂಜಮಿಾನನ ಚೀಲದಲ್ಲಿ ಹಾಕಲು ಆಜ್ಞಾಪಿಸಿದ್ದ ರಿಂದ, ಅದು ಬೆಂಜಮಿಾನನ ಚೀಲದಲ್ಲಿ ಸಿಕ್ಕಕಾರಣ ಆ ಪಾತ್ರೆ ಯಾರಲ್ಲಿ ಸಿಕ್ಕಿತೋ ಆತನು ನನ್ನಲ್ಲಿ ಆಳಾಗಿ ದುಡಿಯಬೇಕು. ಉಳಿದವರು ನೀವು ನಿಮ್ಮ ತಂದೆಯ ಮನೆಗೆ ತಿರುಗಿ ಹೋಗ ಬಹುದು. ಎಂದು ಹೇಳಿದನು.

ಅದಕ್ಕೆ ಜೂದಾಸನು ನಾನು ನಿಮ್ಮ ಸೇವಕನಾಗುವೆನು! ಬೆಂಜಮಿಾನನನ್ನು ತಿರುಗಿ ಕಳುಹಿಸದಿದ್ದರೆ ನಾನು ನನ್ನ ತಂದೆಗೆ ಏನನ್ನು ಹೇಳಲಿ! ಆತನು ಈ ವ್ಯಸನದಿಂದ ಸಾಯುವ ನೆಂದು ಎಂದನು.

ಜೋಸೇಫನು ಇದನ್ನು ಕೇಳಿ ಇನ್ನು ತಡೆಯಲಾರದೆ ಅವರ ಮುಂದೆ ಕಣ್ಣೀರನ್ನು ಸುರಿಸಿ, "ನಾನು ನಿಮ್ಮ ಸಹೋ ದರನಾದ ಜೋಸೇಫನು! ಎಂದು ಅವರನ್ನು ಪ್ರೇಮದಿಂದ ಅಪ್ಪಿ ಕೊಂಡನು. ಜೋಸೇಫನು ತನ್ನ ಸಹೋದರರ ತಪ್ಪನ್ನು ಕ್ಷಮಿ ಸಿದ್ದು ಜೇಸುನಾಥ ಸ್ವಾಮಿ ನಮ್ಮ ಪಾಪಗಳನ್ನು ಒಳ್ಳೇ ಮನ ಸ್ಸಾಸದಿಂದ ಮನ್ನಿಸಿದ್ದಕ್ಕೆ ಹೋಲ್ಕಿಕೆಯಾಗಿದೆ.

## 17 ಜಾಕೋಬನು ಇಜಪ್ತ ದೇಶಕ್ಕೆ ಹೋದ ವರ್ತಮಾನವು

ಜೋಸೇಫನು ಜಾಕೋಬನಿಗೆ ತಕ್ಕೊಂಡು ಹೋಗಲು ತನ್ನ ಸಹೋದರರಿಗೆ ಅನೇಕ ಬಹುಮಾನಗಳನ್ನು ಕೊಟ್ಟನು. ಮತ್ತು ಬಂಡಿಗಳ ತುಂಬ ಭೋಜನ ಸಾಮಗ್ರಿಗಳನ್ನು ಕಳಿಸಿದನು. ಅವರು ತಿರುಗಿ ಬರುವಾಗ ತಮ್ಮ ತಂದೆಯಾದ ಜಾಕೋಬನನ್ನು, ಅವರ ಕುಟುಂಬಗಳನ್ನು ಮಿಕ್ಕಾದ ಎಲ್ಲಾ ವಸ್ತುಗಳನ್ನು ಈಜಿಪ್ತ ದೇಶಕ್ಕೆ ತಕ್ಕೊಂಡು ಬರಲು ಹೇಳಿದನು.

ಜಾಕೋಬನ ಕುಮಾರರು ಜೋಸೇಫನು ಇನ್ನು ಬದುಕಿದ್ದಾನೆಂದು ತಮ್ಮ ತಂದೆಗೆ ತಿಳಿಸಿದಾಗ ಆತನು ಅವರ ಮಾತನ್ನು ನಂಬಲಿಲ್ಲ. ಆದರೆ ಅವರು ತಂದ ವಸ್ತುಗಳನ್ನು ನೋಡಿ, ಅಂದದ್ದೇನಂದರೆ "ಜೋಸೇಫನು ಇನ್ನೂ ಜೀವಿಸುತ್ತಿದ್ದಾನೆ! ನಾನು ಸಾಯುವದಕ್ಕಿಂತ ಮುಂಚೆ ಹೋಗಿ ಆತನನ್ನು ನೋಡುವೆನು ಎಂದನು. ಕೂಡಲೇ ಅವರು ತಿರುಗಿ ಈಜಿಪ್ತ ದೇಶಕ್ಕೆ ಪ್ರಯಾಣರಾದರು ಒಂದು ರಾತ್ರಿ ಜಾಕೋಬನು ನಿದ್ರಿಸುತ್ತಿರುವಾಗ ಸರ್ವೇಶ್ವರನು ಆತನಿಗೆ ದರ್ಶನವಾಗಿ ಹೇಳಿದ್ದೇನಂದರೆ "ಅಂಜಬೇಡ. ಈಜಿಪ್ತ ದೇಶಕ್ಕೆ ಹೋಗು. ಅಲ್ಲಿ ನಾವು ನಿನ್ನನ್ನು ಹೆಚ್ಚಿಸಿ, ಅಭಿವೃದ್ಧಿಯಾಗಿ ಮಾಡಿ, ನಿನ್ನಿಂದ ಜನಾಂಗಗಳು ಪ್ರಬಲವಾಗುವ ಹಾಗೆ ಮಾಡುವೆವು. ಮತ್ತು ತಿರುಗಿ ನಿನ್ನನ್ನು ಕಾನಾನ್ ದೇಶಕ್ಕೆ ಕರೆತರುವೆವು ಎಂದರು.

ಜಾಕೋಬನು ಬರುತ್ತಿದ್ದಾನೆಂದು ತಿಳಿಸುವದಕ್ಕಾಗಿ ಹಿರಿಯನಾದ ಜಾದನೆಂಬವನು ಮುಂದೆ ಹೋದನು. ಆಗ

ಜೋಸೇಫನು ತನ್ನ ತಂದೆಯನ್ನು ಭೆಟ್ಟಿಯಾಗಲು ರಥವನ್ನು ಹತ್ತಿ ಹೋದನು. ತಂದೆಯನ್ನು ಕಂಡಕೂಡಲೇ ಆತನನ್ನು ಅಪ್ಪಿಕೊಂಡು ಆನಂದ ಭಾಷ್ಪಗಳನ್ನು ಸುರಿಸಿದನು. ಜಾಕೋಬನೋ ಎಂದರೆ ತನ್ನ ಮಗನು ಇನ್ನೂ ಜೀವದಿಂದ ಇರುವದಿಂದ ಕಂಡು ಹೇಳಿದ್ದೇನಂದರೆ "ಈಗ ನಾನು ಸಂತೋಷದಿಂದ ಮರಣಹೊಂದುವೆನು. ಯಾಕಂದರೆ ನಾನು ನಿನ್ನ ಮುಖವನ್ನು ತಿರುಗಿ ನೋಡಿದೆನು. ಮತ್ತು ನೀನು ಜೀವದಿಂದ ಇರುವಿಯೆಂದು ತಿಳಕೊಂಡನು.

ಅರಸನ ಅಪ್ಪಣೆಯ ಮೇರೆಗೆ ಜೋಸೇಫನು ತನ್ನ ತಂದೆಗೂ ಮತ್ತು ಸಹೋದರರಿಗೂ ಒಳ್ಳೇ ಫಲವತ್ತಾದ ಹೊಲವನ್ನು ಜೆಸ್ಸೆನ್ ಪಟ್ಟಣದಲ್ಲಿ ಕೊಟ್ಟನು. ಅಲ್ಲಿ ಅವರು ನಿವಾಸಿಸಿ, ಒಕ್ಕಲುತನವನ್ನು ಮಾಡುತ್ತಿದ್ದರು. ಅರಸನ ದನಗಳನ್ನು ಸಹ ಇವರ ಸ್ವಾಧೀನದಲ್ಲಿ ಕೊಟ್ಟನು. ಅರಸನು ಜಾಕೋಬನನ್ನು ಕಂಡು ಬಹಳ ಸಂತೋಷಪಟ್ಟು ಆತನನ್ನು ಆಶೀರ್ವದಿಸಿದನು.

ಇಸ್ರಾಯೇಲರು ಜೆಸ್ಸೆನ್ ಎಂಬ ಪಟ್ಟಣದಲ್ಲಿ ಹದಿನೇಳು ವರ್ಷಗಳ ವರೆಗೆ ವಾಸ ಮಾಡಿದರು. ಜಾಕೋಬನು ಅಲ್ಲಿ ಆತನಿಗೆ ನೂರ ನಾಲ್ವತ್ತೇಳು ಪ್ರಾಯವಿರುವಾಗ ಮರಣ ಹೊಂದಿದನು. ಜಾಕೋಬನು ಸಾಯುವದಕ್ಕಿಂತ ಮುಂಚೆ, ತನ್ನ ಹೆಣವನ್ನು ಕಾನಾದೇಶದಲ್ಲಿ ಅಬ್ರಹಾಮ ಈಸಾಕೆಂಬವರು ಸಮಾಧಿಯ ಬಳಿಯಲ್ಲಿಯೇ ಭೂಸ್ಥಾಪನೆ ಮಾಡಬೇಕೆಂದು ಜೋಸೇಫನಿಗೆ ಆಜ್ಞಾಪಿಸಿದನು. ತರುವಾಯ ತನ್ನ ಹನ್ನೆರಡು ಮಂದಿ ಮಕ್ಕಳನ್ನು ಕರೆದು ಪ್ರತಿಯೊಬ್ಬನಿಗೆ ತನ್ನ ಆಶೀರ್ವಾದವನ್ನು ಕೊಟ್ಟನು.

ಜೂದಾಸನಿಗೆ ಶ್ರೇಷ್ಠವಾದ ಆಶೀರ್ವಾದವನ್ನು ಕೊಡುತ್ತಾ ಹೇಳಿದ್ದೇನಂದರೆ "ನೀನು ನಿನ್ನ ಶತೃಗಳನ್ನು ಆಳುನಿ. ನಿನ್ನ ಪಿತಾ ಪಿತ್ರರ ಮಕ್ಕಳು ನಿನ್ನನ್ನು ನಮಸ್ಕರಿಸುವರು. ನಿನ್ನ ಗೋತ್ರಕ್ಕೆ ರಾಜಾಧಿಕಾರವು ಬಂದು, ಒಂದೂ ಕಾಲಕ್ಕೂ ಅದನ್ನು ಬಿಟ್ಟು ಅಗಲದೆ ಇರುವದೆಂದು ತಿಳಿಸಿದನು. ಈ ದೀರ್ಘ ದರ್ಶನವು, ಜೇಸುನಾಥರು ಹುಟ್ಟುವ ಮೊದಲು ಹೆರೋದನು ಜೂದಾನಗರವನ್ನು ಆಳುವಾಗ ಸ್ಪಷ್ಟವಾಗಿ ನೆರವೇರಿತು. ಹೇರೋದನ ಕಾಲದಲ್ಲಿ ಜೂದಾಸನ ವಂಶವು ಹಾಳಾಯಿತು. ತರುವಾಯ ಜೇಸುನಾಧರು ದೀರ್ಘ ದರ್ಶನ ಹೇಳಿದ ಹಾಗೆ ಜೂದಾಸನ ವಂಶದಲ್ಲಿ ಹುಟ್ಟಿದರು.

## 18 ಜೋಬನ ಕಷ್ಟಗಳು

ಜೋಸೇಫನ ಕಾಲದಲ್ಲಿ ಅರೇಬಿಯಾ ಪಟ್ಟಣದಲ್ಲಿ ಉಜ್ ಎಂಬ ಊರಿನಲ್ಲಿ ಜೋಬೆಂಬ ಹೆಸರುಳ್ಳ ಒಬ್ಬ ಪುಣ್ಯಾತ್ಮನಿದ್ದನು. ಈತನು ಪಾಪಕ್ಕೆ ಅಂಜುತ್ತಾ ದೇವರ ಮೇಲೆ ಬಹು ಭಕ್ತಿಯುಳ್ಳವನಾಗಿದ್ದನು. ಈತನಿಗೆ ಏಳು ಮಂದಿ ಗಂಡುಮಕ್ಕಳೂ ಮೂವರು ಹೆಣ್ಣು ಮಕ್ಕಳಿದ್ದರು. ಈತನಿಗೆ ಏಳುಸಾವಿರ ಕುರಿಗಳೂ, ಮೂರು ಸಾವಿರ ಒಂಟೆಗಳೂ, ಐದು ಸಾವಿರ ಎತ್ತುಗಳೂ ಮತ್ತು ಐದು ಸಾವಿರ ಕತ್ತೆಗಳಿದ್ದವಲ್ಲದೆ ಇನ್ನೂ ಅನೇಕ ತರದ ಸಂಪತ್ತೂ ಇತ್ತು.

ಒಂದು ದಿನ ಸರ್ವೇಶ್ವರನು ಜೋಬನ ಒಳ್ಳೇಯತನವನ್ನು ಪರೀಕ್ಷೆ ಮಾಡಲು ನೆನಸಿ ಸೈತಾನನನ್ನು ನೋಡಿ; "ನನ್ನ ಸೇವಕನಾದ ಜೋಬನ ಪುಣ್ಯವನ್ನು ನೀನು ಕಂಡೆಯಲ್ಲಾ?" ಆತನ ಹಾಗೆ ಸನ್ಮಾರ್ಗದಲ್ಲಿ ನಡೆಯುವಂಥವರು

ಈ ಲೋಕದಲ್ಲಿ ಯಾರೂ ಇಲ್ಲವಲ್ಲ. ಆತನು ಕೆಟ್ಟದ್ದನ್ನು ಬಿಟ್ಟು ಒಳ್ಳೇದನ್ನು ಮಾತ್ರ ಮಾಡುತ್ತಾನೆ ಎಂದರು. ಅದಕ್ಕೆ ಸೈತಾನನು ಬದುಲುತ್ತರ ಹೇಳಿದ್ದೇನಂದರೆ, "ಆತನು ಬಹಳ ಭಾಗ್ಯವುಳ್ಳವನಾಗಿರುವದರಿಂದ ಒಳ್ಳೇಯವನಾಗಿ ವರ್ತಿಸಲು ಆತನಿಗೆ ಸುಲಭವಾಗಿದೆ.

ಅದಕ್ಕೆ ಸರ್ವೇಶ್ವರನು ಸೈತಾನನ್ನು ನೋಡಿ; "ಜೋಬನ ಆಸ್ತಿಯನ್ನೆಲ್ಲ ನಿನ್ನ ಇಷ್ಟದ ಪ್ರಕಾರ ಮಾಡಲು ನಿನಗೆ ಅಪ್ಪಣೆಯನ್ನು ಕೊಡುತ್ತೇವೆ. ಆದರೆ ನೀನು ಅವನನ್ನು ಮುಟ್ಟದ ಹಾಗೆ ಮಾತ್ರ ಎಚ್ಚರಿಕೆಯಿಂದಿರು. ನೀನು ಆತನಿಗೆ ಏನು ಮಾಡಿದರೂ ಅವನು ನಮ್ಮ ಮೇಲೆ ಪ್ರಮಾಣಿಕ್ಯನಾಗಿರುವದನ್ನು ನೋಡುವಿ," ಎಂದು ಹೇಳಿದರು.

ಕೂಡಲೇ ಒಬ್ಬ ಸೇವಕನು ಜೋಬನ ಬಳಿಗೆ ಬಂದು ಕಳ್ಳರು ಆತನ ಎತ್ತುಗಳನ್ನು ಕತ್ತೆಗಳನ್ನು ತೆಗೆದುಕೊಂಡು ಆತನ ಸೇವಕರನ್ನು ಕೊಂದುಹಾಕಿದರೆಂದು ತಿಳಿಸಿದನು. ಅಷ್ಟರೊಳಗೆ ಇನ್ನೊಬ್ಬ ಸೇವಕನು ಬಂದು ಆತನ ಕುರಿಗಳು ಮತ್ತು ಅವುಗಳನ್ನು ಕಾಯುತ್ತಿದ್ದವರೆಲ್ಲರು ಸಿಡಿಲು ಬಿದ್ದು ಸುಟ್ಟು ಹೋದರೆಂದು ಹೇಳಿದನು. ಕೂಡಲೇ ಮತ್ತೊಬ್ಬನು ಬಂದು ಆತನ ಒಂಟೆಗಳನ್ನು ಚಾಲ್ಡಿನರು ಹಿಡಿದುಕೊಂಡು ಅವುಗಳನ್ನು ಕಾಯುವವರನ್ನು ಕೊಂದುಹಾಕಿದರೆಂದು ಹೇಳಿದನು. ಕಟ್ಟಕಡೆಗೆ ನಾಲ್ಕನೆಯವನು ಬಂದು ಎಲ್ಲಕ್ಕಿಂತಲೂ ಬಹಳ ದುಃಖಕರವಾದ ಸಂಗತಿಯನ್ನು ತಿಳಿಸಿದನು. ಏನಂದರೆ "ನಿನ್ನ ಕುಮಾರರೂ ಕುಮಾರ್ತೆಯರೂ ಕೂಡಿ ಸಂತೋಷದಿಂದ ಭಜಿಸುತ್ತಿರುವಲ್ಲಿ ದೊಡ್ಡ ಹೆಗ್ಗಾಳಿ ಬಂದು, ಆ ಮನೆಯನ್ನು

ಒಡೆಯಿತು. ಅದು ಕುಸಿದು ಬಿದ್ದು ನಿನ್ನ ಮಕ್ಕಳೆಲ್ಲರೂ ಸತ್ತರು. ನಾನೊಬ್ಬನೇ ಅದರಿಂದ ತಪ್ಪಿಸಿಕೊಂಡು ನಿಮಗೆ ಈ ಸುದ್ದಿಯನ್ನು ತಿಳಿಸಲು ಬಂದೆನು." ಎಂದು ತಿಳಿಸಿದನು.

ಈ ನಿರ್ಭಾಗ್ಯವಾದ ಸಂಗತಿಯನ್ನು ಕೇಳಿದ ಕೂಡಲೇ ಜೋಬನಿಗೆ ಬಹಳ ವ್ಯಸನವಾಯ್ತು. ಆದರೆ ಆತನು ದೇವರ ಮೇಲೆ ಮೊರೆಯಿಟ್ಟು ಪಾಪವನ್ನು ಕಟ್ಟಿಕೊಳ್ಳಲಿಲ್ಲ. ಹಾಗೂ ಅತೃಪ್ತಿಯನ್ನು ಹೊಂದಲಿಲ್ಲ.

ಅದಕ್ಕೆ ಬದಲಾಗಿ ಜೋಬನು ಸಾಷ್ಟಾಂಗವಾಗಿ ಬಿದ್ದು, ಸರ್ವೇಶ್ವರನನ್ನು ಆರಾಧಿಸಿ ಹೇಳಿದ್ದೇನಂದರೆ, "ಈ ಆಸ್ತಿಗಳನ್ನೆಲ್ಲ ಕರ್ತರೇ ನನಗೆ ಕೊಟ್ಟಿದ್ದರು. ಈಗ ಅವರೇ ತೆಗೆದುಕೊಂಡರು. ಅವರ ತಿರುನಾಮವು ಸ್ತುತಿಸಲ್ಪಡುವದಾಗಲಿ, ಎಂದು ಸಮಾಧಾನವಾಗಿ ಹೇಳಿದನು. ಹೀಗೆ ಜೋಬನು ತಮ್ಮ ಮೇಲೆ ನಂಬಿಕೆ ಪ್ರೇಮವುಳ್ಳವನಾಗಿರುವದನ್ನು ನೋಡಿ ಕರ್ತರು ಸಂತೋಷಪಟ್ಟರು.

ಜೋಬನು ಮಹಾ ಕಷ್ಟ ಅವಸ್ಥೆಯನ್ನು ಹೊಂದಿದರೂ ಮೊರೆ ಯಿಡದ್ದರಿಂದ ಜೇಸುನಾಥರಿಗೆ ಹೋಲ್ವಿಕೆಯಾಗಿರುತ್ತಾನೆ. ಜೋಬನ ಚರಿತ್ರೆಯಿಂದ ನಾವು ಸಹ ತಿಳಕೊಳ್ಳಬೇಕಾದದ್ದೇನಂದರೆ ದೇವರು ನಮ್ಮನ್ನು ಶೋಧಿಸಲು ಸೈತಾನನಿಗೆ ಅಪ್ಪಣೆಯನ್ನು ಕೊಡುತ್ತಾರೆ.

## ೧೯ ಕಷ್ಟದ ಫಲವು

ಒಂದು ದಿನ ಸೈತಾನನು ಕರ್ತನನ್ನು ಕಂಡು, ಹೇಳಿದ್ದೇನಂದರೆ, "ನಾನು ಜೋಬನ ಶರೀರವನ್ನು ಮುಟ್ಟದ್ದರಿಂದ

ಆತನು ನಿಮಗೆ ಪ್ರಮಾಣಿಕ್ಯವುಳ್ಳವನಾಗಿದ್ದಾನೆ. ನೀವು ಆತನ ಶರೀರವನ್ನು ಮುಟ್ಟುವ ಹಾಗೆ ನನಗೆ ಅಪ್ಪಣೆ ಕೊಡಿರಿ. ಆಗ ಆತನು ನಿಮಗೆ ಪ್ರಮಾಣಿಕ್ಯವುಳ್ಳವನಾಗಿ ನಿಮ್ಮನ್ನು ದೂಷಿಸುವನು. ಎಂದು ಹೇಳಲು ಸರ್ವೇಶ್ವರನು ಅಪ್ಪಣೆಯನ್ನು ಕೊಟ್ಟರು. ಆದರೆ ಆತನ ಜೀವವನ್ನು ಉಳಿಸಬೇಕೆಂದರು.

ಸೈತಾನನು ಜೋಬನ ಬಳಿಗೆ ಬಂದು ಆತನ ಪಾದದಿಂದ ತಲೆಯ ವರೆಗೂ ಶರೀರವೆಲ್ಲ ವ್ರಣವಾಗ ಮಾಡಿ ಬಹು ಕಠಿಣ ವೇದನೆ ಪಡಿಸಿದನು. ಆದರೆ ಜೋಬನು ಮೊರೆಯಿಡಲಿಲ್ಲ. ಜೋಬನು ತಿಪ್ಪೆಯ ಮೇಲೆ ಕೂತುಕೊಂಡು ಒಂದು ಬೋಕಿಯ ಚೂರಿನಿಂದ ತನ್ನ ಹುಣ್ಣುಗಳನ್ನು ಕೆರೆದುಕೊಳ್ಳುತ್ತಿದ್ದನು. ಆಗ ಆತನ ಹೆಂಡತಿಸಿಟ್ಟನಿಂದ ಹೇಳಿದ್ದೇನಂದರೆ "ಇನ್ನು ನೀನು ಶಾಂತದಿಂದ ಇರುತ್ತೀಯಾ?" ಎಂದಳು

ಅದಕ್ಕೆ ಜೋಬನು ಪ್ರತ್ಯುತ್ತರವಾಗಿ "ನೀನು ಒಬ್ಬ ಹುಚ್ಚಳಹಾಗೆ ಮಾತಾಡುತ್ತೀ, ಸರ್ವೇಶ್ವರನ ಕೈಗಳಿಂದ ನಾವು ಒಳ್ಳೇದನ್ನು ಸ್ವೀಕರಿಸಿದ ಹಾಗೆ ಕೆಟ್ಟದನ್ನು ಮಾತ್ರ ಯಾಕೆ ಯಾಕೆ ತಕ್ಕೊಳ್ಳಬಾರದು?" ಎಂದನು.

ಜೋಬನ ಮೂವರು ಸ್ನೇಹಿತರು ಆತನನ್ನು ಸಂತೈಸಿ ಉಪಶಾಂತಿ ಹೇಳಲು ಬಂದರು. ಅವರು ಜೋಬನು ಈ ಅವಸ್ಥೆಯಲ್ಲಿರುವದನ್ನು ಕಂಡು, ಬಹಳ ದುಃಖಪಟ್ಟು ಆತನ ಸಂಗಡ ಏಳು ದಿವಸಗಳ ವರೆಗೆ ಮಾತಾಡದೆ ಇದ್ದರು. ಏಳು ದಿವಸಗಳಾದ ತರುವಾಯ ಜೋಬನು ತನ್ನ ಕಷ್ಟಗಳನ್ನೆಲ್ಲ ತನ್ನ ಸ್ನೇಹಿತರಿಗೆ ಹೇಳಿದನು. ಅದಕ್ಕೆ ಅವರು ಅವನ ಪಾಪಗಳೇ

ಈ ದೇವ ಕೋಪಕ್ಕೆ ಕಾರಣವೆಂದು ಹೇಳಿದರು. ಆದರೆ ಅವನು ತಾನು ಯಾವ ಪಾಪವನ್ನು ಮಾಡಲಿಲ್ಲವೆಂದನು. ಅದಕ್ಕೆ ಜೋಬನು ಹೇಳಿದ್ದೇನಂದರೆ "ಒಂದು ವೇಳೆ ಸರ್ವೇಶ್ವರನು ನನ್ನನ್ನು ಕೊಂದರೂ ಸಹ ನಾನು ಅವರ ಮೇಲೆ ನನ್ನ ನಂಬಿಕೆಯನ್ನಿರಿಸುತ್ತೇನೆ. ಅವರು ನನ್ನ ರಕ್ಷಕರಾಗಿರುವರು ನನ್ನ ಕರ್ತರು ಜೀವಿಸುತ್ತಾರೆಂದು ನನಗೆ ಗೊತ್ತಿದೆ. ಮತ್ತು ಕಡೆಯ ಅಂತ್ಯ ಕಾಲದಲ್ಲಿ ನಾನು ನನ್ನ ಶರೀರದೊಂದಿಗೆ ಜೀವದಿಂದ ಎದ್ದು ಸರ್ವೇಶ್ವರನನ್ನು ನೋಡುವೆನು. ಅವರಿಗೆ ನನ್ನ ನಡತೆ ಗೊತ್ತಿದೆ. ಬಂಗಾರವು ಬೆಂಕಿಯಿಂದ ಶೋಧಿಸಲ್ಪಟ್ಟ ಹಾಗೆ ಅವರು ನನ್ನನ್ನು ಶೋಧಿಸಿದರು. ನನ್ನ ಪಾದಗಳು ಅವರ ಹೆಜ್ಜೆಗಳನ್ನು ಹಿಂಬಾಲಿಸಿದವು; ನಾನು ಅವರ ಮಾರ್ಗದಲ್ಲಿದ್ದೇನೆ. ಅವರ ತುಟಿಗಳಿಂದ ಬಂದ ವಾಕ್ಯಗಳನ್ನು ನಾನು ನಿರಾರಲಿಲ್ಲ." ಎಂದನು. ಜೋಬನು ಸರ್ವೇಶ್ವರನನ್ನು ಹೆಚ್ಚಾಗಿ ಪ್ರೀತಿಸಿದ್ದರಿಂದ ಅವನಿಗೆ ಸರ್ವೇಶ್ವರನು ದೀರ್ಘ ದರ್ಶನವನ್ನು ಹೇಳುವ ವರವನ್ನು ಕೊಟ್ಟಿದ್ದರು. ಆದ್ದರಿಂದ ಆತನು ಕರ್ತರೇ ತನ್ನ ಸಂಗಡ ಮಾತಾಡಿದ ಹಾಗೆ ತಿಳಿಸಿದನು.

ಸರ್ವೇಶ್ವರನು ಜೋಬನ ತಾಳ್ಮೆಯನ್ನು ಪ್ರಮಾಣಿಕತನವನ್ನು ಕಂಡು ಬಹಳ ಸಂತೋಷಪಟ್ಟರು. ಕಡೆಯಲ್ಲಿ ಆತನ ಮೇಲೆ ಕನಿಕರಪಟ್ಟು ಸರ್ವೇಶ್ವರನು ಅವನ ಎಲ್ಲಾ ಕಷ್ಟ ತೊಂದರೆಗಳನ್ನು ನಿರ್ಮೂಲ ಮಾಡಿದರು. ಅವನಿಗೆ ಮುಂಚೆ ಇದ್ದ ಆಸ್ತಿಗಿಂತ ಎರಡಷ್ಟುಪಾಲು ಹೆಚ್ಚಿಗೆ ಕೊಟ್ಟರು. ಆತನಿಗೆ ಪದಿನಾಲ್ಕು ಸಾವಿರ ಕುರಿಗಳೂ ಆರು ಸಾವಿರ ಒಂಟೆ

ಗಳೂ, ಒಂದು ಸಾವಿರ ಎತ್ತುಗಳೂ ಮತ್ತು ಒಂದು ಸಾವಿರ ಕತ್ತೆಗಳು ಇದ್ದವು. ತಿರುಗಿ ಸರ್ವೇಶ್ವರನು ಆತನ ಏಳುಮಂದಿ ಕುಮಾರರನ್ನು ಮೂರು ಮಂದಿ ಕುಮಾರ್ತೆಯರನ್ನು ದಯ ಪಾಲಿಸಿದರು. ಜೋಬನು ಇವರೊಂದಿಗೆ ಸಂತೋಷದಿಂದ ಇದ್ದು ಒಂದು ನೂರ ನಾಲ್ವತ್ತು ವರ್ಷಗಳ ವರೆಗೆ ಬದುಕಿದನು.

ಸರ್ವೇಶ್ವರನು ತಮ್ಮ ಮೇಲೆ ಪ್ರಮಾಣಿಕ್ಯವಾಗಿರುವವರಿಗೆ ಯಾವಾಗಲೂ ಮೋಕ್ಷದಲ್ಲಲ್ಲದೆ ಈ ಲೋಕದಲ್ಲಿ ಸಹ ತಕ್ಕ ಸಂಭಾವನೆಯನ್ನು ಕೊಡುತ್ತಾರೆ.

## 20 ಮೋಯಿಸನ ರಕ್ಷಣೆಯು

## ( 1571 B. C. )

ಜಾಕೋಬನ ಮರಾಣಾನಂತರ ಆತನ ಸಂತತಿಯವರು ಅನೇಕ ವರ್ಷಗಳ ವರೆಗೆ ಈಜಿಪ್ತ ದೇಶದಲ್ಲಿ ವಾಸಮಾಡುತ್ತಿದ್ದರು. ಅವರು ತಮ್ಮ ಮಂದೆಗಳಿಂದ ಬಹಳ ಶ್ರೀಮಂತರಾದರು. ಜನಾಂಗವು ಸಹ ವೃದ್ಧಿಯಾಯಿತು. ಆದ ಕಾರಣ ಅವರು ದೇಶದ ಎಲ್ಲಕಡೆಗೂ ಹೋದರು. ಇವರು ಹೋದ ಕಡೆಯಲ್ಲ "ಇಸ್ರಾಯೇಲನ ಮಕ್ಕಳೆಂದೂ; ಅಥವಾ ಇಸ್ರಾಯೆಲರೆಂದು" ಕರೆಯಲ್ಪಡುತ್ತಿದ್ದರು. ಯಾಕಂದರೆ ಜಾಕೋಬನ ಹೆಸರು ಇಸ್ರಾಯೇಲನೆಂದು ಇತ್ತು.

ಬಹು ಕಾಲದ ತರುವಾಯ ಈಜಿಪ್ತ ದೇಶದಲ್ಲಿ ಒಬ್ಬ ಹೊಸ ಅರಸನು ರಾಜ್ಯವಾಳುತ್ತಿದ್ದನು. ಈತನು ಇಸ್ರಾಯೇಲರ ಸಂತತಿ ಹೆಚ್ಚಾಗಿರುವದನ್ನು, ಅವರ ಮಂದೆಗಳನ್ನೂ ನೋಡಿ ಭಯಪಟ್ಟನು. ಆದ್ದರಿಂದ ಆತನು ಇಜಿಪ್ತ ದೇಶ

ಸ್ತರಿಗೆ ಹೇಳಿದ್ದೇನಂದರೆ "ನಾವೆಲ್ಲರೂ ಇಸ್ರಾಯೇಲರನ್ನು ಕಷ್ಟಪಡಿಸುವಾ; ಯಾಕಂದರೆ, ಅವರ ಜನಾಂಗವು ಹೆಚ್ಚಿಸಿ ನಮ್ಮನ್ನು ಆಳದ ಹಾಗೆ ಅವರನ್ನು ನಿರ್ಮೂಲ ಮಾಡಬೇಕು. ಆದ ಕಾರಣ ನೀವೆಲ್ಲರೂ ಅವರಿಗೆ ಕಷ್ಟವಾದ ಕೆಲಸಗಳನ್ನು ಕೊಡಿರಿ" ಎಂದು ಕಟ್ಟಳೆ ವಿಧಿಸಿದನು.

ಇಸ್ರಾಯೇಲರು ಎಷ್ಟು ಅಧಿಕವಾಗಿ ಕೆಲಸ ಮಾಡುವರೋ ಅಷ್ಟಧಿಕವಾಗಿ ಮಕ್ಕಳನ್ನು ಪಡೆಯುತ್ತಿದ್ದರು. ಕಡೆಗೆ ಅರಸನು, ಇಸ್ರಾಯೇಲರಿಗೆ ಹುಟ್ಟುವ ಗಂಡು ಕೂಸುಗಳನ್ನೆಲ್ಲ ನದಿಯಲ್ಲಿ ಬೀಸಾಡುವ ಹಾಗೆ ಕಟ್ಟಳೆ ಇಟ್ಟನು.

ಈ ಸಮಯದಲ್ಲಿ ಲೇವಿ ಕುಲಸ್ಥಳಾದ ಒಬ್ಬ ಹೆಂಗಸಿಗೆ ಒಂದು ಗಂಡು ಮಗು ಹುಟ್ಟಿತು. ತಾಯಿಯು ಮೂರು ತಿಂಗಳುಗಳ ವರೆಗೆ ಈ ಕೂಸನ್ನು ರಹಸ್ಯವಾಗಿ ತನ್ನ ಮನೆಯಲ್ಲಿ ಸಾಕುತ್ತ ಬಂದಳು. ಅವರ ತರುವಾಯ ಈ ರಹಸ್ಯವು ಬಯಲಾಗುವದೆಂದು ಅಂಜಿ, ಒಂದು ಆಪಿನ (ಹುಲ್ಲಿನ) ಪೆಟ್ಟಿಗೆಯನ್ನು ಮಾಡಿದಳು. ಅದು ನೀರಿನಲ್ಲಿ ಮುಳುಗಿ ಹೋಗದ ಹಾಗೆಯೂ, ನೀರು ಒಳಗೆ ಸೇರದ ಹಾಗೆಯೂ ಅದಕ್ಕೆ ಮಣ್ಣನ್ನು ಕೆಸರನ್ನು ಹಚ್ಚಿದಳು.

ತರುವಾಯ ತನ್ನ ಕೂಸನ್ನು ಆ ಪೆಟ್ಟಿಗೆಯಲ್ಲಿ ಮಡುಗಿ ಅದನ್ನು ನದಿಯ ತೀರದಲ್ಲಿ ಇರುವ ಪೋದೆಗಳಲ್ಲಿ ಅಡಗಿಸಿ ಇಟ್ಟಳು. ಮತ್ತು ತನ್ನ ಮಗಳನ್ನು ಕರೆದು, "ಮರಿಯಮ್ಮ ನೀನು ಈ ಪೆಟ್ಟಿಗೆಯ ಹತ್ತಿರ ಇರು. ಕೂಸಿಗೆ ಏನು ಸಂಭವಿಸುವದೋ ನೋಡುತ್ತಿರು. ಎಂದು ಹೇಳಿದಳು.

ಸ್ವಲ್ಪ ಸಮಯದ ನಂತರ ಅರಸನ ಮಗಳು ಸ್ನಾನ ಮಾಡುವದಕ್ಕಾಗಿ ನದಿಗೆ ಬಂದಳು. ಪ್ರೋದೆಗಳ ಮಧ್ಯದಲ್ಲಿ ರುವ ಪೆಟ್ಟಿಗೆಯನ್ನು ನೋಡಿದಳು. ಅದನ್ನು ಹಿಡಿದು ತರಲು ತನ್ನ ದಾಸಿಯರಲ್ಲಿ ಒಬ್ಬಳನ್ನು ಕಳಿಸಿದಳು.

ಪೆಟ್ಟಿಗೆಯನ್ನು ತೆರೆದು ನೋಡುವಲ್ಲಿ ಅದರಲ್ಲಿ ಮಗುವು ಅಳುವದನ್ನು ಕಂಡಳು. ಅದರ ಮೇಲೆ ಕನಿಕರಪಟ್ಟು ಆ ಕೂಸನ್ನು ರಕ್ಷಿಸಬೇಕೆಂದು ತಿಳಿದು, "ಇದು ಒಬ್ಬ ಇಸ್ರಾಯೇಲಸ್ತ್ರನ ಕೂಸು ಎಂದಳು. ಇದನ್ನೆಲ್ಲ ನೋಡುತ್ತಿದ್ದ ಮರಿಯಮ್ಮನು ರಾಜ ಕುಮಾರ್ತೆಯ ಬಳಿಗೆ ಓಡಿಬಂದು, "ಕೂಸಿಗೆ ಹಾಲುಕೊಡಲು ಒಬ್ಬ ಇಸ್ರಾಯೇಲಸ್ತ್ರಳನ್ನು ಕರೆದು ತರಲೋ? ಎಂದು ಕೇಳಿದಳು. ರಾಜಪುತ್ರಿಯು ಒಳ್ಳೇದೆಂದಳು. ಮರಿಯಮ್ಮನು ತನ್ನ ತಾಯಿಯನ್ನು ಕರೆತರಲು ಮನೆಗೆ ಓಡಿ ಹೋದಳು.

ರಾಜಪುತ್ರಿಯು ಆ ಕೂಸನ್ನು ಆಕೆಗೆ ಕೊಟ್ಟು "ನನ್ನ ಸಲುವಾಗಿ ಈ ಕೂಸಿಗೆ ನೀನು ಹಾಲನ್ನು ಕೊಟ್ಟು ಇದನ್ನು ಸಾಕು. ನಾನು ನಿನಗೆ ಸಂಬಳ ಕೊಡುವೆನು." ಎಂದಳು. ತಾಯಿಯು ಆ ಕೂಸನ್ನು ಸಂತೋಷದಿಂದ ಮನೆಗೆ ತೆಗೆದು ಕೊಂಡು ಹೋದಳು. ಆ ಕೂಸು ದೊಡ್ಡದಾಗುವ ವರೆಗೆ ಹಾಲು ಕುಡಿಸಿದಳು. ಈತನ ಹೆಸರು ಮೋಯಿಸೆಸ್

## 21 ಮೋಯಿಸನು ಓಡಿಹೋದ ವರ್ತಮಾನ

ಮೋಯಿಸನು ದೊಡ್ಡವನಾದ ಬಳಿಕ ಆತನ ತಾಯಿ ಅವನನ್ನು ತಿರುಗಿ ರಾಜಪುತ್ರಿಗೆ ಕೊಟ್ಟಳು- ಆಕೆಯು ಆತ

ನನ್ನು ತನ್ನ ಅರಮನೆಯಲ್ಲಿ ಸ್ವಂತ ಮಗನಹಾಗೆ ಸಾಕುತ್ತಾ ಬಂದಳು. ರಾಜಪುತ್ರಿಯು ಆ ಹುಡುಗನನ್ನು ನೀರಿನಿಂದ ರಕ್ಷಿಸಿ ಕಾಪಾಡಿದ್ದರಿಂದ ಆತನನ್ನು ಮೋಯಿಸನೆಂದು ಕರೆಯಲು ತೀರ್ಮಾನಿಸಿದಳು. ಈ ಪ್ರಕಾರವಾಗಿ ಆ ಹುಡುಗನು ಒಳ್ಳೆಯವನೂ ಬಲವುಳ್ಳವನೂ ಆಗುತ್ತ ಬಂದನು.

ಅತ್ತ ಮೋಯಿಸನು ಅರಮನೆಯಲ್ಲಿ ರಾಜಮಗನ ಹಾಗೆ ಜೀವಿಸುತ್ತಿದ್ದನು. ಆದರೆ ಸಂತೋಷವುಳ್ಳವನಾಗಿರಲಿಲ್ಲ. ಯಾಕಂದರೆ ತನ್ನ ಜನರಾದ ಇಸ್ರಾಯೇಲಸ್ತರು ಬಹಳ ಕಷ್ಟವನ್ನು ಅನುಭವಿಸುತ್ತಿದ್ದರು. ಮೋಯಿಸನು ತನ್ನ ಜನರ ಮೇಲೆ ಕನಿಕರಪಡುತ್ತಿದ್ದನು. ಯಾಕಂದರೆ ಇಜಿಪ್ತರು ಕ್ರೂರರಾಗಿದ್ದು ಇಸ್ರಾಯೇಲರನ್ನು ಬಹಳವಾಗಿ ಭಾಧಿಸುತ್ತಿದ್ದರು. ಇಸ್ರಾಯೇಲಸ್ತರು ಬಹಳ ಕಠಿಣವಾದ ಕೆಲಸ ಮಾಡಬೇಕಾಗಿತ್ತು. ಅದು ಯಾವದೆಂದರೆ, ಅಗಿಯುವದು, ಕಲ್ಲುಗಳನ್ನು ಹೊತ್ತುಕೊಂಡು ಹೋಗುವಂಥಾದ್ದು. ಮೊದಲಾದವುಗಳಾಗಿದ್ದವು. ಅವರು ರಾತ್ರಿಹಗಲು ದುಡಿಯುತ್ತಿದ್ದರು. ವಿಶ್ರಾಂತಿಯೇ ಇದ್ದಿಲ್ಲ. ಅವರ ಈಜಿಪ್ತ ಅಧಿಕಾರಸ್ತರು ಅಪ್ಪಣೆ ಕೊಡುವವರೆಗೂ ಕಷ್ಟಪಟ್ಟು ಕೆಲಸ ಮಾಡುತ್ತಿದ್ದರು. ಮೋಯಿಸನು ಇವರ ಕಷ್ಟಗಳನ್ನು ನೋಡಿ ಬಹಳ ಚಿಂತಿಸುತ್ತಿದ್ದನು.

ಒಂದು ದಿನ ಒಬ್ಬ ಇಜಿಪ್ತನು ಇಸ್ರಾಯೇಲಸ್ತನೊಂದಿಗೆ ಜಗಳ ಮಾಡುತ್ತಿರುವದನ್ನು ಮೋಯಿಸನು ನೋಡಿದನು. ಅವನಿಗೆ ಬಹಳ ಸಿಟ್ಟು ಬಂತು. ಆದ್ದರಿಂದ ಮೋಯಿಸನು ಇಜಪ್ತ ದೇಶದವನನ್ನು ಕೊಂದುಹಾಕಿದನು.

ಈ ಸುದ್ದಿಯು ಅರಸನಿಗೆ ಮುಟ್ಟಿದಕೂಡಲೇ ಅರಸನು ಮೋಯಿಸನನ್ನು ಕೊಂದುಹಾಕಲು ಅಪ್ಪಣೆಯನ್ನು ಕೊಟ್ಟನು. ಆಗ ಆತನು ಅರಸನ ಕೋಪಕ್ಕೆ ಅಂಜಿ ಮೋಯಿಸನು ಮದಿಯಾನ ಎಂಬ ಪಟ್ಟಣಕ್ಕೆ ಓಡಿಹೋದನು

ಒಂದು ದಿನ ಮೋಯಿಸನು ವಿಶ್ರಮಿಸಲು ಒಂದು ಬಾವಿಯ ಬಳಿಯಲ್ಲಿ ಕುಳಿತಿದ್ದನು ಆಗ ಜೆತ್ರೋವೆಂಬ ಹೆಸರುಳ್ಳ ಒಬ್ಬ ಮನುಷ್ಯನ ಏಳು ಮಂದಿ ಕುಮಾರ್ತೆಗಳು ಆ ಬಾವಿಯಲ್ಲಿ ನೀರನ್ನು ಸೇದಿ ತಮ್ಮ ಕುರಿ ಹಿಂಡುಗಳಿಗೆ ನೀರನ್ನು ಕುಡಿಸುತ್ತಿದ್ದರು. ಅಷ್ಟರಲ್ಲಿ ಕೆಲವು ಗೊಲ್ಲರು ಬಂದು ಅವರನ್ನು ಓಡಿಸಲು ಪ್ರಯಾಸಪಟ್ಟರು.

ಇದನ್ನು ಕಂಡಕೂಡಲೇ ಮೋಯಿಸನಿಗೆ ಸಿಟ್ಟು ಬಂದು ಆ ಕ್ರೂರ ಗೊಲ್ಲರನ್ನು ಅಲ್ಲಿಂದ ಓಡಿಸಿದನು. ಮತ್ತು ಆ ಹೆಣ್ಣು ಮಕ್ಕಳಿಗೆ ನೀರನ್ನು ಸೇದಲು ಸಹಾಯ ಮಾಡಿದನು. ಇವರು ಮನೆಗೆ ತಿರುಗಿ ಹೋದಮೇಲೆ ನಡೆದ ಸಂಗತಿಯನ್ನೆಲ್ಲ ತಮ್ಮ ತಂದೆಗೆ ತಿಳಿಸಿದರು. ಇದನ್ನು ಕೇಳಿ ಜೆತ್ರೋವೆಂಬವನು "ಆ ಒಳ್ಳೇ ಮನುಷ್ಯನು ಎಲ್ಲಿರುವನು? ಆತನನ್ನು ಕರೆಯಿರಿ, ಆತನನಿಗೆ ನನ್ನ ಕೃತಜ್ಞತೆಯ ಸ್ತೋತ್ರವನ್ನು ಹೇಳುವೆನು ಎಂದನು.

ತರುವಾಯ ಜೆತ್ರೋವೆಂಬವನು ಮೋಯಿಸನನ್ನು ತನ್ನ ಮನೆಗೆ ಕರಕೊಂಡು ಹೋಗಿ ತನ್ನ ಮಕ್ಕಳಲ್ಲಿ ಒಬ್ಬಳನ್ನು ಕೊಟ್ಟು ಮದುವೆ ಮಾಡಿದನು. ಮೋಯಿಸನು ತನ್ನ ಮಾವನ ಮಂದೆಗಳನ್ನು ಕಾಯುತ್ತಾ ಅಲ್ಲಿ ನಾಲ್ವತ್ತು ವರ್ಷಗಳ ವರೆಗೆ ಜೀವಿಸಿದನು.

## 22 ಉರಿಯುತ್ತಿದ್ದ ಮುಳ್ಳಿನ ಪೊದೆ

ಒಂದು ದಿನ ಮೋಶೆಯಿಸನು ತನ್ನ ಮಾವನ ಮಂದೆಗಳನ್ನು ಕಾಯುತ್ತ ಹೊರೆಬ್ಬೆಂಬ ಬೆಟ್ಟದ ಸಮೀಪಕ್ಕೆ ಹೋದನು. ಅಲ್ಲಿ ಒಂದು ವಿಚಿತ್ರವಾದ ಕಾರ್ಯವನ್ನು ನೋಡಿದನು. ಒಂದು ಮುಳ್ಳಿನ ಪೊದೆಯು ಸುಡದೆ ಉರಿಯುತ್ತಿರುವದನ್ನು ಕಂಡು ಅದರ ಸಮೀಪಕ್ಕೆ ಹೋದನು. ಆ ಪೊದೆಯಿಂದ ದೇವರು ಮೋಶೆಯಿಸನ ಸಂಗಡ ಮಾತನಾಡಿದರು.

ಏನಂದರೆ, "ನಾವು ಇಸ್ರಾಯೇಲರ ಮೊರೆಯನ್ನು ಕೇಳಿದೆವು. ಅವರು ಈಜಿಪ್ತರ ಕೈಯಲ್ಲಿ ಪಡುವ ಶ್ರಮಗಳನ್ನು ನೋಡಿದೆವು. ನಾವು ಅವರನ್ನು ಆ ದುಷ್ಟ ಯಜಮಾನರಿಂದ ಬಿಡುಗಡೆ ಮಾಡಿ ಹಾಲು ಜೇನು ಹರಿಯುವಂಥ ಸ್ಥಳಕ್ಕೆ ಕರೆದೊಯ್ಯುವೆವು. ಆದ್ದರಿಂದ ನೀನು ಅರಸನ ಬಳಿಗೆ ಹೋಗಿ ವನಾಂತರದಲ್ಲಿ ನಮಗೆ ಬಲಿ ಪೂಜೆಯನ್ನು ಒಪ್ಪಿಸುವದಕ್ಕೋಸ್ಕರ ಇಸ್ರಾಯೇಲರನ್ನು ಬಿಡುವ ಹಾಗೆ ಅಪ್ಪಣೆ ಕೇಳು" ಎಂದು ಹೇಳಿದರು.

ಮೋಶೆಯಿಸನು ಈ ಕಟ್ಟಳೆಯನ್ನು ಕೇಳಿ ಭಯಪಟ್ಟು, ಸ್ವಾಮಿ ನಾನು ಯಾರು? ಅರಸನು, ಮತ್ತು ಇಸ್ರಾಯೇಲರು ನನ್ನ ಮಾತನ್ನು ನಂಬುವರೋ? ಎಂದು ಹೇಳಿದನು. ಅದಕ್ಕೆ ಕರ್ತರು ಇಸ್ರಾಯೇಲರನ್ನು ರಕ್ಷಿಸುವದಕ್ಕೋಸ್ಕರ ಮೋಶೆಯಿಸನಿಗೆ ಅದ್ಭುತಗಳನ್ನು ಮಾಡುವ ಶಕ್ತಿಯನ್ನು ಕೊಟ್ಟರು. ಮತ್ತು ಆತನ ಕೈಯಲ್ಲಿದ್ದ ಕೋಲನ್ನು ನೆಲದ ಮೇಲೆ ಬಿಸಾಡು ಎಂದರು. ಕೂಡಲೇ ಅದು ಒಂದು ಸರ್ಪ

ವಾಯ್ತು. ಕರ್ತರು ತಿರುಗಿ ಅದನ್ನು ಹಿಡಿದು ಎತ್ತು ಎಂದು ವಚನಿಸಿದರು. ಕೂಡಲೇ ಅದು ಪುನಃ ಕೋಲಾಯಿತು.

ತಿರುಗಿ ಕರ್ತರು ಅಂದದ್ದೇನಂದರೆ, "ಆ ಜನರು ನಿನ್ನ ಮಾತನ್ನ ನಂಬದಿದ್ದರೆ ನದಿಯಿಂದ ಸ್ವಲ್ಪ ನೀರನ್ನು ನಿನ್ನ ಕೈಯಲ್ಲಿ ತೆಗೆದುಕೊಂಡು ಅದನ್ನು ಒಣ ನೆಲದ ಮೇಲೆ ಚೆಲ್ಲು, ಆಗ ನೀರೆಲ್ಲವೂ ರಕ್ತಮಯವಾಗಿ ಮಾರ್ಪಡುವದು. ಈ ಅತಿಶಯಗಳನ್ನು ಕಂಡಾಗ ಇಸ್ರಾಯೇಲರು ನಾವು ನಿನ್ನನ್ನು ಕಳಿಸಿರುವೆವೆಂದು ನಂಬುವರು" ಎಂದರು. ಆದರೆ ಮೋಯಿಸನು ತನಗೆ ಧೈರ್ಯವಿಲ್ಲದ್ದರಿಂದ ಸ್ವಾಮಿ ನಾನು ತೊದಲು ಬಾಯಿಯುಳ್ಳವನೆಂದು ನಿಮಗೆ ಗೊತ್ತಿಲ್ಲವೇ ಎಂದನು.

ಆಗ ಸರ್ವೇಶ್ವರನಿಗೆ ಕೋಪ ಬಂದು, ಹೇಳಿದ್ದೇನಂದರೆ ಮನುಷ್ಯನ ಬಾಯಿಯನ್ನು ಯಾರು ಸೃಷ್ಟಿಸಿದರು? ಅಥವಾ ಮೂಕನನ್ನು ಮಾತಾಡುವವನನ್ನು, ಕುರುಡನನ್ನು, ಕಣ್ಣಿದ್ದವನನ್ನು ಸೃಷ್ಟಿಸಿದವರು ಯಾರು? ನೀನು ಈ ಕ್ಷಣ ಹೋಗು ನಾವು ನಿನ್ನ ಸಂಗಡ ಇದ್ದು ನೀನು ಹೇಳಬೇಕಾದದ್ದನ್ನು ನಿನಗೆ ತಿಳಿಸುವೆವು. ಮತ್ತು ನಿನ್ನ ಬದಲಾಗಿ ಮಾತಾಡಲು ನಿನ್ನ ಸಹೋದರನಾದ ಆರೋನನ್ನು ಕರೆದುಕೊಂಡು ಹೋಗು ಎಂದರು.

ಮೋಯಿಸನು ಜತ್ರೊವಿಗೆ ವಂದನೆಯನ್ನು ಹೇಳಿ ತನ್ನ ಹೆಂಡತಿ ಮಕ್ಕಳೊಡನೆ ಈಜಿಪ್ತ ದೇಶಕ್ಕೆ ಪ್ರಯಾಣವಾದನು. ದಾರಿಯಲ್ಲಿ ತನ್ನ ಸಹೋದರನಾದ ಆರೋನನ್ನು ಭೆಟ್ಟಿಯಾಗಿ ಕರ್ತರು ತನಗೆ ಹೋರೆಬ್ ಪರ್ವತದ ಮೇಲೆ ಆಜ್ಞಾಪಿಸಿದದನ್ನೆಲ್ಲಾ ಆತನಿಗೆ ತಿಳಿಸಿದನು.

ಇವರಿಬ್ಬರೂ ಈಜಿಪ್ತ ದೇಶಕ್ಕೆ ಬಂದ ಬಳಿಕ ಅರೋ ನನು ದೇವರು ತನಗೆ ಹೇಳಿದ ವಾಕ್ಯಗಳನ್ನು ಭೋಧಿಸುತ್ತಿರಲು ಮೋಯಿಸನು ಅವರು ಕೊಟ್ಟ ಗುರ್ತುಗಳನ್ನು ತೋರಿಸಿದನು. ಆಗ ಇಸ್ರಾಯೇಲಸ್ತರು ಇವರ ಮಾತನ್ನು ನಂಬಿದರು. ಮತ್ತು ಸಂತೋಷದಿಂದ ಇದ್ದರು.

ಇಸ್ರಾಯೇಲಸ್ತರು; ತಮ್ಮನ್ನು ಗುಲಾಮತನದಿಂದ ರಕ್ಷಿ ಸಲು ಸರ್ವೇಶ್ವರನು ಮೋಯಿಸನನ್ನು ಕಳಿಸಿದಕ್ಕಾಗಿ ಅವರಿಗೆ ಸ್ತೋತ್ರ ಹೇಳಲು ಮೊಣಕಾಲಿನಲಿದ್ದು ಕರ್ತನನ್ನು ಆರಾಧಿ ಸಿದರು.

## 23 ಇಜಿಪ್ತ ದೇಶಕ್ಕೆ ಬಂದ ಶಿಕ್ಷೆಯನ್ನು ಕುರಿತು

ನೋಯಿಸನೂ, ಅರೋನನೂ ಇಜಿಪ್ತ ದೇಶದ ಅರಸನ ಬಳಿಗೆ ಹೋಗಿ, ಸ್ವಯಂಭೂ ಸರ್ವೇಶ್ವರನು ಅವರ ಪ್ರಜೆಯು ಅವರಿಗೊಂದು ಬಲಿ ಪೂಜೆಯನ್ನು ಒಪ್ಪಿಸುವ ಹಾಗೆ ಇಸ್ರಾ ಯೇಲರನ್ನು ವನಾಂತರಕ್ಕೆ ಹೋಗಗೊಡಿಸಲು ನಿಮಗೆ ಕಟ್ಟಳೆ ಇಡುತ್ತಾರೆಂದು ಹೇಳಿದರು. ಅದಕ್ಕೆ ಅರಸನು ಪ್ರತ್ಯು ತ್ತರವಾಗಿ, "ಸರ್ವೇಶ್ವರನು ಯಾರು? ನಾನು ಆತನ ಸ್ವರ ವನ್ನು ಅರಿಯೆನು ಈ ಜನಗಳನ್ನು ಇಜಿಪ್ತ ರಾಜ್ಯದಿಂದ ಹೊರಗೆ ಕಳಿಸುವದಿಲ್ಲ," ಎಂದನು. ಮತ್ತು ತನ್ನ ಅಧಿಕಾ ರಸ್ತರನ್ನು ಕರಿಸಿ ಈ ಜನಗಳಿಗೆ ಸಾಕಾದಷ್ಟು ಕೆಲಸಗಳನ್ನು ಕೊಡಿರಿ. ಆಗ ಅವರಿಗೆ ವನಾಂತರಕ್ಕೆ ಹೋಗಲು ಆಶೆ ಹುಟ್ಟು ವದಿಲ್ಲ. ಎಂದು ಆಜ್ಞಾಪಿಸಿದನು. ಇವರ ನಿಮಿತ್ತ ಅರಸನ ಉದ್ಯೋಗಸ್ತರು ಇವರ ಶಕ್ತಿಗೆ ಮಿಕ್ಕಿದ ಕಷ್ಟಗಳನ್ನು ಕೊಡು

ತ್ತಿದ್ದರು. ಇದನ್ನು ಕಂಡು ಇಸ್ರಾಯೇಲಸ್ತರು ಅಪನಂಬಿಕೆ ಪಟ್ಟು ಆರೋನನನ್ನು ಮೋಯಿಸನನ್ನು ಕುರಿತು ಮೊರೆ ಇಡ ಲಾರಂಭಿಸಿದರು. ಆಗ ಮೋಯಿಸನು ಸರ್ವೇಶ್ವರನನ್ನು ಕುರಿತು "ಆಳಿದವರೇ ಯಾಕೆ ನೀವು ಇವರಿಗೆ ಇಷ್ಟು ಕಷ್ಟಗಳನ್ನು ಕೊಡುತ್ತೀರಿ? ನಾನು ಇಲ್ಲಿಗೆ ಬಂದಾಗಿನಿಂದಲೂ ಅರಸನು ಇವರಿಗೆ ಇನ್ನೂ ಹೆಚ್ಚು ಕಷ್ಟಗಳನ್ನು ಕೊಡುತ್ತಿದ್ದಾನೆ. ಯಾಕೆ ನನ್ನನ್ನು ಇಲ್ಲಿಗೆ ಕಳಿಸಿದಿರಿ? ಎಂದು ಪ್ರಾರ್ಥಿಸಿದನು.

ಅದಕ್ಕೆ ಕರ್ತರು ಮೋಯಿಸನಿಗೆ ಅರುಹಿಸಿದೇನಂದರೆ ಅರಸನಿಗೆ ನಾವು ಕಳಿಸುವ ಕೇಡನ್ನು ನೀನು ನೋಡುವಿ. ಮತ್ತು ನಾವು ಅವರನ್ನು ಗುಲಾಮತನದಿಂದ ಬಿಡುಗಡೆ ಮಾಡುವೆವೆಂದು ಇಸ್ರಾಯೇಲಸ್ತರಿಗೆ ತಿಳಿಸು ಎಂದರು. ಆದರೆ ಇದರ ಮೇಲೆ ಇಸ್ರಾಯೇಲರು ಮೋಯಿಸನ ಮಾತನ್ನು ನಂಬಲಿಲ್ಲ.

ಮೋಸನು ಮತ್ತು ಅರೋನನು ತಿರುಗಿ ಅರಸನ ಬಳಿ ಯಲ್ಲಿ ಹೋಗಿ ಅವರನ್ನು ಬಿಡಲು ಹೇಳಿದರು. ಮತ್ತು ತಾವು ಸರ್ವೇಶ್ವರನಿಂದ ಬಂದವರೆಂದು ಸ್ಥಿರಪಡಿಸುವದಕ್ಕಾಗಿ ಆರೋನನು ತನ್ನ ಕೈಯಲ್ಲಿದ್ದ ಕೋಲನ್ನು ಕೆಳಗೆ ಬಿಸಾಕಿದನು. ಅದು ಕೂಡಲೇ ಸರ್ಪವಾಯಿತು.

ಇದನ್ನು ಕಂಡು ಅರಸನು ತನ್ನ ರಾಜ್ಯದಲ್ಲಿದ್ದ ಶೂನ್ಯಗಾರರನ್ನು ಕರೆದನು. ಅವರು ಸಹ ತಮ್ಮ ಕೋಲುಗಳನ್ನು ನೆಲದಮೇಲೆ ಹಾಕಲಾಗಿ, ಅವುಗಳು ಸಹ ಪಿಶಾಚಿಯ ಶಕ್ತಿಯಿಂದ ಸರ್ಪಗಳಾದವು. ಆದರೆ ಅರೋನನ ಕೋಲು ಶೂನ್ಯ

ಗಾರದ ಕೋಲುಗಳನ್ನೆಲ್ಲ ನುಂಗಿಬಿಟ್ಟಿತು ಇದನ್ನು ನೋಡಿ ದರು ಸಹ ಅರಸನು ಇಸ್ರಾಯೇಲಪ್ತರನ್ನು ಹೋಗಗೊಡಲಿಲ್ಲ.

ಆದ್ದರಿಂದ ಸರ್ವೇಶ್ವರನು ಇಜಿಪ್ತ ದೇಶವನ್ನು ಅನೇಕ ಅಘೋರವಾದ ಬಾಧೆಗಳಿಂದ ಶಿಕ್ಷಿಸಿದರು. ಪ್ರತಿಸಾರೆ ಅರ ಸನು ಮೋಯಿಸನ ಮಾತನ್ನು ತಿರಸ್ಕರಿಸಿದಾಗ ಒಂದೊಂದು ಹೊಸ ಹೊಸ ಕೇಡನ್ನು ಕಳಿಸಿದರು. ಹೀಗೆ ಒಟ್ಟು ಹತ್ತು ಕೇಡುಗಳಾಗಿದ್ದವು. ಅವು ಯಾವವೆಂದರೆ; ಒಂದನೇದು ನದಿಯ ನೀರು ರಕ್ತವಾಗಿ ಮಾರ್ಪಟ್ಟಿತು. ಎರಡನೇದು. ಇಜಿಪ್ತ ದೇಶವೆಲ್ಲ ಕಪ್ಪೆಗಳಿಂದ ತುಂಬಿತು. ೩ನೇದು. ಧೂಳವು ಹೇನು ಮೊದಲಾದ ಸಣ್ಣ ಸಣ್ಣ ಕ್ರಿಮಿಗಳಾಗಿ ಮಾರ್ಪಟ್ಟು ಉಪದ್ರ ಪಡಿಸಹತ್ತಿದವು. ನಾಲ್ಕನೇದು. ಅಪರಿಮಿತವಾದ ನೊಣಗಳು ಇಜಿಪ್ತ ದೇಶದಲ್ಲಿ ಹುಟ್ಟಿದವು. ಐದನೇದು. ವಿಷ ಸೂಳಿ ಎದ್ದು ಇಜಿಪ್ತರ ಎಲ್ಲಾ ಜೀವ ಜಂತುಗಳನ್ನು ನಾಶನ ಮಾಡಿತು. ಆರನೇದು. ಮನುಷ್ಯರ ಮೇಲೆಯೂ, ಮೃಗಗಳ ಮೇಲೆಯೂ ಬೊಕ್ಕೆಗಳಾಗಿರುವ ಹುಣ್ಣುಗಳು ಎದ್ದವು. ಏಳ ನೇದು, ಕಲ್ಮಳೆಯು, ಮಿಂಚಿನ ಅಗ್ನಿಯು ಭೂಮಿಯ ಮೇಲೆ ಬೀಳುವ ಹಾಗೆ ಮಾಡಿದರು. ಎಂಟನೇದು. ಲೆಖ್ಖವಿಲ್ಲದ ಮಿಡ ತೆಗಳು ಹುಟ್ಟಿ ಕಲ್ಮಳೆಗೆ ತಪ್ಪಿಸಿಕೊಂಡ ಫಲಗಳನ್ನೆಲ್ಲ ತಿಂದು ಬಿಟ್ಟವು ೯ನೇದು ಇಜಿಪ್ತ ದೇಶದಲ್ಲೆಲ್ಲಾ ಕಾರ್ಗತ್ತಲೆ ಕವಿದು ಕೊಂಡಿತು.

ಇಷ್ಟಾದರು ಸಹ ಅರಸನು ಇಸ್ರಾಯೇಲರನ್ನು ಹೋಗ ಗೊಡಲಿಲ್ಲ. ಆದ್ದರಿಂದ ಸರ್ವೇಶ್ವರನು ಹತ್ತನೇ ಕಷ್ಟವನ್ನು ಕಳಿಸಿದನು.

## 24 ಮೊದಲನೇ ಪಾಸ್ಕ

ಇಷ್ಟು ಕಷ್ಟಗಳನ್ನು ಸರ್ವೇಶ್ವರನು ಇಜಿಪ್ತ ದೇಶದ ಮೇಲೆ ಕಳುಹಿಸಿದರೂ ಅರಸನ ಹೃದಯವು ಕರಗಲಿಲ್ಲ ಆತನು ಇಸ್ರಾಯೇಲಸ್ತರನ್ನು ಹೊರಗೆ ಹೋಗ ಕೊಡಲಿಲ್ಲ ಆದ್ದರಿಂದ ಕರ್ತರು ಮೋಯಿಸನನ್ನು ನೋಡಿ "ನಾವು ಅವರಿಗೆ ಇನ್ನೊಂದು ಕಷ್ಟವನ್ನು ಕೊಡುತ್ತೇವೆ. ಆಗ ಅರಸನು ನಿಮ್ಮನ್ನು ಹೋಗಗೊಡುವನು." ಎಂದರು.

ಆದ್ದರಿಂದ ಇಸ್ರಾಯೇಲಸ್ತರ ಪ್ರತಿಯೊಂದು ಕುಟುಂಬದಲ್ಲಿಯೂ ಒಂದೊಂದು ಕೆಂಗುರಿ ಮರಿಯನ್ನು ಕೊಂದು ಅದರ ನೆತ್ತರವನ್ನು ಬಾಗಿಲದ ಹೊಸ್ತಿಲಿಗೆ ಹಚ್ಚಬೇಕು. ಮತ್ತು ಈ ಕುರಿಯ ಮಾಂಸವನ್ನು ಅಡಿಗೆ ಮಾಡಿ, ಹುಳಿಯಿಲ್ಲದ ಹಸಿ ಹಿಟ್ಟಿನಿಂದ ಮಾಡಿದ ರೊಟ್ಟಿಯೊಂದಿಗೂ, ಕಹಿಸ್ವಾದ ಫಲಗಳೊಂದಿಗೂ ಭುಜಿಸಬೇಕು. ಹೀಗೆ ಮಾಡಿದರೆ ಮರಣದ ದೂತನು ಬಂದಾಗ ರಕ್ತ ಹಚ್ಚಿದ ಬಾಗಿಲವನ್ನು ನೋಡಿ, ಅವರನ್ನು ಬಿಟ್ಟು ಉಳಿದ ಎಲ್ಲಾ ಜನರ ಚೊಚ್ಚಲು ಮಕ್ಕಳನ್ನು ಕೊಂದುಹಾಕುವನು ಎಂದರು. ಇದೇ ಮೊದಲನೇ ಪಾಸ್ಕವು.

ಮೋಯಿಸನು ಸರ್ವೇಶ್ವರನು ಕಟ್ಟಳೆ ಇಟ್ಟ ಪ್ರಕಾರವಾಗಿ ಇಸ್ರಾಯೇಲರಿಗೆ ಹೇಳಲಾಗಿ ಅವರು ಅದರಂತೆ ಮಾಡಿದರು. ಮಧ್ಯ ರಾತ್ರಿಯಲ್ಲಿ ಮರಣದ ಮಾತನ್ನು ಬಂದು ಅರಸನ ಚೊಚ್ಚಲು ಮಗನ ಮೊದಲ್ಗೊಂಡು ಕಡೇ ಸೇವಕನ ಪರ್ಯಂತರಕ್ಕೂ ಇಜಿಪ್ತ ಶೀಮೆಯವರ ಎಲ್ಲಾ ಚೊಚ್ಚಲು ಮಕ್ಕಳನ್ನು ಮೃಗಗಳಲ್ಲಿ ಸಹ ಚೊಚ್ಚಲ ಮರಿಗಳನ್ನು ಸಂಹ

ರಿಸಿದರು. ರಕ್ತವು ಒರಿಸಲ್ಪಟ್ಟ ಮನೆಗಳೊಳಗೆ ಒಂದಕ್ಕಾದರೂ ನಾಶ ಮಾಡಬಾರದೆಂದು ಸರ್ವೇಶ್ವರನು ತನ್ನ ದೂತನಿಗೆ ಹೇಳಿದ್ದರಿಂದ ಇಸ್ರಾಯೇಲರಿಗೆ ಯಾವ ನಷ್ಟವೂ ಬರಲಿಲ್ಲ.

ಇವನ್ನು ಕಂಡು ಅರಸನು ಅಂಜಿ, ರಾತ್ರಿಯಲ್ಲಿಯೇ ಮೋಯಿಸನನ್ನು ಆರೋನನನ್ನು ಕರೆ ಕಳುಹಿಸಿದನು. ಮತ್ತು ಅವರನ್ನು ನೋಡಿ "ನೀವು ನಿಮ್ಮ ಜನರನ್ನು ಕರೆದುಕೊಂಡು ನಿಮ್ಮ ದೇವರನ್ನು ಆರಾಧಿಸಲು ವನಾಂತರಕ್ಕೆ ಹೊರಟು ಹೋಗಿರಿ. ಇಲ್ಲವಾದರೆ ನಮಗೆ ಇನ್ನೂ ಕಷ್ಟಗಳು ಬರುವವು" ಎಂದನು.

ಇಜಿಪ್ತ ದೇಶದವರು ಸಹ ಭಯಪಟ್ಟು ತಮ್ಮ ಆಸ್ತಿಯನ್ನು, ಬಂಗಾರ ಬೆಳ್ಳಿ ಮೊದಲಾದವುಗಳನ್ನು ಇಸ್ರಾಯೇಲರಿಗೆ ಕೊಟ್ಟು "ನೀವು ಇಲ್ಲಿಂದ ಲಗು ಹೋಗಿರಿ. ಇಲ್ಲವಾದರೆ ನಾವೆಲ್ಲರೂ ಸಾಯುವೆವು" ಎಂದು ಅರಿಕೆ ಮಾಡಿಕೊಂಡರು.

ಆಗ ಕೆಂಗುರಿ ಮರಿಯನ್ನು ಕೊಂದದ್ದು ಜೇಸುನಾಥ ಸ್ವಾಮಿಗೆ ಹೋಲ್ವಿಕೆಯಾಗಿದೆ. ಮೊದಲನೇ ಪಾಸ್ಕದ ಕುರಿಮರಿಯ ರಕ್ತವು ಮರಣ ದೂತನಿಂದ ಕಾಪಾಡಲ್ಪಟ್ಟ ಹಾಗೆ ನಮ್ಮ ಪ್ರಿಯ ಜೇಸುನಾಥರ ರಕ್ತವು ನಮ್ಮ ಆತ್ಮಗಳನ್ನು ಪಾಪದಿಂದ ರಕ್ಷಿಸಲ್ಪಡುತ್ತದೆ. ಇಸ್ರಾಯೇಲರು ತಮ್ಮನ್ನು ಇಜಿಪ್ತ ದೇಶದಿಂದ ಬಿಡುಗಡೆ ಮಾಡಿದ ಗುರ್ತಿಗಾಗಿ ಪಾಸ್ಕ ಹಬ್ಬವನ್ನು ಮಾಡಿದರು. ಈಗ ನಾವು, ಜೇಸುನಾಥರು ನಮ್ಮನ್ನು ಪಾಪದಿಂದ ರಕ್ಷಿಸಿ ಜಯಶೀಲರಾಗಿ ಪುನರುತ್ಥಾನವಾದದಕ್ಕೆ ಗುರ್ತಾಗಿ ಕೊಂಡಾಡುತ್ತೇವೆ.

## 25 ಕೆಂಪು ಸಮುದ್ರದೊಳಗೆ ಅದ್ಭುತವಾದ ದಾರಿ

ಮೋಶೆಯಿಸನು ಸರ್ವೇಶ್ವರನ ಮಕ್ಕಳನ್ನು ಕರಕೊಂಡು ಇಜಿಪ್ತ ದೇಶದಿಂದ ಪ್ರಯಾಣವಾದನು. ಹೀಗೆ ಪ್ರಯಾಣವಾಗಿ ಹೊರಟವರ ಲೆಕ್ಕವು ಆರು ಲಕ್ಷ ವೀರರೂ ಹೇರಳವಾದ ಹೆಂಗಸರೂ ಮಕ್ಕಳೂ ಆಗಿದ್ದರು. ಇನ್ನು ತಮ್ಮ ಕುರಿ ದನಗಳ ಹಿಂಡುಗಳನ್ನು ಸಹ ತೆಗೆದುಕೊಂಡು ಹೊರಟಿದ್ದರು. ಇದಲ್ಲದೆ ಜೋಸೇಫನ ಎಲುಬುಗಳನ್ನು ಸಹ ತೆಗೆದುಕೊಂಡು ವಾಗ್ದತ್ತದ ಭೂಮಿಗೆ ಪ್ರಯಾಣವಾದರು.

ಸರ್ವೇಶ್ವರನು ಅವರ ಪ್ರಯಾಣದಲ್ಲಿ ಅವರಿಗೆ ಸಹಾಯ ಮಾಡುತ್ತಿದ್ದರು. ಹ್ಯಾಗಂದರೆ ಹಗಲಿನಲ್ಲಿ ಮೇಘದ ಸ್ಥಂಬದಲ್ಲಿಯೂ ರಾತ್ರಿಯಲ್ಲಿ ಪ್ರಕಾಶವುಳ್ಳ ಅಗ್ನಿಯ ಸ್ಥಂಭದಲ್ಲಿಯೂ ಅವರ ಮುಂದೆ ನಡೆಯುತ್ತಿದ್ದರು. ಆದ್ದರಿಂದ ಇಸ್ರಾಯೇಲಸ್ತರು ಬಿಟ್ಟುಬಿಡದೆ ಹಗಲು ರಾತ್ರಿಯು ಪ್ರಯಾಣ ಮಾಡಬಹುದಾಗಿತ್ತು. ಈ ಎರಡು ಸ್ತಂಭಗಳು, ಜೇಸುನಾಥರು ನಮ್ಮ ದಾರಿಯು, ಸತ್ಯವು ಮತ್ತು ಜೀವವು ಆಗಿರುವದಕ್ಕೆ ಗುರುತಾಗಿದೆ.

ಇಸ್ರಾಯೇಲಸ್ತರು ಇಜಿಪ್ತ ದೇಶವನ್ನು ಬಿಟ್ಟಕೂಡಲೇ, ಇಜಿಪ್ತ ದೇಶದ ಅರಸನು ಇಸ್ರಾಯೇಲರ ಹಾಗೆ ಇನ್ನು ಕೆಲಸ ಮಾಡುವವರು ಯಾರು ಇಲ್ಲವೆಂದು ನೆನಸಿ, ಅವರನ್ನು ಪ್ರಯಾಣವಾಗಿ ಕಳಿಸಿದಕ್ಕಾಗಿ ಮನಸ್ತಾಪ ಪಟ್ಟನು. ಆದ್ದರಿಂದ ಒಂದು ಸೈನ್ಯವನ್ನು ತೆಗೆದುಕೊಂಡು, ಅವರನ್ನು ತಿರುಗಿ ತನ್ನ ದೇಶಕ್ಕೆ ಕರೆತರುವದಕ್ಕಾಗಿ ಹೊರಟನು.

ಇಸ್ರಾಯೇಲಸ್ತರು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವದಕ್ಕಾಗಿ ಕೆಂಪು ಸಮುದ್ರದ ಘಡದಲ್ಲಿ ತಂಗಿದ್ದರು. ಅರಸನ ಸೈನ್ಯವು ತಮ್ಮ ಕಡೆಗೆ ಬರುವದನ್ನು ಕಂಡು ಭಯಪಟ್ಟರು. ಮೋಯಿಸನನ್ನು ನೋಡಿ, "ಈ ಅರಣ್ಯದಲ್ಲಿ ಸಾಯುವ ಹಾಗೆ ಯಾಕೆ ನಮ್ಮನ್ನು ಇಜಿಪ್ತ ದೇಶದಿಂದ ಕರೆತಂದಿರಿ?" ಎಂದು ಮೊರೆಯಿಡಲಾರಂಭಿಸಿದರು. ಆದರೆ ಮೋಯಿಸನು ಪ್ರತ್ಯುತ್ತರವಾಗಿ "ಸರ್ವೇಶ್ವರನು ನಿಮ್ಮನ್ನು ಕಾಪಾಡುವರು. ನೀವು ಅಂಜಬೇಡಿರಿ" ಎಂದನು.

ಇಸ್ರಾಯೇಲರ ಮುಂದೆ ಹಾದಿ ತೋರಿಸುತ್ತ ನಡೆಯುತ್ತಿದ್ದ ಮೇಘದ ಸ್ತಂಭವು ಅವರ ಹಿಂದೆ ಬಂದು ಇಜಿಪ್ತರಿಗೆ ಅವರು ಕಾಣದ ಹಾಗೆ ಅಡ್ಡ ಮಾಡಿತು. ಆಗ ಮೋಯಿಸನು ಸರ್ವೇಶ್ವರನ ಕಟ್ಟಳೆ ಪ್ರಕಾರ ತನ್ನ ಬೆತ್ತವನ್ನು ಕೆಂಪು ಸಮುದ್ರದ ಮೇಲೆ ಚಾಚಿದನು. ನೀರು ಎರಡು ಭಾಗಗಳಾಗಿ ಮಾರ್ಪಟ್ಟು ಮಧ್ಯದಲ್ಲಿ ತೇವವಿಲ್ಲದನೆಲವು ಕಾಣಿಸಿಕೊಂಡಿತು. ಹೀಗೆ ಇಸ್ರಾಯೇಲಸ್ತರು ಕೆಂಪು ಸಮುದ್ರವನ್ನು ದಾಟಿ ಈಚೆಯ ದಂಡೆಗೆ ಬಂದು ಸೇರಿದರು. ಇಜಿಪ್ತರು ಇದನ್ನು ಕಂಡು ತಾವು ಸಹ ಸಮುದ್ರದ ದಾರಿಯಲ್ಲಿ ನಡೆದು ಹೋಗಲು ಪ್ರಯಾಣರಾದರು ಆದರೆ ಇಸ್ರಾಯೇಲರು ದಂಡೆಗೆ ಸೇರಿದ ಕೂಡಲೇ ಮೋಯಿಸನು ತನ್ನ ಬೆತ್ತವನ್ನು ತಿರುಗಿ ಸಮುದ್ರದ ಮೇಲೆ ಚಾಚಿದನು. ಕೂಡಲೇ ನೀರು ಮತ್ತೆ ಕೂಡಿಕೊಂಡಿತು. ಅರಸನ ಕುದುರೆಗಳು, ರಾಹುತರು, ಸಿಪಾಯಿಗಳು ಒಬ್ಬನಾದರೂ ತಪ್ಪಿಸಿಕೊಳ್ಳದೆ ಎಲ್ಲರೂ ಸಮುದ್ರದಲ್ಲಿ ಮುಳುಗಿ ಹೋದರು. ಇವನ್ನೆಲ್ಲಾ ಕಂಡ ಇಸ್ರಾಯೇಲಸ್ತರು, ನಿಜವಾಗಿ

ದೇವರು ತಮ್ಮನ್ನು ಕಾಪಾಡುತ್ತಾರೆಂದು ನಂಬಿ, ತಮ್ಮನ್ನು ಇಜಿಪ್ತರ ಕೈಯಿಂದ ಕಾಪಾಡಿದಕ್ಕಾಗಿಯೂ, ತಮ್ಮನ್ನು ಬಿಡುಗಡೆ ಮಾಡಿದಕ್ಕಾಗಿಯೂ, ಮೋಯಿಸನ ಮತ್ತು ಆರೋನನ ಸಂಗಡ ದೇವರಿಗೆ ಮೇಲರಿತ ಸ್ತೋತ್ರವನ್ನು ಹೇಳಲು ಸಂಗೀತವನ್ನು ಹಾಡಿದರು.

## 26 ಮನ್ನಾವೆಂಬ ಭೋಜನವನ್ನು ಕುರಿತು

ಇಸ್ರಾಯೇಲಸ್ತರು ಕೆಂಪು ಸಮುದ್ರವನ್ನು ದಾಟಿದ ಬಳಿಕ ಮೂರು ದಿವಸಗಳ ವರೆಗೆ ಒಂದು ಅರಣ್ಯದಲ್ಲಿ ಪ್ರಯಾಣ ಮಾಡಿದರು. ಆದ್ದರಿಂದ ಅವರು ಬಹಳ ನೀರಡಿಸಿಕೊಂಡರು. ಆದರೆ ಎಲ್ಲಿಯೂ ನೀರು ದೊರೆಯಲಿಲ್ಲ. ಕೊನೆಗೆ ಮಾರಾ ಎಂಬ ಸ್ಥಳಕ್ಕೆ ಬಂದು ತಂಗಿದರು. ಆದರೆ ಅಲ್ಲಿ ನೀರು ಇದ್ದರೂ ಕುಡಿಯಲಿಕ್ಕೆ ಆಗದೆ ಬಹಳ ಕಹಿಯಾಗಿತ್ತು. ಆದ್ದರಿಂದ ತಿರುಗಿ ಮೋಯಿಸನ ಮೇಲೆ ಗುಣಗುಟ್ಟಲು ಆರಂಭಿಸಿದರು.

ಆಗ ಮೋಯಿಸನು ಸರ್ವೇಶ್ವರನನ್ನು ಕುರಿತು ಪ್ರಾರ್ಥಿಸಿದನು. ಸರ್ವೇಶ್ವರನು ಆತನಿಗೆ ಒಂದು ಮರವನ್ನು ತೋರಿಸಿ "ನೀನು ಈ ಗಿಡವನ್ನು ಆ ನೀರಿನಲ್ಲಿ ಹಾಕಿದರೆ ಅದು ಸಿಹಿಯಾಗುವದು, ಆಗ ಜನರು ಕುಡಿಯಬಹುದು."ಎಂದು ಅರುಹಿಸಿದರು. ಸರ್ವೇಶ್ವರನ ಕಟ್ಟಳೆ ಪ್ರಕಾರ ಮೋಯಿಸನು ಆ ಮರವನ್ನು ನೀರಿನಲ್ಲಿ ಬೀಸಾಕಿದನು. ಕೂಡಲೇ ನೀರು ಸಿಹಿಯಾಯಿತು ಇಸ್ರಾಯೇಲಸ್ತರೆಲ್ಲರೂ ಕುಡಿದರು.

ಕೊನೆಗೆ ಇಸ್ರಾಯೇಲಸ್ತರಿಗೆ ತಿನ್ನಲು ಆಹಾರ ದೊರೆಯದೆ ಹೋಯಿತು. ಆಗಲವರು ಮೋಯಿಸನಮೇಲೆ ಮುಂಜಿ

ಗಿಂತ ಅಧಿಕವಾಗಿ ಮೊರೆ ಇಟ್ಟು, ಯಾಕೆ ನಮ್ಮನ್ನು ಇಜಿಪ್ತ ದೇಶದಿಂದ ಕರೆತಂದಿ? ಅಲ್ಲಿ ನಾವು ಹೊಟ್ಟೆತುಂಬ ಊಟ ಮಾಡುತ್ತಿದ್ದೆವು. ಈಗ ಇಲ್ಲಿ ಹಸಿವಿನಿಂದ ಸಾಯುವೆವು" ಎಂದರು.

ತಿರುಗಿ ಸರ್ವೇಶ್ವರನು ಮೋಶೆಯಿಸನ ಸಂಗಡ ಮಾತಾಡಿ ಹೇಳಿದ್ದೇನೆಂದರೆ "ನಾವು ಮುಂಜಾನೆ ರೊಟ್ಟಿಯನ್ನು ಸಂಜೆ ಯಲ್ಲಿ ಮಾಂಸವನ್ನು ಕಳಿಸುವೆವೆಂದು ನೀನು ಇಸ್ರಾಯೇಲ ಪ್ರಜೆಗೆ ತಿಳಿಸು. ಆಗಲಾದರೂ ನಾವು ಅವರನ್ನು ಕಾಪಾಡುವೆ ವೆಂದು ಅವರು ತಿಳಕೊಳ್ಳಲಿ." ಎಂದು ನುಡಿದರು.

ಆ ದಿನ ಸಾಯಂಕಾಲದಲ್ಲಿ ಅನೇಕ ಪಕ್ಷಿಗಳು ಅಲ್ಲಿಗೆ ಬಂದವು. ಜನರು ಅವುಗಳನ್ನು ಹಿಡಿದು ಭಕ್ಷಿಸಿದರು. ಮುಂಜಾನೆ ಸಮಯದಲ್ಲಿ ನೆಲವೆಲ್ಲವೂ ಒಂದು ತರದ ಬಿಳಿ ಬೀಜಗಳಿಂದ ತುಂಬಿತ್ತು. ಈ ಬೀಜಗಳನ್ನು ಇಸ್ರಾಯೇಲಸ್ತರು ಮನ್ನಾವೆಂದು ಕರೆಯುತ್ತಿದ್ದರು. ಅವರು ಇವುಗಳನ್ನು ಆರಿಸಿ ಭುಜಿಸುತ್ತಿದ್ದರು. ಆಗ ಮೋಶೆಯಿಸನು ಅವರನ್ನು ನೋಡಿ, ಕರ್ತರು ನಿಮಗೆ ಭುಜಿ ಸಲು ಕಳಿಸಿದ ಆಹಾರವು ಇದು. ಆದ್ದರಿಂದ ನೀವು ಆಯಾ ದಿವಸದ ಸಲುವಾಗಿ ಸಾಕಾಗುವಷ್ಟು ಮಾತ್ರ ಆರಿಸಿಕೊಳ್ಳಿರಿ" ಎಂದನು.

ಇಸ್ರಾಯೇಲಸ್ತರು ಮೋಶೆಯಿಸನು ತಿಳಿಸಿದ ಹಾಗೆ ಮಾಡುತ್ತಿದ್ದರು. ಭೂಮಿಯಮೇಲೆ ಹೆಚ್ಚಾಗಿ ಬಿದ್ದ ಕಾಳು ಗಳು ಸೂರ್ಯನು ಹುಟ್ಟಿದ ಮೇಲೆ ಕರಗಿ ಹೋಗುತ್ತಿದ್ದವು.

ಆರನೇಯ ದಿವಸ ಮೋಶೆಯಿಸನು ಇಸ್ರಾಯೇಲಸ್ತರಿಗೆ, "ಎರಡು ದಿವಸಗಳ ಸಲುವಾಗಿ ಆರಿಸಿಕೊಳ್ಳಿರಿ ಯಾಕಂದರೆ

ನಾಳೆ ಏಳನೇಯದಿವಸ, ಅದು ಪರಿಶುದ್ಧವಾದದ್ದು, ಆದ್ದರಿಂದ ಆ ದಿವಸ ನೀವ್ ಆರಿಸಿಕೊಳ್ಳಬಾರದು" ಎಂದು ಹೇಳಿದನು. ಹೀಗೆ ಸರ್ವೇಶ್ವರನು ಪರಿಶುದ್ಧವಾದ ದಿವಸವನ್ನು ಆಚರಿಸಲು ಅವರಿಗೆ ಕಲಿಸಿಕೊಟ್ಟರು. ಮತ್ತು ಆ ದಿವಸ ಮನ್ನಾ ಭೋಜನವು ಬೀಳುತ್ತಿರಲಿಲ್ಲ.

ಈ ಪ್ರಕಾರವಾಗಿ ಸರ್ವೇಶ್ವರನು ಮನ್ನಾವೆಂಬ ಭೋಜನವನ್ನು ಅರಣ್ಯದಲ್ಲಿ ನಾಲ್ವತ್ತು ವರ್ಷಗಳ ವರೆಗೆ ಅಂದರೆ ಅವರು ಕಾನನ್ ದೇಶವನ್ನು ಸೇರುವ ತನಕ ಕಳಿಸಿಕೊಟ್ಟರು. ಮನ್ನವೆಂಬದು ಸತ್ಪ್ರಸಾದ ಅಪ್ಪಕ್ಕೆ ಹೋಲ್ಕಿಕೆಯಾಗಿದೆ. ಹ್ಯಾಗಂದರೆ ನಮ್ಮ ರಕ್ಷಕರ ಶರೀರ ಮತ್ತು ರಕ್ತವು ಮೋಕ್ಷದಿಂದ ಬಂದು ಈ ಭೂಲೋಕದಲ್ಲಿ ವಾಸ ಮಾಡುವ ನಮ್ಮನ್ನು ಮೋಕ್ಷಕ್ಕೆ ಹೋಗುವವರೆಗೆ ಕಾಪಾಡುತ್ತದೆ.

## ೨೭ ಹತ್ತು ಕಲ್ಪಣೆಗಳು

ಇಸ್ರಾಯೇಲಪ್ತರು ಇಜಿಪ್ತ ದೇಶವನ್ನು ಬಿಟ್ಟುಬಂದ ಬಳಿಕ ಮೂರು ತಿಂಗಳುಗಳಾದ ಮೇಲೆ ಸಿನಾಯಿ ಪರ್ವತ ಬಳಿಯಲ್ಲಿ ಬಂದು ಸೇರಿದರು.

ಸರ್ವೇಶ್ವರನು ಮೋಯಿಸನನ್ನು ಕರೆದು "ನೀನು ಹೋಗಿ ಜನರನ್ನು ಸಿದ್ಧಪಡಿಸು. ನಾವು ಅವರಿಗೆ ಮೂರನೇಯ ದಿವಸ ದರ್ಶನವಾಗುವೆವು" ಎಂದರು. ಮೂರನೇಯ ದಿವಸ ಮುಂಜಾನೆ ಸಮಯದಲ್ಲಿ ಗುಡುಗು ಮಿಂಚು ಪ್ರಾರಂಭಿಸಿತು. ಒಂದು ದೊಡ್ಡ ಮೇಘವು ಪರ್ವತದ ಮೇಲೆ ನಿಂತಿತು. ಆಗ ಒಂದು ತುತೂರಿಯು ಬಹಳ ಶಬ್ದವಾಗಿ ಊದಲ್ಪಟ್ಟಿತು.

ಇದನ್ನು ಕೇಳಿ ಇಸ್ರಾಯೇಲಸ್ತರು ಭಯಪಟ್ಟರು. ಮೋಯಿಸನು ಇವರನ್ನು ಸೀನಾಯಿ ಪರ್ವತದ ಅಡಿಯಲ್ಲಿ ಕರೆ ತಂದನು. ಆಗ ಪರ್ವತವು ಕದಲಿ ಅದರೊಳಗಿಂದ ಹೊಗೆಯು ಹೊರಗೆ ಬರಲಾರಂಭಿಸಿತು. ತುತೂರಿಯ ಶಬ್ದವು ಇನ್ನೂ ಹೆಚ್ಚಾಯಿತು. ಆಗ ಸರ್ವೇಶ್ವರನು ಮೇಘದೊಳಗಿಂದ ಮಾತಾಡಲಾರಂಭಿಸಿದರು.

ಸರ್ವೇಶ್ವರನ ಸ್ವರವನ್ನು ಕೇಳಿ ಇಸ್ರಾಯೇಲಸ್ತರು ಭಯಪಟ್ಟರು. ಅವರು ಮೋಯಿಸನನ್ನು ಕಂಡು, "ದೇವರು ನಮ್ಮೊಂದಿಗೆ ಮಾತಾಡದ ಹಾಗೆ ಮಾಡು, ಇಲ್ಲದಿದ್ದರೆ ನಾವು ಸಾಯುವೆವು. ಎಂದು ಹೇಳಿದರು.

ಅದಕ್ಕೆ ಮೋಯಿಸನು ನೀವು ಅಂಜಬೇಡಿರಿ. ಯಾಕಂದರೆ "ನೀವು ಸರ್ವೇಶ್ವರನಿಗೆ ಭಯಪಟ್ಟು ನಡೆಯುವದಕ್ಕಾಗಿ ನಿಮಗೆ ತೋರಿಸಿದರು. ಆಗ ನೀವು ಪಾಪದಲ್ಲಿ ಬೀಳುವದಿಲ್ಲ. ಎಂದು ಹೇಳಿ ಮೋಯಿಸನು ಸರ್ವೇಶ್ವರನೊಂದಿಗೆ ಮಾತಾಡುವದಕ್ಕಾಗಿ ಸೀನಾಯಿ ಪರ್ವತವನ್ನು ಹತ್ತಿ ಹೋದನು. ಆ ಸೀನಾಯಿ ಪರ್ವತದಮೇಲೆ ಸರ್ವೇಶ್ವರನು ಮೋಯಿಸನಿಗೆ ಹೇಳಿದ್ದೇನಂದರೆ,

"ನಿಮ್ಮನ್ನು ಇಜಿಪ್ತ ದೇಶದ ದಾಸತ್ವದೊಳಗಿಂದ ಬಿಡಿಸಿದ ಕರ್ತನಾದ ದೇವರು ನಾನೆ; ನನ್ನ ಮುಂದೆ ನಿಮಗೆ ಬೇರೆ ದೇವರುಗಳು ಇರಬಾರದು.

"ಸರ್ವೇಶ್ವರನ ತಿರುನಾಮವನ್ನು ವ್ಯರ್ಥವಾಗಿ ಸ್ವೀಕರಿಸದೆ ಇರುವದು.

"ಸರ್ವೇಶ್ವರನ ತಿರು ದಿವಸವನ್ನು ಆಚರಿಸಿ ನೆನಸುವದು.

"ತಂದೆ ತಾಯಿಗಳನ್ನು ಬಹುಮಾನವಾಗಿ ನಡಿಸುವದು.

"ಕೊಲೆಪಾತಕವನ್ನು ಮಾಡದೆ ಇರುವದು.

"ಮೋಹ ಆಗಮ್ಯಾಗಮನ ಮಾಡದೆ ಇರುವದು.

"ಕದೆಯದೆ ಇರುವದು.

"ಅಸತ್ಯ ಸಾಕ್ಷಿಗಳ ನುಡಿಯದೆ ಇರುವದು.

"ಪರಸ್ತ್ರೀಯರಿಗೆ ಆಶೆ ಪಡದೆ ಇರುವದು.

"ಪರರ ಒಡವೆಗೆ ಆಶೆ ಮಾಡದೆ ಇರುವದು. ಎಂದು ಹೇಳಿದರು.

ಇಸ್ರಾಯೇಲಸ್ತರು ಈ ದಿವಸದಿಂದ ಪ್ರತಿವರ್ಷವು ಸರ್ವೇಶ್ವರನು ಸೀನಾಯಿ ಪರ್ವತದಮೇಲೆ ದರ್ಶನವಾದ ದಿವಸವನ್ನು ಕೊಂಡಾಡುವದಕ್ಕಾಗಿ ಸ್ಪಿರಿತು ಸಾಂಕ್ತು ಹಬ್ಬವನ್ನು ಮಾಡುತ್ತಿದ್ದರು. ಆದರೆ ನಾವು, ಕ್ರಿಸ್ತುವರು ವಿಶ್ವಾಸಿಗಳ ಮೇಲೆ ಅವರ ವರಪ್ರಸಾದಗಳನ್ನು ಕರುಣಿಸುವ ಹಾಗೆ ಸ್ಪಿರಿತು ಸಾಂಕ್ತುವಿನ ಹಬ್ಬವನ್ನು ಕೊಂಡಾಡುತ್ತೇವೆ.

## 28 ಚಿನ್ನದ ಕರುವನ್ನು ಕುರಿತು

ಸರ್ವೇಶ್ವರನು ತಮ್ಮ ಸಂಗಡ ಮಾತಾಡುವದಕ್ಕಾಗಿ ತಿರುಗಿ ಮೋಯಿಸನನ್ನು ಸೀನಾಯಿ ಪರ್ವತದ ಮೇಲೆ ಕರೆದರು. ಆದ್ದರಿಂದ ಆತನು ಕರ್ತರು ಹೇಳುವ ಮಾತನ್ನು ಕೇಳುತ್ತಾ ಅಲ್ಲಿಯೇ ನಾಲ್ವತ್ತು ಹಗಲು ನಾಲ್ವತ್ತು ರಾತ್ರಿಗಳ

ವರೆ ನಿಂತನು. ಈ ಸಮಯದಲ್ಲಿ ಆತನಿಗೆ ಸರ್ವೇಶ್ವರನು, ಹತ್ತು ಕಲ್ಪಣೆಗಳನ್ನು ಬರೆದ ಕಲ್ಲುಗಳನ್ನು ಕೊಟ್ಟರು.

ಇಷ್ಟರೊಳಗೆ ಇಸ್ರಾಯೇಲನ್ನರು ಮೋಯಿಸನು ಲಗು ಬಾರದ್ದನ್ನು ಕಂಡು, ಬೇಸರ ಪಟ್ಟರು. ಮತ್ತು ಆರೋನನ ಹತ್ತರ ಹೋಗಿ, "ನಾವು ಆರಾಧಿಸುವದಕ್ಕಾಗಿ ಒಬ್ಬ ದೇವ ರನ್ನು ಕೊಡು" ಎಂದು ಪೀಡಿಸಿದರು.

ಆಗ ಆರೋನನು ಅವರನ್ನು ನೋಡಿ "ನಿಮ್ಮ ಹೆಂಡತಿ ಮಕ್ಕಳ ಹತ್ತರವಿರುವ ಬಂಗಾರವನ್ನೆಲ್ಲ ತೆಗೆದುಕೊಂಡು ಬರ್ರಿ" ಎಂದನು. ಅವರು ಹಾಗೆಯೇ ತರಲು ಆರೋನನು ಅವುಗಳನ್ನು ಕರಗಿಸಿ ಒಂದು ಬಂಗಾರದ ಕರುವನ್ನು ಮಾಡಿದನು.

ಇದನ್ನು ಕಂಡು ಜನರು "ಓ ಇಸ್ರಾಯೇಲರೇ ಇಗೋ ಇದು ನಿಮ್ಮ ದೇವರು" ಎಂದು ಹೇಳಲಾರಂಭಿಸಿದರು. ಮತ್ತು ಅದಕ್ಕೆ ದೂಪವನ್ನು ಹಾಕುತ್ತ ಬಲಿಯನ್ನು ಒಪ್ಪಿಸಿ ಕೊಡು ತ್ತಿದ್ದರು. ಎಲ್ಲ ತಿಳಿದವರಾದ ಸರ್ವೇಶ್ವರನು ಮೋಯಿಸನನ್ನು ನೋಡಿ, "ಅಗೋ ಜನರು ತಿರುಗಿ ಪಾಪದಲ್ಲಿ ಬೀಳುತ್ತಿದ್ದಾರೆ. ಅವರು ಒಂದು ಬಂಗಾರದ ಕರುವನ್ನು ಆರಾಧಿಸುತ್ತಿದ್ದಾರೆ. ಆದ್ದರಿಂದ ನಾವು ಅವರನ್ನು ತಿರುಗಿ ನಾಶನ ಮಾಡುವೆವು" ಎನ್ನಲು, ಮೋಯಿಸನು ಅವರನ್ನು ಕಾಪಾಡುವಹಾಗೆ ಸರ್ವೇ ಶ್ವರನನ್ನು ಕುರಿತು ಬೇಡಿಕೊಂಡನು.

ತರುವಾಯ ಮೋಯಿಸನು ಹತ್ತು ಕಲ್ಪಣೆಗಳ ಕಲ್ಲುಗ ಳನ್ನು ಹೊತ್ತುಕೊಂಡು ಪರ್ವತವನ್ನು ಇಳಿದು ಜನರ ಗುಂಪಿನ ಸಮೀಪದಲ್ಲಿ ಬರುವಾಗ್ಯೆ ಅವರು ಬಂಗಾರದ ಕರುವನ್ನು ಆರಾ ಧಿಸುತ್ತ ಅದರ ಸುತ್ತಲೂ ಕುಣಿಯುವದನ್ನು ಕಂಡನು.

ಮೋಯಿಸನಿಗೆ ಬಹಳ ಸಿಟ್ಟು ಬಂತು. ಆಗ ತಾನು ತಂದ ಎರಡು ಕಲ್ಲುಗಳನ್ನು ಸಿಟ್ಟಿನಿಂದ ಕೆಳಗೆ ಬಿಸಾಕಲು ಅವು ಒಡೆದು ಸಾವಿರಾರು ಚೂರುಗಳಾದವು. ತರುವಾಯ ಅಲ್ಲಿಂದ ಆ ಬಂಗಾರದ ಕರುವನ್ನು ಎತ್ತಿ ಬೆಂಕಿಯಲ್ಲಿ ಬಿಸಾಕಿದನು. ಇದನ್ನು ನೋಡಿ ಜನರು ತಮ್ಮ ಪಾಪಗಳಿಗಾಗಿ ಬಹಳ ಮನಸ್ತಾಪ ಪಟ್ಟರು.

ತಿರುಗಿ, ಮೋಯಿಸನು ಜನರ ಸಲುವಾಗಿ ಪ್ರಾರ್ಥಿಸುವದಕ್ಕಾಗಿ ಸಿನಾಯಿ ಪರ್ವತದ ಮೇಲೆ ಹೋದನು. ಆಗ ಸರ್ವೇಶ್ವರನು ಆತನು ಒಡೆದ ಕಲ್ಲಿನ ಹಲಿಗೆಗಳ ಹಾಗೆಯೇ ಎರಡು ಕಲ್ಲುಗಳನ್ನು ತಯಾರು ಮಾಡಲು ಹೇಳಿದರು. ಅವುಗಳಮೇಲೆ ಮೋಯಿಸನು ಹತ್ತು ಕಲ್ಪಣೆಗಳನ್ನು ಬರೆದನು.

ತರುವಾಯ ಸರ್ವೇಶ್ವರನು ಮೋಯಿಸನಿಗೆ ಒಂದು ಸುಂದರವಾದ ಪೆಟ್ಟಿಗೆಯನ್ನು ತಯಾರು ಮಾಡಲು ಹೇಳಿ, ಅದರ ಒಳಗೆ ಒಳ್ಳೇ ಬಟ್ಟೆಯನ್ನು ಹೊದಿಸಿ ಮೇಲೆ ಬಂಗಾರದ ತಗಡಿನಿಂದ ಮುಚ್ಚಲು ಹೇಳಿದರು. ಮತ್ತು ಮುಚ್ಚಣಿಕೆಯ ಮೇಲೆ ಎರಡು ಬಂಗಾರದ ಸಮ್ಮನಸ್ಸುಗಳ ರೂಪವನ್ನು ಮಾಡಿ ಇಡಲು ಆಜ್ಞಾಪಿಸಿದರು. ಇದು ವಾಗ್ದತ್ತದ ಪೆಟ್ಟಿಗೆಯೆಂದು ಕರೆಯಲ್ಪಡುತ್ತದೆ. ಈ ಪೆಟ್ಟಿಗೆಯೊಳಗೆ ಸರ್ವೇಶ್ವರನು ಕೊಟ್ಟ ಎರಡು ಕಲ್ಲುಗಳ ಹಲಿಗೆಗಳು ಇಡಲ್ಪಟ್ಟವು. ಮತ್ತು ಚಂದವಾದ ಬಣ್ಣಗಳಿಂದ ಹೊಲಿದ ಅನೇಕ ತರದ ಹೂಗಳಿರುವಂಥಾ ಲಿನನಿನ ಬಟ್ಟೆಯಿಂದ ಒಂದು ಗುಡಾರವನ್ನು ಮಾಡಿ ಅದರೊಳಗೆ ಈ ಪೆಟ್ಟಿಗೆಯನ್ನಿಟ್ಟರು ಈ ಗುಡಾರವು ದೇವಾಲಯವಾಗಿತ್ತು.

ಅವರು ಅವನಿಗೆ "ಒಂದು ಕಂಚಿನ ಹಾವನ್ನು ಮಾಡು ಹಾವಿನಿಂದ ಕಡಿಯಲ್ಪಟ್ಟವರು ಅದನ್ನು ನೋಡಿದರೆ ರಕ್ಷಿಸಲ್ಪಡುವರು" ಎಂದು ನುಡಿದರು.

ಅದರಂತೆಯೇ ಮೋಯಿಸನು ಒಂದು ಕಂಚಿನ ಹಾವನ್ನು ಮಾಡಿ ಅದನ್ನು ಎಲ್ಲರೂ ನೋಡುವಂತೆ ಎತ್ತರವಾಗಿ ಇಟ್ಟನು.

ಈ ಕಂಚಿನ ಸರ್ಪವು ಕಪಾಲ ಬೆಟ್ಟದ ಮೇಲೆ ಮನುಷ್ಯರನ್ನು ರಕ್ಷಿಸುವದಕ್ಕಾಗಿ ಶಿಲುಬೆಯ ಮೇಲೆ ಮರಣಹೊಂದಿದ ಜೇಸುನಾಥರಿಗೆ ಹೋಲ್ಕೆಯಾಗಿದೆ.

## 30 ಇಸ್ರಾಯೇಲರು ವಾಗ್ದತ್ತ ಪ್ರದೇಶಕ್ಕೆ ಬಂದು ಸೇರುವದು

ಇಸ್ರಾಯೇಲಪ್ಪರು ನಾಲ್ವತ್ತು ವರ್ಷಗಳವರೆಗೆ ಅರಣ್ಯದಲ್ಲಿ ಸಂಚಾರ ಮಾಡಿದರು. ಒಂದು ದಿನ ಮೋಯಿಸನು ಇವರನ್ನು ಕರೆದು ಜೋಸ್ವೆಯು ಇಸ್ರಾಯೇಲರನ್ನು ವಾಗ್ದತ್ತ ಪ್ರದೇಶಕ್ಕೆ ಕರೆದೊಯ್ಯಲು ಯಜಮಾನನಾಗಬೇಕೆಂದು ಸರ್ವೇಶ್ವರನ ಕಟ್ಟಳೆಯಾಗಿದೆಯೆಂದು ತಿಳಿಸಿದನು. ತರುವಾಯ ಮೋಯಿಸನು ನೇಬೋ ಎಂಬ ಪರ್ವತದ ಮೇಲೆ ಹತ್ತಲು, ಅಲ್ಲಿಂದ ಸರ್ವೇಶ್ವರನು ಆತನಿಗೆ ಕಾನಾನ್ ದೇಶವನ್ನು ತೋರಿಸಿ, ನಾವು ಇದನ್ನು ಇಸ್ರಾಯೇಲರಿಗೆ ಕೊಡುವೆವು. ಆದರೆ ನೀನು ನಮ್ಮ ಮಾತನ್ನು ನಂಬದ ಕಾರಣ ಅದನ್ನು ಪ್ರವೇಶಿಸಲಾರೆ ಎಂದು ವಚನಿಸಿದರು.

ಮೋಯಿಸನು ೧೨೦ ವರ್ಷ ಪ್ರಾಯ ನಡೆಯುವಾಗ ಮರಣಹೊಂದಿದನು. ಈತನು ಬಹಳ ಜಾಣನಾದ ಅಧಿಪತಿಯೂ, ಒಬ್ಬ ಮೇಲಾದ ಅರ್ಚ ಶಿಷ್ಯನು ಆಗಿದ್ದನು ಮತ್ತು

ಒಳ್ಳೇ ದೀರ್ಘದರ್ಶಿಯೂಯಾಗಿದ್ದನು. ಇವನುಸತ್ಯ ವೇದದ "ಪೆಂತಾತೇವುಕ್" ಎಂಬ ಮೊದಲನೇ ಇದು ಪುಸ್ತಕಗಳನ್ನು ಬರೆದಿಟ್ಟನು.

ಈತನ ಮರಣಾನಂತರಸರ್ವೇಶ್ವರನು ಜೋಸ್ವೆಯನ್ನು ಕುರಿತು ಹೇಳಿದ್ದೇನಂದರೆ:— ನೀನು ಇಸ್ರಾಯೇಲಸ್ತರ ಅಧಿಕಾರಿಯಾಗಿದ್ದು ಅವರನ್ನು ವಾಗ್ದತ್ತದ ಭೂಮಿಗೆ ಕರೆದು ಕೊಂಡು ಹೋಗು. ನಾವು ಮೋಯಿಸನಿಗೆ ಸಹಾಯ ಮಾಡಿದ ಹಾಗೆ ನಿನಗೂ ಸಹಾಯ ಮಾಡುವೆವು. ಎಂದಿಗೂ ನಿನ್ನ ಕೈಬಿಡಲಾರೆವು. ಧೈರ್ಯದಿಂದಲೂ ಬಲದಿಂದಲೂ ಇರು ಎಂದು ವಚನಿಸಿದರು.

ಆದಕಾರಣ ಜೋಸ್ವೆಯು ಇಸ್ರಾಯೇಲಸ್ತರ ಮೇಲೆ ಒಡೆತನವನ್ನು ತೆಗೆದುಕೊಂಡನು. ಈತನು ಇಬ್ಬರು ಪಾಳತಿಗಾರರನ್ನು ತನಗಿಂತಮುಂಚೆ ಜೆರಿಕೋ ಪಟ್ಟಣದಲ್ಲಿರುವ ಜೋರ್ದಾನ ನದಿಯನ್ನು ದಾಟಲು ಕಳುಹಿಸಿದನು. ಈ ಇಬ್ಬರು ಪಾಳತಿಗಾರರು ರಾಹಾಬ್ ಎಂಬ ಸ್ತ್ರೀಯ ಮನೆಯಲ್ಲಿದ್ದರು. ಈ ಮನೆಯು ಪಟ್ಟಣದ ಗೋಡೆಯ ಮಗ್ಗಲಿನಲ್ಲಿ ಕಟ್ಟಲ್ಪಟ್ಟಿತ್ತು. ಆ ಪಟ್ಟಣದ ಅರಸನು ಈ ಇಬ್ಬರು ಇಸ್ರಾಯೇಲಸ್ತರ ಸುದ್ದಿಯನ್ನು ತಿಳಕೊಂಡು ಅವರನ್ನು ತನಗೆಒಪ್ಪಿಸಲು ರಾಹಾಬಳಿಗೆ ಆಜ್ಞಾಪಿಸಿದನು. ಆದರೆ ಆಕೆಯು ಅವರನ್ನು ಮಾಳಿಗೆಯ ಮೇಲೆ ಬಚ್ಚಿಟ್ಟು, ತನ್ನ ಮನೆಯನ್ನು ಬಿಟ್ಟು ಹೋದರೆಂದು ಹೇಳಿದಳು. ಮತ್ತು ರಾತ್ರಿಯಾದ ಮೇಲೆ ಒಂದು ಹಗ್ಗದಿಂದ ಅವರನ್ನು ಕೆಳಗೆ ಇಳಿಸಿ ರಹಸ್ಯವಾಗಿ ಕಿಟಿಕಿಯ ಸಂದಿನಿಂದ ಅವರನ್ನು ಪಾರು ಮಾಡಿ ಕಳಿಸಿದಳು. ಇವರು ತಿರುಗಿ

ಜೋಸ್ವೆಯ ಹತ್ತಿರ ಬಂದು, ಹೇಳಿದ್ದೇನಂದರೆ, "ನಿಜವಾಗಿ ಸರ್ವೇಶ್ವರನು ನಮಗೆ ಜೆರಿಕೋ ಪಟ್ಟಣವನ್ನು ಕೊಟ್ಟಿದ್ದಾರೆ. ಯಾಕಂದರೆ ಅಲ್ಲಿಯ ಜನರೆಲ್ಲರೂ ನಮಗೆ ಭಯಪಡುತ್ತಿದ್ದಾರೆ" ಎಂದರು.

ಆದ್ದರಿಂದ ಜೊಸ್ವೆಯು ಜೋರ್ಡಾನ ನದಿಯನ್ನು ದಾಟಲು ಇಸ್ರಾಯೇಲಸ್ತರನ್ನು ಸಿದ್ಧಪಡಿಸಿದನು. ಗುರುಗಳು ಮುಂದೆ ವಾಗ್ದತ್ತದ ಪೆಟ್ಟಿಗೆಯನ್ನು ಹೊತ್ತುಕೊಂಡು ಹೋದರು. ಅವರು ಜೋರ್ಡಾನ ನದಿಯಲ್ಲಿ ಕಾಲಿಟ್ಟ ಕೂಡಲೇ ಅಲ್ಲಿಯ ನೀರು ಎರಡು ಭಾಗಗಳಾಗಿ ವಿಭಾಗಿಸಲ್ಪಟ್ಟು ಮಧ್ಯ ದಲ್ಲಿ ದಾರಿಯನ್ನು ಬಿಟ್ಟಿತು. ಆಗ ಇಸ್ರಾಯೇಲರು ಸುರಕ್ಷಿತ ವಾಗಿ ಇನ್ನೊಂದು ಥಡಕ್ಕೆ ಬಂದು ಸೇರಿದರು. ಈ ಪ್ರಕಾರ ವಾಗಿ ಇಸ್ರಾಯೇಲರು ಅರಣ್ಯ ಸಂಚಾರವನ್ನು ಮುಗಿಸಿ ಕೊಂಡು ಕೊನೆಗೆ ವಾಗ್ದತ್ತದ ಪ್ರದೇಶಕ್ಕೆ ಬಂದು ಸೇರಿದರು. ಇವರು ವಾಗ್ದತ್ತದ ಭೂಮಿಯನ್ನು ಪ್ರವೇಶಿಸಿದ ಕೂಡಲೇ ಮನ್ನಾವೆಂಬ ಭೋಜನವು ಬೀಳುವದು ಕಟ್ಟಾಯಿತು. ಯಾಕಂದರೆ ಆ ಪ್ರದೇಶವು ಹಾಲು ಜೇನು ಹರಿಯುವಂಥಾ ಪ್ರದೇಶವಾಗಿತ್ತು.

ಈ ವಾಗ್ದತ್ತದ ಭೂಮಿಯು ಮೋಕ್ಷಕ್ಕೆ ಹೋಲ್ಕಿಕೆ ಯಾಗಿದೆ. ಅದು ಹ್ಯಾಗಂದರೆ ಒಮ್ಮೆ ಮೋಕ್ಷದಲ್ಲಿ ಸಹ ನಾವು ಸರ್ವೇಶ್ವರನನ್ನು ಮುಖಾ ಮುಖಿಯಾಗಿ ಕಾಣುವೆವು ಹೊರತು ಅಪ್ಪ ಮತ್ತು ದ್ರಾಕ್ಷೆಯ ರಸದ ಗುಣಗಳಲ್ಲಿಯಲ್ಲ.

## 31 ಸಂಸೋನನ ಬಲವು

ಇಸ್ರಾಯೇಲಸ್ತರನ್ನು ಆಳಿದ ನ್ಯಾಯಾಧಿಪತಿಗಳಲ್ಲಿ

ಸಂಸೋನನೆಂಬವನು ಬಹಳ ಬಲಶಾಲಿಯಾಗಿದ್ದನು. ಇಸ್ರಾಯೇಲರನ್ನು ಫಿಲಿಸ್ತಿಯರೆಂಬವರಿಂದ ಕಾಪಾಡಲು ಕರ್ತನು ಈತನನ್ನು ಕಳಿಸಿದರು

ಈತನು ಇನ್ನು ಬಾಲಕನಾಗಿರುವಾಗ ಒಂದು ಸಿಂಹವನ್ನು ಯಾವ ಆಯುಧವಿಲ್ಲದೆ ಕೊಂದುಹಾಕಿ ಅದನ್ನು ತುಂಡುತುಂಡಾಗಿ ಮಾಡಿದನು. ಫಿಲಿಸ್ತಿಯರ ಸಂಗಡ ಯುದ್ಧವನ್ನು ಮಾಡುವಾಗ ಕತ್ತೆಯ ದವಡೆಯ ಎಲುಬಿನಿಂದ ಒಂದು ಸಾವಿರ ಫಿಲಿಸ್ತಿಯರನ್ನು ಕೊಂದುಹಾಕಿದನು.

ಇನ್ನೊಂದು ಸಾರೆ ಸಂಸೋನನು ಗಾಜ ಪಟ್ಟಣವನ್ನು ಪ್ರವೇಶಿಸಿದ್ದನ್ನು ಫಿಲಿಸ್ತಿಯರು ಕೇಳಿ, ಆತನನ್ನು ಹಿಡಿಯಲು ಆ ಪಟ್ಟಣದ ಬಾಗಿಲುಗಳನ್ನು ಮುಚ್ಚಿದರು. ಮಧ್ಯ ರಾತ್ರಿಯಲ್ಲಿ ಸಂಸೋನನು ಎದ್ದು ಆ ಪಟ್ಟಣದ ಬಾಗಿಲುಗಳನ್ನು ಅಗಳಿ ಸಹಿತವಾಗಿ ಕಿತ್ತು, ತನ್ನ ಹೆಗಲ ಮೇಲೆ ಹೊತ್ತುಕೊಂಡು ಹೋಗಿ ಸಮೀಪದಲ್ಲಿದ್ದ ಬೆಟ್ಟದ ಮೇಲೆ ಇಟ್ಟನು.

ಸಂಸೋನನು ದಲೀಲಯೆಂಬ ಫಿಲಿಸ್ತಿಯರ ಹೆಣ್ಣನ್ನು ಮದುವೆಯಾದನು. ಆದರೆ ಆಕೆ ಆತನನ್ನು ಮೋಸಗೊಳಿಸಿದಳು. ಹ್ಯಾಗಂದರೆ ಫಿಲಿಸ್ತಿಯರು ದಲೀಲೆಗೆ ಬಹಳ ಹಣವನ್ನು ಕೊಟ್ಟು ಅಕೆಯ ಗಂಡನ ಬಲವು ಯಾವದರಲ್ಲಿದೆಯೆಂದೂ ಮತ್ತು ಆತನನ್ನು ಹ್ಯಾಗೆ ಹಿಡಿಯಬಹುದೆಂದು ಕೇಳಿದರು.

ದಲೀಲೆಯು ಈ ರಹಸ್ಯವನ್ನು ತನ್ನ ಗಂಡನ ಬಳಿಯಲ್ಲಿ ಕೇಳಿದಳು. ಆದರೆ ಆತನು ಹೇಳಲಿಲ್ಲ. ಕೊನೆಗೆ ಆಕೆ ತನ್ನ

ಗಂಡನನ್ನು ಬಹಳವಾಗಿ ಪೀಡಿಸಿದ್ದರಿಂದ ಸಂಸೋನನು ಹೇಳ ಲಾರಂಭಿಸಿದನು. ಏನಂದರೆ "ನಾನು ಹುಟ್ಟಿದಂದಿನಿಂದಲೂ ನನ್ನನ್ನು ಸರ್ವೇಶ್ವರನಿಗೆ ಒಪ್ಪಿಸಿ ಕೊಟ್ಟಿತ್ತಾರೆ. ಆ ದಿವಸ ದಿಂದ ಇಲ್ಲಿಯವರೆಗೂ ನನ್ನ ತಲೆಯ ಕೂದಲನ್ನು ಬೋಳಿ ಸಿಲ್ಲ. ನನ್ನ ತಲೆಯನ್ನು ಬೋಳಿಸಿದರೆ, ಆ ಕ್ಷಣವೇ ನನ್ನ ಬಲವು ಕುಂಗಿ ಹೋಗುವದು. ಆಗ ನಾನು ಸಹ ಇತರ ಸಾಧಾ ರಣ ಮನುಷ್ಯನ ಹಾಗೆಯೇ ಆಗುವೆನ್ನು" ಎಂದನು.

ಇದನ್ನು ಅರಿತ ದಲೀಲಳು, ಸಂಸೋನನು ನಿದ್ರಿಸುತ್ತಿ ರುವ ಸಮಯದಲ್ಲಿ ಆತನ ತಲೆ ಕೂದಲನ್ನು ಬೋಳಿಸಿಸಿದಳು. ಆಗ ಆತನ ಶಕ್ತಿಯೆಲ್ಲವೂ ಕುಂಗಿ ಹೋಯಿತು. ಆ ಮೇಲೆ ಫಿಲಿಸ್ಥಿಯರು ಬಲಹೀನನಾದ ಸಂಸೋನನನ್ನು ಸುಲಭವಾಗಿ ಹಿಡಿದು, ಆತನ ಕಣ್ಣುಗಳನ್ನು ಕಿತ್ತು ಒಂದು ಶೆರೆಮನೆಯಲ್ಲಿ ಟ್ಟರು. ಆದರೆ ಅಲ್ಲಿ ಮತ್ತೆ ಸಂಸೋನನು ಕೂದಲು ಬೆಳೆಯ ಲಾರಂಭಿಸಿತು.

ದಲೀಲ ಎಂಬವಳು ಸಂಸೋನನ ನಾಶನಕ್ಕೆ ಕಾರಣ ಳಾಗಿರುತ್ತಾಳೆ. ಆಕೆಯು ಆತನಿಗೆ ಒಬ್ಬ ದುಷ್ಟ ಜತೆಗಾರ ಳಾಗಿದ್ದಳು. ನಾವು ಇಂಥಾ ಕೇಡನ್ನು ಪಡೆಯದ ಹಾಗೆ ದುಷ್ಟ ಜತೆಗಾರರಿಂದ ದೂರವಾಗಿರಬೇಕು.

ಒಂದು ದಿವಸ ಫಿಲಿಸ್ಥಿಯರು ತಮ್ಮ ಮಂಟಪದಲ್ಲಿ ಔತಣವನ್ನು ಮಾಡುತ್ತಿದ್ದರು ಆ ಸಮಯದಲ್ಲಿ ಸಂಸೋನ ನನ್ನು ವಿನೋದಕ್ಕಾಗಿ ಕರೆಯಿಸಿ ಆತನನ್ನು ಪರಿಹಾಸ್ಯಮಾಡ ತೊಡಗಿದರು. ಆಗ ಅಲ್ಲಿ ಸುಮಾರು ಮೂರುಸಾವಿರ ಜನ ರಿದ್ದರು.

ಸಂಸೋನನು ತನ್ನನ್ನು ಕರೆತಂದ ಬಾಲಕನನ್ನು ನೋಡಿ ಹೇಳಿದ್ದೇನಂದರೆ, ಈ ಮನೆಗೆ ಆಧಾರವಾಗಿರುವ ಕಂಭಗಳ ಹತ್ತಿರ ನನ್ನನ್ನು ಕರೆದುಕೊಂಡು ಹೋಗು. ನಾನು ಅವುಗಳಿಗೆ ಆತುಕೊಂಡು ಕೂಡ್ರುವೆನು. ಎಂದನು. ತರುವಾಯ ದೇವರನ್ನು ಕುರಿತು ತನ್ನ ಮನಸ್ಸಿನಲ್ಲಿ ಅಂದದ್ದೇನಂದರೆ, "ಓ ದೇವರೇ"! ನನಗೆ ಮುಂಚೆ ಕೊಟ್ಟಿದ್ದ ಬಲವನ್ನು ತಿರುಗಿ ಕರುಣಿಸಿರಿ." ಎಂದು ಬೇಡಿಕೊಂಡು ಆ ಎರಡೂ ಕಂಭಗಳನ್ನು ಹಿಡಿದು ಗಟ್ಟಿಯಾಗಿ ಕದಲಿಸಲು ಆ ಮನೆಯು ಕುಸಿದುಬಿತ್ತು. ಅಲ್ಲಿದ್ದ ಮೂರು ಸಾವಿರ ಜನರು ಮಡಿದರು. ಸಂಸೋನನು ಸಹ ಸತ್ತುಹೋದನು.

## 32 ನ್ಯಾಯಾಧಿಪತಿಯಾದ ಸಾಮುವೇಲನು

ಇಸ್ರಾಯೇಲಸ್ತರಲ್ಲಿ ಎಲ್ಕಾನ ಮತ್ತು ಅನ್ನಮ್ಮ ಎಂಬ ಇಬ್ಬರು ಗಂಡ ಹೆಂಡತಿಯರಿದ್ದರು. ಅನ್ನಮ್ಮನು ವೃದ್ಧಳಾಗುತ್ತಿದ್ದರೂ ಮಕ್ಕಳಾಗಲಿಲ್ಲ. ಆದ್ದರಿಂದ ಆಕೆ ದೇವಾಲಯಕ್ಕೆ ಹೋಗಿ ಕರ್ತರನ್ನು ನೋಡಿ ತನಗೆ ಪುತ್ರಸಂತಾನವನ್ನು ಪಾಲಿಸಬೇಕೆಂದು ಬೇಡಿಕೊಂಡಳು.

ದೇವರು ಅನ್ನಮ್ಮನ ಪ್ರಾರ್ಥನೆಯನ್ನು ಕೇಳಿ, ಆಕೆಗೆ ಒಬ್ಬ ಮಗನನ್ನು ದಯಪಾಲಿಸಿದರು. ಆತನ ಹೆಸರು ಸಾಮುವೇಲ, ಈ ಹುಡುಗನು ಬಹಳ ಜ್ಞಾನವುಳ್ಳವನಾಗಿದ್ದನು.

ಆ ಕಾಲದಲ್ಲಿ ಏಲಿಯೆಂಬಾತನು ಗುರುವಿನ ಕೆಲಸವನ್ನು ಮಾಡುತ್ತಿದ್ದನು. ಆಗ ಅನ್ನಮ್ಮನು ತನ್ನ ಮಗನಾದ ಸಾಮುವೇಲನನ್ನು ಕರೆತಂದು ದೇವರ ಕೈಂಕರಕ್ಕಾಗಿ ಒಪ್ಪಿಸಿದಳು. ಮತ್ತು ಹೇಳಿದ್ದೇನಂದರೆ, "ದೇವರು ನನಗೆ ಈ ಮಗನನ್ನು

ಕೊಟ್ಟರು, ನಾನು ತಿರುಗಿ ಅವರಿಗೇ ಈತನನ್ನು ಒಪ್ಪಿಸುತ್ತೇನೆ. ಇವನು ಜೀವಿಸುವ ತನಕ ದೇವರಿಗೆ ಸ್ವಂತನಾಗಿರುತ್ತಾನೆ" ಎಂದಳು. ಸಾಮುವೇಲನು ಕೆಲವು ವರ್ಷಗಳ ವರೆಗೆ ಕರ್ತರ ಆಲಯದಲ್ಲಿಯೇ ಸೇವಕಾವೃತ್ತಿಯನ್ನು ಮಾಡುತ್ತಾ ಬಂದನು. ಒಂದುದಿನ ರಾತ್ರಿ ನಿದ್ರೆಯಲ್ಲಿ ತನ್ನನ್ನು ಯಾರೋ ಕರೆಯುವದನ್ನು ಕೇಳಿದನು. ಏಲಿಯ ಹತ್ತಿರ ಓಡಿ ಹೋಗಿ ಯಾಕೆ ಕರೆದಿರಿ"? ಎಂದು ಕೇಳಿದನು.

ಆದರೆ ಏಲಿಯು "ನಾನು ನಿನ್ನನ್ನು ಕರೆಯಲಿಲ್ಲ ಹೋಗಿ ಮಲಗಿಕೋ" ಅಂದನು.

ಸಾಮುವೇಲನು ತಿರುಗಿ ಹೋಗಿ ಮಲಗಿದನು. ಸ್ವಲ್ಪ ಸಮಯವಾದನಂತರ ತಿರುಗಿ ತನ್ನ ಹೆಸರನ್ನು ಗೊಂಡು ಕರೆದ ಶಬ್ದವು ಕೇಳಲ್ಪಟ್ಟಿತು. ಆಗ ಸಾಮುವೇಲನು ಮತ್ತೆ ಏಲಿಯ ಬಳಿಗೆ ಹೋಗಿ, "ಯಾಕೆ ನನ್ನನ್ನು ಕರೆದಿರಿ, ನಾನು ಇಲ್ಲಿ ಇರುತ್ತೇನೆ" ಎಂದನು.

ಹೀಗೆ ಮೂರು ಸಾರೆ ಸಂಭವಿಸಿದ್ದರಿಂದ, ಸರ್ವೇಶ್ವರನೇ ಸಾಮುವೇಲನನ್ನು ಕರೆದರೆಂದು ಏಲಿಯು ಗ್ರಹಿಸಿ, ಅಂದದ್ದೇನಂದರೆ "ಮಗನೇ ಹೋಗಿ ಮಲಗಿಕೋ; ಮತ್ತು ಇನ್ನೊಂದು ಸರ್ತಿ ನಿನ್ನನ್ನು ಕರೆದರೆ, "ಆಳಿದವರೇ ಮಾತನಾಡಿ, ಯಾಕಂದರೆ ನಿಮ್ಮ ದಾಸನು ಕೇಳುತ್ತಾನೆ"ಂದು ಹೇಳು. ಅಂದನು.

ಸಾಮುವೇಲನು ಮತ್ತೆ ಮಲಗಿಕ್ಕೆ ಹೋದನು. ತಿರುಗಿ ಆ ಶಬ್ದವು ಕೇಳಲ್ಪಡಲು, ಸಾಮುವೇಲನು "ಆಳಿದವರೇ ಮಾತನಾಡಿ ಯಾಕಂದರೆ ನಿಮ್ಮ ದಾಸನು ಕೇಳುತ್ತಾನೆ"

ಎಂದನು. ಆಗ ಕರ್ತರು ಆತನಿಗೆ ಹೇಳಿದ್ದೇನಂದರೆ, ತಾವು ಏಲಿಯನ್ನು ಆತನ ಮಕ್ಕಳನ್ನು ಶಿಕ್ಷಿಸಲು ಇರುತ್ತಾರೆಂದರು. ಯಾಕಂದರೆ ಏಲಿಯು ಮಕ್ಕಳು ದುಷ್ಟರಾಗಿರುತ್ತಾರೆ. ಆದರೆ ಏಲಿಯು ಅವರನ್ನು ತಿದ್ದುವದಿಲ್ಲ. ಆದಕಾರಣ ಅವರನ್ನು ನಾಶನ ಮಾಡುವೆವು ಎಂದು ನುಡಿದರು.

ಕೆಲವು ದಿವಸಗಳಾದ ನಂತರ ಫಿಲಿಸ್ಥಿಯರು ಇಸ್ರಾಯೇಲಷ್ಠರೊಂದಿಗೆ ಯುದ್ಧಮಾಡಿದರು. ಈ ಯುದ್ಧದಲ್ಲಿ ಏಲಿಯ ಕುಮಾರರು ಮಡಿದರು. ಮತ್ತು ವಾಗ್ದತ್ತದ ಪೆಟ್ಟಿಗೆಯು ಫಿಲಿಸ್ಥಿಯರ ಕೈವಶವಾಯ್ತು. ಈ ಸಂಗತಿಯನ್ನು ಕೇಳಿದ ಕೂಡಲೇ ಏಲಿಯು ತನ್ನ ಆಸನದಿಂದ ಕೆಳಗೆ ಬಿದ್ದು ತಲೆ ಬುರುಡೆ ಒಡೆದು ಸತ್ತುಹೋದನು.

ಸಾಮುವೇಲನು ಪ್ರಾಯಕ್ಕೆ ಬಂದಾಗ ಒಬ್ಬ ಒಳ್ಳೇ ಜ್ಞಾನಿಯಾದ ನ್ಯಾಯಾಧಿಪತಿಯಾಗಿದ್ದನು. ಇವನ ತರುವಾಯ ಈತನ ಮಕ್ಕಳು ನ್ಯಾಯಾಧಿಪತಿಯಾಗಿದ್ದರು. ಆದರೆ ಇವರು ದುಷ್ಟರಾಗಿದ್ದರಿಂದ ಇಸ್ರಾಯೇಲರು ತಮಗೆ ಒಬ್ಬ ಒಳ್ಳೇ ರಾಜನನ್ನು ನೇಮಿಸುವಂತೆ ಸಾಮುವೇಲನನು ಕೇಳಿಕೊಂಡರು.

## ೩೬ ಇಸ್ರಾಯೇಲರ ಮೊದಲನೇ ರಾಜನಾದ ಸೌಲನು

ಇಸ್ರಾಯೇಲಷ್ಠರು ತಮ್ಮನ್ನು ಆಳಲು ಒಬ್ಬ ರಾಯನು ಬೇಕೆಂದು ಸಾಮುವೇಲನನ್ನು ಬಹಳ ಪೀಡಿಸ ತೊಡಗಿದರು. ಆಗ ಆ ಜನರ ಸಲುವಾಗಿ ಸಾಮುವೇಲನು ಕರ್ತರನ್ನು ಪ್ರಾರ್ಥಿಸಿದನು. ಆಗ ಸರ್ವೇಶ್ವರನು ಅವನಿಗೆ ಅರುಹಿಸಿದ್ದೇ

ನಂಪರೆ, "ಸೌಲನೆಂಬ ಒಬ್ಬ ಮನುಷ್ಯನು ಈ ಪಟ್ಟಣದೊಳಗೆ ಬರುವನು ಅವನಿಗೆ ನೀನು ತೈಲದಿಂದ ಅಭಿಷೇಕವನ್ನು ಮಾಡಿ ರಾಜನನ್ನಾಗಿ ಮಾಡು. ಈ ಗುರ್ತೇ ಅವನನ್ನು ದೇವರೇ ಆರಿಸಿದ್ದಾರೆಂಬದಕ್ಕೆ ಗುರ್ತಾಗಿದೆ ಎಂದರು.

ಹಾಗೆಯೇ ಸೌಲನು ಆ ಪಟ್ಟಣಕ್ಕೆ ಬರಲು, ಸಾಮುವೇಲನು ಆತನ ತಲೆಯ ಮೇಲೆ ತೈಲವನ್ನು ಸುರಿಸಿ ಇಸ್ರಾಯೇಲರ ಅರಸನೆಂದು ಪಟ್ಟಾಭಿಷೇಕವನ್ನು ಕಟ್ಟಿ ಹೇಳಿದ್ದೇನಂದರೆ "ಕರ್ತರೇ ನಿನ್ನನ್ನು ಅವರ ಜನಗಳಿಗಾಗಿ ರಾಜನನ್ನು ಮಾಡಿರುವರು. ಆದ ಕಾರಣ ನೀನು ಅವರನ್ನು ಅವರ ಶತೃಗಳಿಂದ ಕಾಪಾಡಿ ಚೆನ್ನಾಗಿ ಆಳು ಎಂದನು.

ಇಸ್ರಾಯೇಲಸ್ತರು ಸಾಮುವೇಲನನ್ನು ಕಂಡು ಬಹಳ ಸಂತೋಷಪಟ್ಟರು ಸೌಲನು ಬಹಳರೂಪಲಾವಣ್ಯವುಳ್ಳವನೂ, ಬಲಶಾಲಿಯೂ ಮತ್ತು ಇಸ್ರಾಯೇಲರ ಎಲ್ಲ ಜನಗಳಿಗಿಂತ ಬಹಳ ಎತ್ತರವಾಗಿದ್ದನು.

ಮೊಟ್ಟಮೊದಲು ಸೌಲನ ಆಳಿಕೆಯು ಬಹಳ ಒಳ್ಳೇದಾಗಿತ್ತು. ಸರ್ವೇಶ್ವರನು ಯಾವಾಗಲೂ ಇಸ್ರಾಯೇಲರಿಗೆ ಸಹಾಯ ಮಾಡುತ್ತಾ, ಅವರ ಶತೃಗಳನ್ನು ಸೋಲಿಸುತ್ತಿದ್ದರು.

ಆದರೆ ಸೌಲನು ಅನೇಕ ಯುದ್ಧಗಳಲ್ಲಿ ಗೆದ್ದದ್ದರಿಂದ ಬಹಳ ಗರ್ವಿಷ್ಟನಾಗಿ, ಕರ್ತನಿಗೆ ವಿರೋಧವಾಗಿ ಪಾಪವನ್ನು ಕಟ್ಟಿಕೊಂಡನು ಕಡೆಗೆ ಸರ್ವೇಶ್ವರನು, ಇನ್ನು ಮುಂದೆ ಸೌಲನು ರಾಜನಾಗಿ ಆಳಬಾರದೆಂದು ತಿಳಿಸಲು ಸಾಮುವೇಲನಿಗೆ ಹೇಳಿದರು. ಮತ್ತು ದಾವೀದೆಂಬ ಹೆಸರುಳ್ಳ ಒಬ್ಬಗೊಲ್ಲ

ಬಾಲಕನಿಗೆ ತೈಲದಿಂದ ಅಭಿಷೇಕವನ್ನು ಮಾಡುವಂತೆ ತಿಳಿಸಿದರು.

ಗರ್ವಿಷ್ಟರು ಯಾವಾಗಲೂ ಸರ್ವೇಶ್ವರನಿಂದ ದಂಡಿಸಲ್ಪಡುತ್ತಾರೆ. ಈ ಗರ್ವವೆಂಬುದು ಸೈತಾನನು ಕಟ್ಟಿಕೊಂಡ ಪಾಪವು. ಆದ್ದರಿಂದ ನಾವು ಯಾವಾಗಲೂ ದೈನವುಳ್ಳವರಾಗಿದ್ದು ಕರ್ತನ ಸಹಾಯವಿಲ್ಲದೆ ನಾವು ಯಾವ ಕಾರ್ಯವನ್ನು ಮಾಡಲಾರೆವೆಂದು ನೆನಪಿನಲ್ಲಿಟ್ಟುಕೊಳ್ಳಬೇಕು.

ಸೌಲನು ಇನ್ನು ತಾನು ಅರಸನಾಗಿರಕೂಡದೆಂದು ಕೇಳಿದಕೂಡಲೇ ಬಹಳ ಚಿಂತಾಕ್ರಾಂತನಾದನು. ಮತ್ತು ತನ್ನ ಕಾಲವನ್ನು ವ್ಯಸನದಲ್ಲಿಯೂ ಕೆಟ್ಟ ಆಲೋಚನೆಯಲ್ಲಿಯೂ ಕಳೆಯಲಾರಂಭಿಸಿದನು.

ಒಂದು ದಿನ ಸೌಲನ ಸೇವಕರು ಆತನಿಗೆ ಹೇಳಿದ್ದೇನಂದರೆ, "ಮಹಾರಾಜ ನಿಮ್ಮ ಮುಂದೆ ವೀಣೆಯನ್ನು ಬಾರಿಸಿದರೆ ನಿಮಗೆ ಉಪಶಮನ ಉಂಟಾಗಿ ನಿಮ್ಮ ವ್ಯಸನವೆಲ್ಲವೂ ಹೋಗುವದು. ಎಂದು ಹೇಳಿ ದಾವೀದನನ್ನು ಕರೆಕಳುಹಿಸಿದರು.

ಸಾಮುವೇಲನು ದಾವೀದನನ್ನು ತೈಲದಿಂದ ಅಭಿಷೇಕಿಸಿದ್ದು ಸೌಲನಿಗೆ ಗೊತ್ತಿದ್ದಿಲ್ಲ. ಆದ ಕಾರಣ ಸೌಲನು ದಾವೀದನನ್ನು ತನ್ನ ಸ್ವಂತ ಮಗನಹಾಗೆ ಬಹಳ ಪ್ರೇಮದಿಂದ ನೋಡಿಕೊಳ್ಳುತ್ತಿದ್ದನು. ಆತನಿಗೆ ತನ್ನ ಆಯುಧಗಳನ್ನೇ ಧರಿಸಲು ಕೊಟ್ಟನು. ಹೀಗೆ ದಾವೀದನು ಅರಸನ ಮನೆಯಲ್ಲಿ ಸುಖದಿಂದ ಜೀವಿಸುತ್ತಿದ್ದನು. ರಾಜನು ಚಿಂತಾಕ್ರಾಂತನಾಗಿ

ರುವಾಗೆಲ್ಲ ತನ್ನ ವೀಣೆಯನ್ನು ಬಾರಿಸಿ ಆತನನ್ನು ಉಪಶಮಿಸುತ್ತಿದ್ದನು. ಆದ್ದರಿಂದ ಸೌಲನು ತನ್ನ ದುಃಖವನ್ನು ಮರೆತುಬಿಡಲು ಸ್ವಲ್ಪ ಅವಕಾಶ ದೊರೆಯುತ್ತಿತ್ತು. ಸೌಲನ ಮಗನಾದ ಜೋನತಾನನು, ಮತ್ತು ದಾವಿದನು ಬಹಳ ಪಕ್ಷವುಳ್ಳ ಸ್ನೇಹಿತರಾಗಿದ್ದರು. ದಾವಿದ ಸದ್ಗುಣಕ್ಕೆ ಮೆಚ್ಚಿ ಎಲ್ಲ ಜನರು ಆತನನ್ನು ಪ್ರೀಮಿಸಲಾರಂಭಿಸಲು ಸೌಲನಿಗೆ ಹೊಟ್ಟೆಕಿಚ್ಚು ಬಂದು ದಾವೀದನನ್ನು ಕೊಲ್ಲಲು ಪ್ರಯತ್ನಿಸಿದನು.

## 34 ದಾವೀದನು ಮತ್ತು ಗೋಲಿಯಾತನು

ಇಸ್ರಾಯೇಲಸ್ತರ ಶತೃಗಳಲ್ಲಿ ಫಿಲಿಸ್ಥಿಯರು ಅಧಿಕ ಬಲಶಾಲಿಗಳಾಗಿದ್ದರು. ಇವರು ಒಂದು ಪರ್ವದಮೇಲೆ ತಮ್ಮ ಸೈನ್ಯಗಳನ್ನು ನಿಲ್ಲಿಸಲು ಇಸ್ರಾಯೇಲಸ್ತರು ಅದಕ್ಕೆ ಎದುರಾಗಿ ಇನ್ನೊಂದರ ಮೇಲೆ ನಿಂತರು. ಹೀಗೆ ಇವರು ಯುದ್ಧವನ್ನು ಮಾಡಲು ಸಿದ್ಧರಾದರು.

ಫಿಲಿಸ್ಥಿಯರ ಸೈನ್ಯದಲ್ಲಿ ಗೊಲಿಯಾತನೆಂಬ ಒಬ್ಬ ರಾಕ್ಷಸನಿದ್ದನು. ಇವನು ಯಾವಾಗಲೂ ಇಸ್ರಾಯೇಲಸ್ಥರಮುಂದೆ ಬಂದು, "ನನ್ನ ಸಂಗಡ ಯುದ್ಧ ಮಾಡಲು ನಿಮ್ಮಲ್ಲಿಂದ ಯಾವನಾದರೂ ಒಬ್ಬ ಬರಲಿ. ಅವನು ನನ್ನನ್ನು ಕೊಂದರೆ ನಾವು ನಿಮಗೆ ಅಡಿಮೆಗಳಾಗುವೆವು. ಇಲ್ಲವೇ ನಾನು ಅವನನ್ನು ಕೊಂದರೆ ನೀವು ನಮ್ಮ ಅಡಿಮೆಗಳಾಗಬೇಕೆಂದು ಕೂಗುತ್ತಿದ್ದನು"

ಇವನು ಬಹಳ ಭಯಂಕರವಾಗಿಯೂ ಮತ್ತು ಬಲವುಳ್ಳವನಾಗಿಯೂ ಇದ್ದದರಿಂದ ಇವನೊಂದಿಗೆ ಯುದ್ಧಮಾಡಲು

ಸೌಲನು ಮತ್ತು ಇಸ್ರಾಯೇಲರು ಬಹಳ ಭಯಪಟ್ಟರು.

ಹೀಗೆ ಬಹಳ ದಿವಸಗಳು ಕಳೆದವು. ಆದರೂ ಇಸ್ರಾಯೇಲ್ಯರಲ್ಲಿ ಒಬ್ಬನಾದರೂ ಆತನ ಕೂಡ ಯುದ್ಧ ಮಾಡಲಿಕ್ಕೆ ಹೋಗಲು ಧೈರ್ಯಗೊಳ್ಳಲಿಲ್ಲ. ಒಂದು ದಿನ ದಾವೀದನು ಇಸ್ರಾಯೇಲರು ತಂಗಿದ್ದ ಸ್ಥಳಕ್ಕೆ ಬಂದನು. ಆಗ ಗೋಲಿಯಾತನ ಕೂಗನ್ನು ಕೇಳಿ, "ಸರ್ವೇಶ್ವರನ ಜನಾಂಗವನ್ನು ದೂಷಿಸಲು ಈತನು ಯಾರು? ನಾನು ಹೋಗಿ ಆತನನ್ನು ಕೊಂದು ಬರುತ್ತೇನೆ" ಎಂದನು.

ಆದಕ್ಕೆ ಸೌಲನು, "ನೀನು ಗೋಲಿಯಾತನ ಸಂಗಡ ಯುದ್ಧ ಮಾಡಲಾರೆ ಅವನು ಅನೇಕ ಯುದ್ಧಗಳನ್ನು ಮಾಡಿ ಗೆದ್ದಿರುವನು. ನೀನು ಇನ್ನೂ ಬಾಲಕನು" ಎಂದನು.

ಇದನ್ನು ಕೇಳಿ ದಾವೀದನು "ನಾನು ನನ್ನ ತಂದೆಯ ಮಂದೆಗಳನ್ನು ಮೇಯಿಸುತ್ತಿದ್ದಾಗ ಒಂದು ಕುರಿಯ ಮರಿಯನ್ನು ಹಿಡಿದುಕೊಂಡು ಹೋಗುತ್ತಿದ್ದ ಒಂದು ಕರಡಿಯನ್ನೂ ಒಂದು ಹುಲಿಯನ್ನು ಕೊಂದಿದ್ದೇನೆ. ಅಂಥಾ ಕ್ರೂರ ಮೃಗಗಳಿಂದ ಕಾಪಾಡಿದ ದೇವರು ಈ ಗರ್ವಿಷ್ಟನಾದ ಫಿಲಿಸ್ತಿಯನಿಂದಲೂ ರಕ್ಷಿಸುವನೆಂದು ಹೇಳಿದನು.

ದಾವೀದನು ತನ್ನ ಕೋಲನ್ನು ಕೈಯಲ್ಲಿ ತೆಗೆದುಕೊಂಡು ಹಳ್ಳದ ದಂಡೆಗೆ ಹೋಗಿ ನುಣ್ಣಾದ ಐದು ಕಲ್ಲುಗಳನ್ನು ಆರಿಸಿ, ಅವುಗಳನ್ನು ತನ್ನ ಚೀಲದಲ್ಲಿ ಹಾಕಿಕೊಂಡು, ಕವಣೆಯನ್ನು ಕೈಯಲ್ಲಿ ಹಿಡಿದು ಗೋಲಿಯಾತನ ಎದುರಿಗೆ ಹೋದನು.

ಈ ಚಿಕ್ಕ ಬಾಲಕನು ತನಗೆದುರಾಗಿ ಬರುವವನನ್ನು ಕಂಡು

ರಾಕ್ಷಸನು ಬಹಳ ಸಿಟ್ಟಿಗೆದ್ದನು. ಮತ್ತು ಕಟ್ಟಿಗೆಯನ್ನು ತರಲು ನಾನು ನಾಯಿಯೋ? ಎಂದು ಕೂಗಿದನು.

ದಾವೀದನು ಪ್ರತ್ಯುತ್ತರವಾಗಿ "ನೀನು ಆಯುಧಗಳನ್ನು ಧರಿಸಿಕೊಂಡು ಬಂದಿರುತ್ತೀ. ಆದರೆ ನಾನು ದೇವರ ವಲ್ಲಭ ವನ್ನು ನಂಬಿ ಬಂದಿದ್ದೇನೆ. ಅವರು ನನಗೆ ಜಯವನ್ನು ಕೊಡು ವರು ಎನ್ನುತ್ತ ಚೀಲದಿಂದ ಒಂದು ಕಲ್ಲನ್ನು ತೆಗೆದು ಕವಣೆ ಯಲ್ಲಿಟ್ಟು ಬೀಸಲು ಅದು ಗೋಲಿಯಾತನ ಹಣೆಗೆ ತಗುಲಿತು. ಕೂಡಲೇ ಗೋಲಿಯಾತನು ಕೆಳಗೆ ಮೊಕ್ಕಡೆಯಾಗಿ ಬಿದ್ದನು. ದಾವೀದನು ಅವನ ಕತ್ತಿಯನ್ನೇ ತೆಗೆದು ಅವನ ರುಂಡವನ್ನು ಕತ್ತರಿಸಿದನು.

ದೇವರ ಮೇಲೆ ನಂಬಿಕೆಯನ್ನಿಟ್ಟು ಕೆಲಸ ಮಾಡುವಂಥ ವನು ಅಗಾಧವಾದ ಕಾರ್ಯಗಳನ್ನು ಸಹ ಮಾಡಿ, ತನ್ನ ಆತ್ಮದ ಶತ್ರುವನ್ನು ಸಹ ಜಯಿಸಬಲ್ಲನು.

## ೩೫ ದಾವೀದ ರಾಜನು

ದಾವೀದನಿಗೆ ೩೦ ವರ್ಷ ಪ್ರಾಯ ನಡೆಯುವಾಗ ಈತನು ರಾಜನಾದನು. ಈತನು ಬಹಳ ಒಳ್ಳೇ ರಾಜನಾಗಿ ದ್ದನು. ತನ್ನ ಜನರನ್ನು ಒಳ್ಳೇದಾಗಿ ಆಳುತ್ತಿದ್ದು ಅವರನ್ನು ಶತ್ರುಗಳಿಂದ ಕಾಪಾಡುತ್ತಿದ್ದನು. ಈತನ ಕಾಲದಲ್ಲಿ ಇಸ್ರಾ ಯೇಲಸ್ತರು ಬಹಳ ಘನತೆಗೆ ಏರಿದ್ದರು.

ದಾವೀದನು ತನ್ನ ಸೈನಿಕರನ್ನು ತೆಗೆದುಕೊಂಡು ಜೆರೂ ಲೇಮೆಂಬ ಪಟ್ಟಣಕ್ಕೆ ಮುತ್ತಿಗೆಯನ್ನು ಹಾಕಿ ಅದನ್ನು ಜಯಿ ದನು. ಅದನ್ನು ಮುಖ್ಯ ಪಟ್ಟಣವಾಗಿ ಮಾಡಿ ಅದರ ಸುತ್ತಲೂ

ಗೋಪುರಗಳನ್ನು ಕಟ್ಟಿಸಿದನು. ಮತ್ತು ಅದನ್ನು ದಾವೀದನ ಪಟ್ಟಣವೆಂದು ಕರೆಯುತ್ತಿದ್ದನು.

ಈತನು ರಾಜ್ಯವಾಳುತ್ತಿದ್ದ ಕಾಲದಲ್ಲಿ ಪ್ರಜೆಗಳೆಲ್ಲರೂ ದೇವರನ್ನು ತಕ್ಕ ವಿಧವಾಗಿ ಆರಾಧಿಸುವಂತೆ ಮಾಡುತ್ತಿದ್ದನು. ಫಿಲಿಸ್ತಿಯರ ಕೈವಶವಾಗಿದ್ದ ವಾಗ್ದತ್ತದ ಪೆಟ್ಟಿಗೆಯನ್ನು ತಿರುಗಿ ಜೆರೂಸಲೇಮಿಗೆ ತರಿಸಿದನು. ಮತ್ತು ಅದನ್ನು ಇಡಲು ಸಿಯೋನ್ ಪರ್ವತದಮೇಲೆ ಒಂದು ಮಂಟಪವನ್ನು ಕಟ್ಟಿಸಿದನು.

ಈ ವಾಗ್ದತ್ತದ ಪೆಟ್ಟಿಗೆಯನ್ನು ದೊಡ್ಡ ಪ್ರದಕ್ಷಣೆಯೊಂದಿಗೆ ಬಹಳ ಆಡಂಭರವಾಗಿ ಹೊಸದಾಗಿ ಕಟ್ಟಿಸಿದ ಮಂಟಪಕ್ಕೆ ಒಯ್ದರು. ದೊಡ್ಡವರಿಗೆ ಮರ್ಯಾದೆಯನ್ನು ತೋರಿಸುವಹಾಗೆ ೩೦ ಸಾವಿರ ಜನರು ಆಯುಧಗಳನ್ನು ಧರಿಸಿಕೊಂಡು ಮುಂದೆ ಹೋಗುತ್ತಿದ್ದರು. ಲೇವ್ಯರಾದ ಜನರು ವಾಗ್ದತ್ತದ ಪೆಟ್ಟಿಗೆಯ ಸಂಗಡ ಹೋದರು. ಅವರ ಹತ್ತಿರ ಇದ್ದವರು ಪೀಪೇಗಳನ್ನು ಬಾರಿಸುತ್ತ ಕೊಳಲನ್ನು ತುತೂರಿಯನ್ನು ಊದುತ್ತಿದ್ದರು. ದಾವೀದ ರಾಜನು ತಾನೇ ಸ್ವತಃ ವೀಣೆಯನ್ನು ಬಾರಿಸುತ್ತ ವಾಗ್ದತ್ತದ ಪೆಟ್ಟಿಗೆಯ ಮುಂದೆ ಕುಣಿಯುತ್ತಿದ್ದನು. ಸ್ವಲ್ಪ ದೂರ ಹೋದಬಳಿಕ [illegible] ಅರ್ಪಿಸುವದಕ್ಕಾಗಿ ಸ್ವಲ್ಪ ನಿಲ್ಲುತ್ತಿದ್ದರು. ವಾಗ್ದತ್ತದ ಪೆಟ್ಟಿಗೆಯು ದಾವೀದನ ಪಟ್ಟಣಕ್ಕೆ ತಂದದ್ದನ್ನು ನೋಡಿ ಜನರು ಬಹಳ ಸಂತೋಷಪಟ್ಟರು.

ಈ ವಾಗ್ದತ್ತದ ಪೆಟ್ಟಿಗೆಯು ಹೊಸ ಮಂಟಪದಲ್ಲಿ ಸುರಕ್ಷಿತವಾಗಿ ಕಾಪಾಡಲ್ಪಟ್ಟಿತು. ದಾವೀದನು ಗುರುಗಳನ್ನು ೨೪ ಗುಂಪುಗಳಾಗಿ ವಿಭಾಗಿಸಿದನು. ಒಂದೊಂದು ಗುಂಪಿನವರು

ಸರ್ತಿಯು ಮೇಲೆ ದೇವರಿಗೆ ಸೇವೆ ಮಾಡಬೇಕಾಗಿತ್ತು. ಪ್ರತಿ ದಿವಸ ದೇವರನ್ನು ಸ್ತುತಿಸಲು ಮತ್ತು ಅವರಿಗೆ ಸಂಗೀತವನ್ನು ಹಾಡಲು ದಾವಿದನು ೪ ಸಾವಿರ ಜನರನ್ನು ಆರಿಸಿಕೊಂಡನು.

ಈ ವಾಗ್ದತ್ತದ ಪೆಟ್ಟಿಗೆಯೇ ಇಷ್ಟು ಗೌರವದಿಂದ ಆರಾಧಿಸಲ್ಪಡುತ್ತಿರುವಾಗ ನಿಜವಾಗಿ ದೇವರೇ ಪೀಠದ ಮೇಲೆ ಇರುವಂಥಾ ಗುಡಿಗಳನ್ನು ನಾವು ಎಷ್ಟು ಮರ್ಯಾದೆಯಿಂದ ಗೌರವಿಸಬೇಕಲ್ಲವೇ.

ದಾವೀದನು ಒಬ್ಬ ಶ್ರೇಷ್ಠವಾದ ಅರಸನಾಗಿದ್ದದಲ್ಲದೆ ಶೂರನಾದ ಕವೀಶ್ವರನು ಸಹ ಆಗಿದ್ದನು. ಈತನು ದೇವರ ಪ್ರೇರೆ ಪಣೆಯಿಂದ ಸಂಗೀತಗಳನ್ನು ಬರೆದಿರುತ್ತಾನೆ. ಇವುಗಳನ್ನೇ ಈಗ ನಾವು ದೇವರನ್ನು ಸ್ತುತಿಸಲು ಹಾಡುತ್ತೇವೆ. ದಾವೀದ ರಾಜನು ಬರೆದ ಸಂಗೀತಗಳಲ್ಲಿ ಕೆಲವು ದೇವರಿಗೆ ಸ್ತುತಿಯನ್ನು ಮತ್ತು ಮೇಲರಿತ ಸ್ತೋತ್ರವನ್ನು ಹೇಳುವಂಥವುಗಳಾಗಿವೆ. ಉಳಿದವೆಲ್ಲವೂ ಪಾಪಗಳಿಗಾಗಿ ದುಃಖಪಡುವಂಥವುಗಳಾಗಿರುತ್ತವೆ.

ದಾವೀದನು ದೇವರನ್ನು ಬಹಳವಾಗಿ ಪ್ರೇಮಿಸಿದ್ದರಿಂದ ದೇವರು ಸಹ ಆತನನ್ನು ಬಹಳವಾಗಿ ಪ್ರೀತಿಸಿದರು. ಮತ್ತು ಆತನ ವಂಶದಲ್ಲಿ ಕರ್ತರು ಜನ್ಮಿಸುವರೆಂದು ಅರುಹಿಸಿದರು. ದಾವೀದನು ದೇವರಿ ಸಲುವಾಗಿ ಒಂದು ದೊಡ್ಡ ದೇವಾಲಯವನ್ನು ಕಟ್ಟಿ ಮನಸ್ಸಾಗಿದ್ದನು. ಆದರೆ ಕರ್ತರು ಒಬ್ಬ ದೀರ್ಘದರ್ಶಿಯ ಮೂಲಕವಾಗಿ ಆತನಿಗೆ ತಿಳಿಸಿದ್ದೇನಂದರೆ "ನೀನು ಅದನ್ನು ಕಟ್ಟಬೇಡ. ಆದರೆ ನಿನ್ನ ಮಗನು ಅದನ್ನು ಕಟ್ಟಿಸು

ವನು ನಾವು ಅವನ ರಾಜ್ಯವನ್ನು ಸದಾಕಾಲದವರೆಗೆ ಸ್ಥಾಪಿಸುವೆವು" ಎಂದು ತಿಳಿಸಿದರು.

## ೩೮ ಜ್ಞಾನಿಯಾದ ಸಲೋಮೋನನು

ದಾವಿದ ರಾಜನು ೪೦ ವರ್ಷಗಳ ವರೆಗೆ ಇಸ್ರಾಯೇಲ್ಯರನ್ನು ಆಳಿದನು. ಈತನ ತರುವಾಯ ಸಲೊಮೋನನು ರಾಜ್ಯಕ್ಕೆ ಬಂದನು. ಇವನು ಮೊದಲು ತಂದೆಯ ಮಾತೃಕೆಯನ್ನೆ ಅನುಸರಿಸಿ, ಒಳ್ಳೇ ನ್ಯಾಯಾಧಿಪತಿಯಾಗಿದ್ದನು. ಒಂದು ದಿನ ರಾತ್ರಿ ಸರ್ವೇಶ್ವರನು ಅವನಿಗೆ ದರ್ಶನವಾಗಿ, ನಿನಗೆ ಬೇಕಾದದನ್ನು ಕೇಳು. ಅದನ್ನು ಕೊಡುವೆವೆಂದರು.

ಆಗ ಸಲೋಮೋನನು ಪ್ರತ್ಯುತ್ತರವಾಗಿ, "ನೀವು ನನ್ನನ್ನು ರಾಜನನ್ನಾಗಿ ಮಾಡಿದಿರಿ. ನಾನು ಜ್ಞಾನದಲ್ಲಿ ಒಬ್ಬ ಹಸುಳೆಗೆ ಸಮಾನನಾಗಿದ್ದೇನೆ. ಆದರೆ ಇಷ್ಟು ದೊಡ್ಡ ಜನಾಂಗವಾದ ಇಸ್ರಾಯೇಲರನ್ನು ಆಳಬೇಕು. ಆದ್ದರಿಂದ ತಾವು ನನಗೆ ಅವಸರವಾದ ಜ್ಞಾನವನ್ನು ಕೊಟ್ಟರೆ ಒಳ್ಳೇದನ್ನೂ ಕೆಟ್ಟದನ್ನು ಅರಿತು, ನ್ಯಾಯ ಅನ್ಯಾಯವನ್ನು ತಿಳಿಸಲು ಸಹಾಯವಾಗುವದು." ಎಂದನು.

ಅದಕ್ಕೆ ಸರ್ವೇಶ್ವರನು ಸಂತೋಷಪಟ್ಟು ಅಂದದ್ದೇನಂದರೆ "ನೀನು ದೀರ್ಘಾಯುಷ್ಯವನ್ನು, ಆಸ್ತಿ ದ್ರವ್ಯ ಮೊದಲಾದವುಗಳನ್ನು ಕೇಳದೆ ಜ್ಞಾನವನ್ನು ಕೇಳಿದ್ದರಿಂದ ಇವುಗಳೆಲ್ಲವನ್ನೂ ನಿನಗೆ ನಾವು ದಯಪಾಲಿಸುವೆವು" ಅಂದರು.

ಕೂಡಲೇ ಈತನ ಜ್ಞಾನವು ಎಷ್ಟೆಂತ ಬೈಲಾಗುವಹಾಗೆ ಒಂದು ವ್ಯಾಜ್ಯವು ತೀರಿಸಲು ಬಂದಿತು. ಇಬ್ಬರು ಹೆಂಗಸರು

ತಮ್ಮ ನ್ಯಾಯವನ್ನು ತೀರಿಸಬೇಕೆಂದು ಅರಸನ ಬಳಿಯಲ್ಲಿ ಬಂದು ಹೇಳಿಕೊಂಡರು. ಅವರೊಳಗೆ ಒಬ್ಬಳು ಹೇಳಿದ್ದೇನಂದರೆ, ಮಹಾರಾಯನೇ, ನಾನೂ ಈ ಹೆಂಗಸೂ ಒಂದೆ ಕೋಠಡಿಯೊಳಗೆ ಇದ್ದೆವು ನಮ್ಮಿಬ್ಬರಿಗೂ ಒಂದೊಂದು ಮಗೂ ಇತ್ತು. ಈಕೆಯ ಮಗು ಸತ್ತುಹೋಯಿತು. ಆದರೆ ಆಕೆಯು ನಾನು ಮಲಗಿರುವಾಗ ತನ್ನ ಸತ್ತ ಕೂಸನ್ನು ನನ್ನ ಬಳಿಯಲ್ಲಿ ಮಲಗಿಸಿ ನನ್ನ ಕೂಸನ್ನು ತೆಗೆದುಕೊಂಡಿದ್ದಾಳೆ. ನಾನು ಎದ್ದಾಗ ಅದು ನನ್ನ ಮಗು ಅಲ್ಲವೆಂದು ಕಂಡುಹಿಡಿದೆನು." ಎಂದಳು.

ಆಗ ಮತ್ತೊಬ್ಬಳು ಸಹಾ ರಾಯನನ್ನು ನೋಡಿ "ಓ ರಾಜಾ ಈ ಜೀವಿಸುವ ಮಗು ನನ್ನದು, ಆಕೆಯದಲ್ಲ" ಎಂದಳು. ಹೀಗೆ ಇಬ್ಬರೂ ತಿರುಗಿ ನ್ಯಾಯ ಮಾಡತೊಡಗಿದರು. ಆದ್ದರಿಂದ ಆ ಮಗುವಿನ ನಿಜವಾದ ತಾಯಿಯು ಯಾರೆಂದು ನಿರ್ಣಯಿಸಲಾಗಲಿಲ್ಲ.

ಆಗ ಸಲೋಮೋನ ರಾಜನು ಒಬ್ಬ ಸೇವಕನನ್ನು ಕರೆದು ಕತ್ತಿಯನ್ನು ತರಲು ಹೇಳಿ ಜೀವವಾಗಿರುವ ಮಗುವನ್ನು ಕತ್ತಿಯಿಂದ ಎರಡು ಪಾಲು ಸಮವಾಗಿ ಶೀಳು. ತರುವಾಯ ಒಬ್ಬೊಬ್ಬಳಿಗೆ ಒಂದೊದು ಪಾಲು ಕೊಡು ಅಂದನು.

ಇದನ್ನು ಕೇಳೆ ಮೊದಲು ಫಿರ್ಯಾದಿ ಮಾಡಿದವಳು ದುಃಖದಿಂದ "ಮಹಾರಾಯನೇ ಈ ಮಗುವನ್ನು ಆಕೆಗೆ ಜೀವಂತನಾಗಿ ಕೊಟ್ಟುಬಿಡಿರಿ. ಆದರೆ ಕೊಲ್ಲಬೇಡಿರಿ. ಎಂದಳು. ಆದರೆ ಇನ್ನೊಬ್ಬಳು ಕಿಂಚಿತ್ತಾದರೂ ಮನ ಮರುಗದೆ,

ಮಗುವು ಇವಳಿಗೂ ಬೇಡ, ನನಗೂ ಬೇಡ ಅದನ್ನು ಕಡಿದು ಎರಡು ಭಾಗಗಳಾಗಿ ಮಾಡಿರಿ,” ಅಂದಳು.

ಆಗ, ಸಲೋಮೋನನು ಜೀವವಾಗಿರುವವನನ್ನು ಮೊದಲು ಫಿರ್ಯಾದಿ ಮಾಡಿದವಳಿಗೆ ಕೊಟ್ಟುಬಿಡಿರಿ. ಅವಳೇ ನಿಜವಾದ ತಾಯಿ. ಯಾಕಂದರೆ, ಅವಳು ತೋರಿಸಿದ ದುಃಖದ ಮುಖಾಂತರ ಇದು ಸಾದೃಶ್ಯವಾಯಿತು ಎಂದು ನ್ಯಾಯ ವನ್ನು ತೀರಿಸಿದನು.

## ೩೭ ಎಲಿಯಾಸ ದೀರ್ಘದರ್ಶಿಯು

ಇಸ್ರಾಯೇಲಸ್ತರು ಇಜಿಪ್ತ ದೇಶವನ್ನು ಬಿಟ್ಟು ಬಂದಾಗಿನಿಂದಲೂ ಸರ್ವೇಶ್ವರನು ಅವರನ್ನು ಕೈಬಿಡದೆ ತನ್ನ ದಯದ ಮತ್ತು ಶಕ್ತಿಯ ಗುರ್ತುಗಳನ್ನು ಸಹ ತೋರಿಸುತ್ತ ಬಂದರು.

ಇಷ್ಟು ಮಾಡಿದರು ಸಹ ಇವರು ದೇವರ ಕಲ್ಪಣೆಗಳನ್ನು ಮೀರಿದರು. ಮತ್ತು ಅಜ್ಞಾನಿ ಜನರನ್ನು ಮದುವೆಯಾದರು. ಮತ್ತು ಅವರು ಆರಾಧಿಸುವ ಕಳ್ಳ ದೇವರುಗಳನ್ನು ತಾವು ಸಹ ಆರಾಧಿಸಿದರು. ಆದ್ದರಿಂದ ಇಂಥ ಜನರ ಮನಸ್ಸನ್ನು ತಿರುಗಿಸಲು ಸರ್ವೇಶ್ವರನು ಪರಿಶುದ್ಧವಾದ ಜನರನ್ನು ಕಳುಹಿಸುತ್ತಿದ್ದರು. ಈ ಪವಿತ್ರವಾದ ಜನರೇ ದೀರ್ಘದರ್ಶಿಗಳೆಂದೂ ಕರೆಯಲ್ಪಡುತ್ತಾರೆ.

ಈ ದೀರ್ಘ ದರ್ಶಿಗಳು ಸರ್ವೇಶ್ವರನ ಸೇವೆಯನ್ನು ಯಾವ ಪ್ರಕಾರ ಮಾಡಬೇಕೆಂದು ತಿಳಿಸಿದ್ದಲ್ಲದೆ ಮನುಷ್ಯರನ್ನು ಪಾಪದಿಂದ ರಕ್ಷಿಸಲು ಮನುಷ್ಯಾವತಾರವನ್ನು ತೆಗೆದುಕೊಳ್ಳಲಿಕ್ಕಿರುವ ಕರ್ತರನ್ನು ಕುರಿತು ದೀರ್ಘ ದರ್ಶನವನ್ನು

ಹೇಳುತ್ತಿದ್ದರು. ಈ ದೀರ್ಘದರ್ಶಿಗಳಲ್ಲಿ ಮುಖ್ಯವಾದವರು ಮೂವರು, ಯಾರೆಂದರೆ ಎಲಿಯಾಸ್, ಇಜಾಯಸ್ ಮತ್ತು ಜೆರಿಮಿಯಾಸ್ ಎಂಬವರು.

ಈ ಎಲಿಯಾಸ ದೀರ್ಘದರ್ಶಿಯು, ಆಕಾಬ್ ಎಂಬ ಅರಸನು ಇಸ್ರಾಯೇಲಸ್ತರನ್ನು ಆಳುತ್ತಿದ್ದಾಗ ಜೀವಿಸುತ್ತಿದ್ದನು. ಈ ಅರಸನು ಜೆಜಬೆಲ್ಲನೆಂಬ ಅಜ್ಞಾನ ಸ್ತ್ರೀಯನ್ನು ವಿವಾಹ ಮಾಡಿಕೊಂಡನು. ಮತ್ತು ಆಕೆಯ ಬಾ ಆಲ್ ಎಂಬ ಕಳ್ಳ ದೇವರಿಗೆ ಒಂದು ದೇವಾಲಯವನ್ನು ಕಟ್ಟಿಸಿ ತಾನು ಸಹ ಆ ದೇವರನ್ನು ಆರಾಧಿಸಿದನು.

ಎಲಿಯಾಸನು ದೇವರಿಂದ ಕಳುಹಿಸಲ್ಪಟ್ಟು, ಆಕಾಬನಿಗೆ ಹೇಳಿದ್ದೇನಂದರೆ, "ನೀನು ಕಳ್ಳ ದೇವರನ್ನು ಆರಾಧಿಸುವದರಿಂದ ನಿನಗೆ ಶಿಕ್ಷೆಗಾಗಿ ದೇವರು ನಿನ್ನ ರಾಜ್ಯದಲ್ಲಿ ಬರಗಾಲವನ್ನು ಉಂಟುಮಾಡುವರು ಮೂರು ವರ್ಷಗಳ ವರೆಗೆ ನಿನ್ನ ರಾಜ್ಯದಲ್ಲಿ ಮಳೆಯಾಗಲಿ, ಇಬ್ಬನಿಯಾಗಲಿ ಬೀಳಲಿಕ್ಕಿಲ್ಲ ಎಂದನು.

ಎಲಿಯಾಸನು ತಿಳಿಸಿದ ಹಾಗೇ ಎಲ್ಲವೂ ನೆರವೇರಿತು ಮಳೆ ಬೀಳದೆ ಹೋದ ಕೂಡಲೇ ಸರ್ವೇಶ್ವರನು ಎಲಿಯಾಸನಿಗೆ ಜೋರ್ದಾನ ನದಿಯ ಹತ್ತಿರ ವಿರುವ ಒಂದು ಹಳ್ಳಕ್ಕೆ ಹೋಗಲು ತಿಳಿಸಿದರು. ಅಲ್ಲಿ ಆತನಿಗೆ ಪ್ರತಿದಿನ ಮುಂಜಾನೆ ಮತ್ತು ಸಂಜೆಯಲ್ಲಿ ರೊಟ್ಟಿಗಳನ್ನು ಕಾಗೆಗಳು ತಂದು ಕೊಡುತ್ತಿದ್ದವು. ಅದನ್ನು ಆತನು ತಿಂದು ಹಳ್ಳದ ನೀರನ್ನು ಕುಡಿಯುತ್ತಿದ್ದನು. ಹೀಗೆ ಕೆಲವು ದಿವಸಗಳಾದ ತರುವಾಯ ಹಳ್ಳದ ನೀರು ಸಹ ಬತ್ತಿಹೋಯಿತು. ಆಗ ಸರ್ವೇಶ್ವರನು

ಎಲಿಯಾಸನನ್ನು ನೋಡಿ, ನೀನು ಸರೆಪ್ತಾ ಎಂಬ ಊರಿಗೆ ಹೋಗು. ಅಲ್ಲಿರುವ ಒಬ್ಬ ವಿಧವೆ ಸ್ತ್ರೀಯು ನಿನಗೆ ಭೋಜನ ವನ್ನು ಕೊಟ್ಟು ಕಾಪಾಡುವಳು. ಎಂದರು. ಹಾಗೆಯೇ ಎಲಿ ಯಾಸನು ವಿಧೇಯಿಸಿ ಸರೆಪ್ತಾ ಎಂಬ ಊರಿಗೆ ಹೋದನು. ಆತನು ಆ ಪಟ್ಟಣವನ್ನು ಪ್ರವೇಶಿಸುವಾಗ ಸೌದೆಯನ್ನು ಆಯುತ್ತಿದ್ದ ಒಬ್ಬ ಹೆಂಗಸನ್ನು ಕಂಡನು. ಆಕೆಯೇ ಸರ್ವೇ ಶ್ವರನಿಂದ ತಿಳಿಸಲ್ಪಟ್ಟವಳೆಂದು ತಿಳಿದು, ತನಗೆ ಕುಡಿಯಲು ಸ್ವಲ್ಪ ನೀರನ್ನೂ ಭೋಜನವನ್ನೂ ಕೇಳಿದನು.

ಅದಕ್ಕೆ ಆ ವಿಧವೆ ಸ್ತ್ರೀಯು ತನ್ನ ಹತ್ತಿರ ರೊಟ್ಟಿಯಿಲ್ಲದೆ ಸ್ವಲ್ಪ ಹಸಿ ಹಿಟ್ಟು ಮತ್ತು ಸ್ವಲ್ಪ ಎಣ್ಣೆ ಮಾತ್ರ ಇದೆಯೆಂದಳು. ಅದಕ್ಕೆ ದೀರ್ಘ ದರ್ಶಿಯೂ ಆಕೆಯನ್ನು ನೋಡಿ "ನೀನು ಒಂದಕ್ಕೂ ಅಂಜಬೇಡ. ನನಗೆ ಒಂದು ರೊಟ್ಟಿಯನ್ನು ಸುಟ್ಟು ಕೊಂಡು ಬಾ. ಸರ್ವೇಶ್ವರನು ಇಸ್ರಾಯೇಲಪುರ ರಾಜ್ಯದಲ್ಲಿ ಮಳೆ ಸುರಿಸುವ ತನಕ ನಿನ್ನ ಎಣ್ಣೆಯು ಹಸಿ ಹಿಟ್ಟು ಮುಗಿಯು ಲಾರದೆಂದನು. ಆ ವಿಧವೆಯು ಹಾಗೆಯೇ ಮಾಡಿದಳು. ಆದ್ದರಿಂದ ಆಕೆಯ ಹಿಟ್ಟು ಮತ್ತು ಎಣ್ಣೆಯು ಬರಗಾಲ ಮುಗಿ ಯುವವರೆಗೆ ಕಡಿಮೆಯಾಗದೆ ಈ ಮೂರು ವರ್ಷಗಳ ಕಾಲ ವರೆಗೂ ಅವಳು ಅವಳ ಮಗನೂ, ದೀರ್ಘ ದರ್ಶಿಯು ಶ್ರಮ ಪಡದೆ ಭುಜಿಸಿಕೊಂಡು ಬಂದರು.

ಹೀಗಿರುವಾಗ್ಗೆ ಈ ವಿಧವೆ ಸ್ತ್ರೀಯ ಮಗನು ವ್ಯಾಧಿ ಯಲ್ಲಿ ಬಿದ್ದು ಸತ್ತುಹೋದನು. ಆಗ ಎಲಿಯಾಸನು ದೇವ ರನ್ನು ಕುರಿತು, "ಓ ದೇವರೆ ಈತನ ಆತ್ಮವನ್ನು ತಿರುಗಿ ಇವನ ಶರೀರದಲ್ಲಿ ಸೇರುವ ಹಾಗೆ ಮಾಡಿರಿ" ಎಂದು ಬೇಡಿ

ಕೊಳ್ಳಲು ವಿಧವೆಯ ಮಗನು ತಿರುಗಿ ಜೀವಂತನಾಗಿ ಎದ್ದನು.

## ೩೮ ಜೋನಾಸನು ಮತ್ತು ಮೀನವು

ಸರ್ವೇಶ್ವರನು ಜೋನಾಸನಿಗೆ ನಿನಿವೆ ಪಟ್ಟಣಕ್ಕೆ ಹೋಗಿ ಅಲ್ಲಿರುವವರಿಗೆ ತಪಸ್ಸು ಮಾಡಲು ಭೋದಿಸು ಎಂದು ಅಪ್ಪಣೆ ಮಾಡಿದರು. ಯಾಕಂದರೆ ಅಲ್ಲಿಯ ಜನರು ಬಹಳ ದುಷ್ಟರಾಗಿದ್ದು ಕೆಟ್ಟ ಪಾಪಗಳನ್ನು ಕಟ್ಟಿಕೊಳ್ಳುತ್ತಿದ್ದರು. ಆದರೆ ಜೋನಾಸನಿಗೆ ಅಲ್ಲಿಗೆ ಹೋಗ ಮನಸಿಲ್ಲದ್ದರಿಂದ ಆತನು ಸಮುದ್ರದ ತೀರಕ್ಕೆ ಹೋಗಿ ಅಲ್ಲಿ ಒಂದು ದೋಣಿಯನ್ನು ಹತ್ತಿ ತಾರ್ಸಿಸ್ ಎಂಬ ಊರಿಗೆ ಹೋಗುತ್ತಿದ್ದನು.

ಆದರೆ ಕರ್ತರು ಒಂದು ದೊಡ್ಡ ತುಫಾನನ್ನು ಕಳುಹಿಸಿದರು. ಆ ಹಡಗವು ಮುಳುಗುವ ಹಾಗೆ ಇತ್ತು. ಆಗ ಅದರಲ್ಲಿದ್ದ ನಾವಿಕರು ತಮ್ಮ ಹಡಗವು ಹಗುರವಾಗುವ ಹಾಗೆ ಅದರಲ್ಲಿದ್ದ ಸಾಮಾನುಗಳನ್ನು ಬೀಸಾಕಿದರು. ಮತ್ತು ಅದರಲ್ಲಿ ಇರುವ ಜನರಲ್ಲಿ ಯಾರೋ ಒಬ್ಬನು ಇದಕ್ಕೆ ಆತಂಕವಾಗಿದ್ದಾನೆಂದು ತಿಳಿದು ತಮ್ಮೊಳಗೆ ಅದೃಷ್ಟ ಚೀಟಿ ಹಾಕಿದರು. ಆಗ ಅದು ಜೋನಾಸನ ಮೇಲೆ ಬೀಳಲು ಜೋನಾಸನು ತನ್ನನ್ನು ಸಮುದ್ರದಲ್ಲಿ ಬೀಸಾಕಲು ಹೇಳಿದನು. ಹಾಗೇ ಹಡಗ ನಡೆಯಿಸುವವರು ಜೋನಾಸನನ್ನು ಎತ್ತಿ ಸಮುದ್ರದಲ್ಲಿ ಒಗೆದರು. ಕೂಡಲೇ ತುಫಾನು ನಿಂತಿತು.

ಜೋನಾಸನನ್ನು ನುಂಗುವದಕ್ಕಾಗಿ ಸರ್ವೇಶ್ವರನು ಒಂದು ದೊಡ್ಡ ಮೀನವನ್ನು ಏರ್ಪಡಿಸಿದರು. ಈ ದೀರ್ಘದರ್ಶಿಯು ಆ ಮೀನಿನ ಹೊಟ್ಟೆಯಲ್ಲಿ ಮೂರು ಹಗಲು ಮೂರು

ರಾತ್ರಿಗಳವರೆಗೆ ಇದ್ದನು. ಆತನು ದೇವರನ್ನು ಸದಾ ಪ್ರಾರ್ಥಿಸುತ್ತಿದ್ದನು. ಕೊನೆಗೆ ಸರ್ವೇಶ್ವರನು ಮೀನಿಗೆ ತಿಳಿಸಿ ಆತನನ್ನು ಒಂದು ಒಣ ನೆಲದಮೇಲೆ ಕಕ್ಕುವ ಹಾಗೆ ಆಜ್ಞಾಪಿಸಿದರು. ತರುವಾಯ ತಿರುಗಿ ಸರ್ವೇಶ್ವರನು ಜೋನಾಸನಿಗೆ ನಿನಿವೆಪುರಕ್ಕೆ ಹೋಗಲು ಆಜ್ಞಾಪಿಸಿದರು.

ಈ ಸಾರೆ ಜೋನಾಸನು ವಿಧೇಯಿಸಿದನು. ಮತ್ತು ನಿನಿವೆಪುರದ ಜನರಿಗೆ ಹೇಳಿದ್ದೇನಂದರೆ ಇನ್ನು ನಾಲ್ವತ್ತು ದಿವಸಗಳಿಗೆ ಈ ಪಟ್ಟಣವು ನಾಶನ ಮಾಡಲ್ಪಡುವದು ಎಂದನು ಇದನ್ನು ಕೇಳಿ ಅಲ್ಲಿಯ ಜನರು ತಮ್ಮ ಪಾಪಗಳಿಗಾಗಿಮನಸ್ತಾಪ ಪಟ್ಟು ತಪಸ್ಸು ಮಾಡಹತ್ತಿದರು. ಅಲ್ಲಿರುವ ಅರಸನು ಸಹ ತಪಸ್ಸು ಮಾಡುತ್ತಿದ್ದದಲ್ಲದೆ ಎಲ್ಲ ಜನರು ಸಹ ತಪಸ್ಸು ಮಾಡುವ ಹಾಗೆ ಆಜ್ಞಾಪಿಸಿದನು. ಯಾಕಂದರೆ ದೇವರು ನಿನಿವೆ ಪಟ್ಟಣವನ್ನು ರಕ್ಷಿಸುವ ಹಾಗೆ ಈ ಪ್ರಕಾರ ಮಾಡಿದನು. ಸರ್ವೇಶ್ವರನು ಇವರ ನಿಜವಾದ ದುಃಖವನ್ನು ಕಂಡು ಆ ಪಟ್ಟಣವನ್ನು ನಾಶನ ಮಾಡದೆ ರಕ್ಷಿಸಿದರು. ಆದರೆ ಜೋನಾಸನು ತಾನು ಕಳ್ಳ ದೀರ್ಘದರ್ಶಿಯನ್ನಲ್ಪಡುವನೆಂದು ಭಯಪಟ್ಟು ಊರ ಹೊರಗೆ ಒಂದು ಗುಡಿಸಲವನ್ನು ಕಟ್ಟಿಕೊಂಡು ಅಲ್ಲಿ ಜೀವಿಸುತ್ತಿದ್ದು, ನಿನಿವೆ ಪಟ್ಟಣಕ್ಕೆ ಏನು ಸಂಭವಿಸುವದೋ ಎಂದು ಕಾಯುತ್ತಿದ್ದನು. ಆಗ ಸರ್ವೇಶ್ವರನು ಜೋನಾಸನನ್ನು ಬಿಸಿಲಿನಿಂದ ರಕ್ಷಿಸುವ ಹಾಗೆ ಆತನ ಗುಡಿಸಿಲಿನ ಮೇಲೆ ಒಂದು ಬಳ್ಳಿ ಬೆಳೆಯುವಂತೆ ಮಾಡಿದರು. ಇದಕ್ಕೆ ಜೋನಾಸನು ಬಹಳ ಕೃತಜ್ಞತೆಯುಳ್ಳವನಾಗಿದ್ದನು. ಮರುದಿವಸ ಆ ಬಳ್ಳಿಯು ಒಣಗುವ ಹಾಗೆ ಕರ್ತರು ಮಾಡಲು ಸೂರ್ಯನ

ತಾಪವು ಹೆಚ್ಚಾಯಿತು. ಆಗ ಜೋನಸನು ಜೀವಿಸುವದಕ್ಕಿಂತ ಸಾಯುವದು ಉತ್ತಮವೆಂದು ಅನ್ನಪತ್ರಿಪನು ಇದನ್ನು ಸರ್ವೇಶ್ವರನು ಜೋನಾಸನನ್ನು ಕುರಿತು, "ನೀನು ಆ ಬಳ್ಳಿಯು ಒಣಗಿದ್ದಕ್ಕೆ ಇಷ್ಟು ದುಃಖಿಸುತ್ತಿಯಲ್ಲ. ಅದನ್ನು ನೀನು ಸೃಷ್ಟಿಸಲಿಲ್ಲ. ಹಾಗಾದರೆ ಸುಮಾರು ಒಂದುನೂರು ಇಪ್ಪತ್ತೈದು ಸಾವಿರ ಜನರಿರುವ ನಿನಿವೆ ಪಟ್ಟಣವನ್ನು ನಾವು ರಕ್ಷಿಸಬಾರದೋ? ಎಂದರು.

ಹಡಗದಲ್ಲಿದ್ದ ಜನಗಳನ್ನು ರಕ್ಷಿಸಲು ಜೋನಾಸನನ್ನು ಸಮುದ್ರದಲ್ಲಿ ನೂಕಿದ್ದು, ಜೇಸುನಾಥರು ಮನು ಜಾತಿಯನ್ನು ರಕ್ಷಿಸಲು ಬಲಿಯಾಗಿ ಒಪ್ಪಿಸಿದದ್ದಕ್ಕೆ ಹೋಲ್ವಿಕೆಯಾಗಿದೆ ಜೋನಾಸನು ಮೀನದ ಹೊಟ್ಟೆಯಲ್ಲಿ ಮೂರು ದಿವಸಗಳವರೆಗೆ ಇದ್ದನು. ಜೇಸುನಾಥರು ಸಮಾಧಿಯಲ್ಲಿ ಮೂರು ದಿವಸ ಗಳವರೆಗೆ ಇದ್ದರು.

## ೩೬ ತೋಬಿಯಾಸನು ಮತ್ತು ಆತನ ಮಗನು

ಇಸ್ರಾಯೇಲಸ್ತರ ಜನರಲ್ಲಿ ಪಾಪವು ಹೆಚ್ಚಾಗಲು ಆ ರಾಜ್ಯವು ನಾಶನ ಮಾಡಲ್ಪಟ್ಟು ಅಲ್ಲಿಯ ಜನರು ಅಸ್ಸೀರ್ಯ ಪಟ್ಟಣಕ್ಕೆ ಅಡಿಮೆಗಳಾಗಿ ಒಯ್ಯಲ್ಪಟ್ಟರು.

ಈ ಅಡಿಮೆಗಳಲ್ಲಿ ತೊಬಿಯಾಸನೆಂಬ ಒಬ್ಬ ಪುಣ್ಯಾತ್ಮನಿದ್ದನು. ಈತನು ತನ್ನ ಕಾಲವನ್ನೆಲ್ಲ ಶೆರೆಯಲ್ಲಿದ್ದ ಸ್ವದೇಶದವರ ಬಳಿಗೆ ಹೋಗಿ ಅವರಿಗೆ ಉಪಶಾಂತಿಯಾದ ಮಾತನ್ನು ಹೇಳುತ್ತಲೂ, ಗರೀಬರಿಗೆ ದಾನಧರ್ಮ ಮಾಡುತ್ತಲೂ ಕಾಲವನ್ನು ಕಳೆಯುತ್ತಿದ್ದನು.

ಸನಾ ಕರಿಬ್ ಎಂಬ ಅಸ್ಸೀರ್ಯನ್ ರಾಜನು, ಅನೇಕ ಮಂದಿ ಇಸ್ರಾಯೇಲಸ್ತರನ್ನು ಕೊಂದು ಅವರ ಶರೀರವನ್ನು ಭೂಸ್ಥಾಪನೆ ಮಾಡಬಾರದೆಂದು ಕಟ್ಟಳೆ ಇಟ್ಟನು. ಆದರೆ ತೋಬಿಯಾಸನು ಅರಸನಿಗೆ ಗೊತ್ತಿಲ್ಲದ ಹಾಗೆ ಆ ಶ್ರವಗಳನ್ನು ಹೂಣಿಡುತ್ತಿದ್ದನು ಒಂದು ದಿನ ಅವನು ದಣಿವಿನಿಂದ ಬಂದು ಮಲಗಿಕೊಂಡಾಗ ಆತನ ಕಣ್ಣಿನಲ್ಲಿ ಉಷ್ಣವಾದ ಕಾಷ್ಟವು ಬಿದ್ದು ಕಣ್ಣು ಕುರುಡಾಗಿ ಹೋಯಿತು. ಈ ಕಷ್ಟವನ್ನು ತಾಳ್ಮೆಯೊಂದಿಗೆ ಸೈರಿಸುತ್ತ ಬಂದನು. ತೋಬಿಯಾಸನು ವೃದ್ಧನಾಗುತ್ತ ಬಂದದ್ದರಿಂದ ತಾನು ಸಾಯುವನೆಂದು ಅಂಜಿ ತನ್ನ ಮಗನನ್ನು ಕರೆದು "ಮಗನೇ ನಿನ್ನ ತಾಯಿಯನ್ನು ಗೌರವಿಸು. ದೇವರಿಗೆ ಭಯಪಡು, ಪಾಪವನ್ನು ಕಟ್ಟಿಕೊಳ್ಳಬೇಡ. ಗರೀಬರಿಗೆ ದಾನ ಧರ್ಮ ಮಾಡು, ಪಾಪದಿಂದ ದೂರ ಇರು. ಗರ್ವಿಷ್ಟನಾಗಬೇಡ. ಯಾಕಂದರೆ ಎಲ್ಲ ಪಾಪಗಳು ಗರ್ವದಿಂದಲೇ ಹುಟ್ಟುತ್ತವೆ. ನಿನಗೆ ಸರಿಹೋಗದ ಕಾರ್ಯಗಳನ್ನು ಇತರರಿಗೆ ಸಹ ಮಾಡಬೇಡ ಯಾವಾಗಲೂ ಬುದ್ಧಿವಂತರ ಮಾತನ್ನು ಕೇಳು. ಮತು ಸದಾ ದೇವರನ್ನು ಪ್ರಾರ್ಥಿಸು, ಮತ್ತು ನಿನಗೆ ಒಳ್ಳೇ ಮಾರ್ಗವನ್ನು ತೋರಿಸುವ ಹಾಗೆ ಬೇಡಿಕೋ. ನಾವು ಬಡವರು. ಆದರೆ ಪಾಪವನ್ನು ಬಿಟ್ಟು ಸರ್ವೇಶ್ವರನಿಗೆ ಅಂಜಿ ನಡೆದರೆ ಎಲ್ಲವೂ ಸಿಗುವದು." ಎಂದು ಬುದ್ಧಿ ಮಾತುಗಳನ್ನು ಹೇಳಿದನು.

ಒಂದು ದಿನ ತೋಬಿಯಾಸನು ತನ್ನ ಮಗನಿಗೆ ರಾಜೆಸ್ ಎಂಬ ಪಟ್ಟಣಕ್ಕೆ ಹೋಗಿ ಅಲ್ಲಿ ತನಗೆ ಬರಬೇಕಾದ ಹಣವನ್ನು ವಸೂಲು ಮಾಡುವದಕ್ಕಾಗಿ ಹೇಳಿದನು. ಈ ಸಣ್ಣ ತೋಬಿ

ಯಾಸನು ದಾರಿ ನಡೆದು ಹೋಗುತ್ತಿರುವಾಗ ದಾರಿಯಲ್ಲಿ ಒಬ್ಬ ಯೌವನಸ್ತನು ಭೆಟ್ಟಿಯಾದನು. ಈತನು ರಫೇಲ ಸಮ್ಮನಸ್ನಾಗಿದ್ದನು. ಆದರೆ ಸಣ್ಣ ತೋಬಿಯಾಸನು ಇದನ್ನು ಅರಿಯದೆ ಇದ್ದನು. ಈ ದೇವದೂತನು ತೋಬಿಯಾಸನನ್ನು ರಕ್ಷಿಸಲು ಕಳುಹಿಸಲ್ಪಟ್ಟಿದ್ದನು.

ಪ್ರಯಾಣ ಮಾಡುತ್ತಿರುವಾಗ ತೋಬಿಯಾಸನು ದಾರಿಯಲ್ಲಿದ್ದ ಹಳ್ಳದಲ್ಲಿ ಸ್ನಾನ ಮಾಡಲು ತಂಗಿದನು. ಅದರಲ್ಲಿದ್ದ ಒಂದು ದೊಡ್ಡ ಮೀನು ಇವನನ್ನು ನುಂಗಲು ಬಂತು. ಆದರೆ ದೇವದೂತನು "ಭಯಪಡಬೇಡ ಅದನ್ನು ಹಿಡಿದು ಧಡಕ್ಕೆ ಎಳೆದುಕೊಂಡು ಅದರ ಹೊಟ್ಟೆಯನ್ನು ಶೀಳಿ, ಅದರ ಹೃದಯವನ್ನು ಪಿತ್ತದ ಚೀಲವನ್ನು, ಗುಂಡಿಗೆ ಯನ್ನು ತೆಗೆದು ಕಾಪಾಡಿಕೋ ಯಾಕಂದರೆ ಅದು ಔಷಧಕ್ಕೆ ಬರುವದು. ಮತ್ತು ಅದರ ಮಾವಂಸವನ್ನು ಭೋಜನಕ್ಕಾಗಿಟ್ಟುಕೋ" ಎಂದನು. ಇವರು ತಿರುಗಿ ಬಂದಮೇಲೆ ತಾವು ತಂದ ಔಷದವನ್ನು ದೊಡ್ಡ ತೋಬಿಯಾಸನ ಕಣ್ಣುಗಳಿಗೆ ಹಚ್ಚಲು ಆತನ ಕಣ್ಣು ಕಾಣಹತ್ತಿದವು. ಆಗ ಸಮ್ಮನಸ್ನು ತಾನು ಯಾರೆಂದು ತಿಳಿಸುವದಕ್ಕಾಗಿ ಅವರಿಗೆ ಹೇಳಿದ್ದೇನಂದರೆ, "ನಾನು ರಫಯೇಲಸಮ್ಮನಸ್ನು. ಸರ್ವೇಸ್ವರನ ಸಮ್ಮುಖದಲ್ಲಿ ನಿಲ್ಲುವಂಥಾ ಏಳು ಮಂದಿ ದೂತರಲ್ಲಿ ನಾನೊಬ್ಬನು." ಎಂದನು. ಮತ್ತು ಸರ್ವೇಶ್ವರನು ಹ್ಯಾಗೆ ದೊಡ್ಡ ತೋಬಿಯಾಸನ ಪ್ರಾರ್ಥನೆಯನ್ನು ಕೇಳಿ, ಆತನ ಸುಕೃತ್ಯಗಳನ್ನು ನೋಡಿ, ಅವನ ಕಣ್ಣುಗಳು ಕಾಣಿಸುವಂತೆ ಮಾಡಿದರೆಂದು ತಿಳಿಸಿದನು.

## 40 ಜೂದಿತ್ತಳೆನ್ನು ಚರಿತು

ಜೂದಾ ರಾಜ್ಯದ ಅರಸನಾದ ಮನಾಸಸ್ ಎಂಬಾತನು ಬಾಬಿಲೋನ್ ಪಟ್ಟಣದಲ್ಲಿ ಶರೆಯಾಳಾಗಿದ್ದನು. ಆಗ ಅಸ್ಸೀರ್ಯರ್ನ್ ರಾಜನು ಕಾನಾನ್ ದೇಶವನ್ನು ಹಿಡಿಯುವಹಾಗೆ ತನ್ನ ಸೇನಾಧಿಪತಿಯಾದ ಹೊಲೋಪರೆನ್ಸನನ್ನು ಕಳುಹಿಸಿದನು.

ಈತನು ಬಂದು ಬೆತೂಲಿಯಾ ಪಟ್ಟಣಕ್ಕೆ ಮುತ್ತಿಗೆಯನ್ನು ಹಾಕಿದನು. ಆಪಟ್ಟಣದೊಳಗೆ ಇದ್ದ ಜನರು ತಮಗೆ ಹೊರಗಿನಿಂದ ಐದು ದಿವಸಗಳೊಳಗೆ ಯಾವ ಸಹಾಯವು ಬಾರದಿದ್ದರೆ ಅದನ್ನು ಆತನಿಗೆ ಬಿಟ್ಟು ಕೊಡುವಹಾಗೆ ನಿಶ್ಚಯ ಮಾಡಿದರು.

ಆಕಾಲದಲ್ಲಿ ಬೆತೂಲಿಯಾ ಪಟ್ಟಣದಲ್ಲಿ ಜೂದಿತ್ತೆಂಬ ಒಬ್ಬ ವಿಧವೆ ಸ್ತ್ರೀ ಯಿದ್ದಳು. ಈಕೆಯು ಏಕಾಂತವಾಗಿದ್ದು ಯಾವಾಗಲೂ ಉಪವಾಸವನ್ನು ಮಾಡುತ್ತಲು ಜಪವನ್ನು ಹೇಳುತ್ತಿದ್ದಳು. ಈ ಪಟ್ಟಣವು ಪರರ ಕೈವಶವಾಗುವದೆಂದು ಈಕೆಗೆ ತಿಳಿದಾಗ ತನ್ನ ಜನರನ್ನು ನೋಡಿ " ನಾವು ದೈನ್ಯದಿಂದಲೂ, ತಾಳ್ಮೆಯೊಂದಿಗೂ ಇದ್ದು ಸರ್ವೇಶ್ವರನು ತನ್ನ ಚಿತ್ತದಪ್ರಕಾರ ದಯವನ್ನು ತೋರಿಸುವ ಹಾಗೆ ಪ್ರಾರ್ಥಿಸೋಣ ಎಂದಳು.

ಆಗ ಆ ಪೂರ್ವಿಕರು, " ನೀನೆ ನಮ್ಮ ಸಲುವಾಗಿ ಜಪ ಮಾಡು. ಯಾಕಂದರೆ ನೀನು ಪವಿತ್ರಳಾದ ಹೆಣ್ಣು ಮಗಳಾದ್ದಿ," ಎಂದರು.

ಜೂದಿತ್ತಳು ತನ್ನ ಪ್ರಾರ್ಥನೆಯ ಮನೆಗೆ ಹೋಗಿ ತಪಸ್ಸಿನ ಗುರ್ತಿಗಾಗಿ ತಲೆಯಲ್ಲಿ ಬೂದಿಯನ್ನು ಹಾಕಿಕೊಂಡು ತನಗೆ ಸಹಾಯ ಮಾಡುವಹಾಗೆ ಪ್ರಾರ್ಥನೆ ಮಾಡಿದಳು. ತರುವಾಯ ತನ್ನ ಚಂದವಾದ ಬಟ್ಟೆಯನ್ನು ಧರಿಸಿಕೊಂಡು ತನ್ನ ದಾಸಿಯರೊಂದಿಗೆ ಅಸ್ಸೀರ್ಯರ ಪಾಳೆಯಕ್ಕೆ ಹೋದಳು. ಅಲ್ಲಿಯ ಸೇನಾಧಿಪತಿಯಾದ ಹೊಲೊಫರೆನ್ಸ ಎಂಬವನು ಈಕೆಯನ್ನು ನೋಡಿ ಬಹಳ ಸಂತೋಷಪಟ್ಟು, ಆಕೆ ತನ್ನ ಇಷ್ಟದ ಪ್ರಕಾರ ಹೊರಗೆ ಹೋಗಲು ಒಳಗೆ ಬರಲು ಅಪ್ಪಣೆ ಕೊಟ್ಟನು.

ಈಕೆಯು ಅಲ್ಲಿಗೆ ಹೋದ ನಾಲ್ಕನೇಯ ದಿವಸ ಸೇನಾಧಿಪತಿ ಒಂದು ದೊಡ್ಡ ಔತನವನ್ನು ಮಾಡಿದನು. ಆದರೆ ಆತನು ಬಹಳ ಕುಡಿದದ್ದರಿಂದ ಅಮಲುಹತ್ತಿ ನಿದ್ರೆಮಾಡ ಹತ್ತಿದನು. ಎಲ್ಲರೂ ಆತನನ್ನು ಬಿಟ್ಟು ಹೋಗುವ ತನಕ ಜೂದಿತ್ತಳು ದಾರಿ ಕಾಯುತ್ತ ಕಣ್ಣೀರಿನಿಂದ ಪ್ರಾರ್ಥನೆ ಮಾಡ ತೊಡಗಿದಳು. ಏನಂದರೆ "ಓ ದೇವರೆ ನಾನು ನಿಮ್ಮ ಚಿತ್ತದ ಪ್ರಕಾರ ಮಾಡುವಹಾಗೆ ನನಗೆ ಬಲವನ್ನು ಕೊಡಿರಿ" ಎಂದು ತರುವಾಯ ಹೊಲೊಫರ್ ನೆಸ್ಸನ ಕತ್ತಿಯನ್ನು ತೆಗೆದುಕೊಂಡು ಆತನ ತಲೆಯನ್ನು ಕತ್ತರಿಸಿದಳು. ಹೊರಗೆ ಬಂದು ಅದನ್ನು ತನ್ನ ದಾಸಿಯ ಕೈಯಲ್ಲಿ ಕೊಟ್ಟು ಒಂದು ಚೀಲದಲ್ಲಿ ಹಾಕಿಕೊಂಡು ಮನೆಗೆ ಹೋಗುವಹಾಗೆ ಹೇಳಿ, ತಾನು ಪಾಳೆಯವನ್ನು ಬಿಟ್ಟು ಬೆತೂಲಿಯಕ್ಕೆ ಬಂದಳು.

ಜೂದಿತ್ತಳು ತಿರುಗಿ ಬರುವದನ್ನು ಕಂಡು ಎಲ್ಲರೂ ಸಂತೋಷದಿಂದ ಆಕೆಯನ್ನು ಭೆಟ್ಟಿಯಾಗಲು ಎದುರಿಗೆ

ಹೋದರು. ಯಾಕಂದರೆ ಆಕೆಯು ತಿರುಗಿ ಬರುವಳೆಂದು ಯಾರೂ ನಿರೀಕ್ಷಿಸಿದ್ದಿಲ್ಲ. ಆಗ ಆಕೆಯು ಸರ್ವೇಶ್ವರನನ್ನು ಸ್ತುತಿಸಿರಿ ಯಾಕಂದರೆ ತಮ್ಮ ಮೇಲೆ ನಂಬಿಗೆಯನ್ನಿಟ್ಟವರನ್ನು ಅವರು ಕೈಬಿಡಲಿಲ್ಲ. ಅವರನ್ನು ಮಹಿಮೆ ಪಡಿಸಿರಿ. ಯಾಕಂದರೆ ಅವರ ದಯವು ತಾಳ್ಮೆಯೊಂದಿಗೆ ಯಾವಾಗಲೂ ಸಹಿಸುತ್ತದೆ" ಎಂದು ಹೊಲೊಫರ್ನೆಸ್ಸನ ತಲೆಯನ್ನು ತೋರಿಸಿದಳು.

ಮರುದಿನ ಮುಂಜಾನೆ ಜನರು ಹೊಲೊಫರ್ನೆಸ್ಸನ ತಲೆಯನ್ನು ತಮ್ಮ ಊರಿನ ಹೆಬ್ಬಾಗಿಲಕ್ಕೆ ತೂಗು ಹಾಕಿದರು, ಮತ್ತು ಎಲ್ಲರೂ ತಮ್ಮ ಆಯುಧಗಳನ್ನು ತೆಗೆದುಕೊಂಡು ಅಸ್ಸಿರ್ಯನ ಪಾಳೆಯದ ಸಂಗಡ ಯುದ್ಧಮಾಡಲು ಹೊರಟರು. ಅಸ್ಸಿರ್ಯನ ಪಾಳೆಯದ ಸೈನಿಕರು ತಮ್ಮ ಸೇನಾಧಿಪತಿಯ ಶರೀರವು ತಲೆಯಿಲ್ಲದೆ ಬಿದ್ದಿರುವದನ್ನು ಕಂಡು ಭಯಪಟ್ಟು ಎಲ್ಲರೂ ಚದರಿ ಓಡಿ ಹೋದರು. ಹೀಗೆ ಜೂದಿತ್ತಳು ತನ್ನ ಜನರನ್ನು ಕಾಪಾಡಿದಳು.

ಜೂದಿತ್ತಳು ಅರ್ಚಶಿಷ್ಟ ಕನ್ಯ ಮರಿಯಮ್ಮನವರಿಗೆ ಹೋಲ್ಕಿಕೆ ಯಾಗಿದ್ದಾಳೆ. ನಮ್ಮ ತಿರುಸಭೆಯು ದೇವಮಾತೆಯನ್ನು ಸ್ತುತಿಸುವದಕ್ಕಾಗಿ, ಇಸ್ರಾಯೇಲಸ್ತರು ಜೂದಿತ್ತಳು ತಿರುಗಿ ಬಂದಾಗ ಹೇಳಿದ ವಾರ್ತೆಗಳನ್ನೇ ಸಂಗೀತದಲ್ಲಿ ಹಾಡುತ್ತದೆ. ಏನಂದರೆ "ನೀನು ಜೆರೊಸಲೇಮಿನ ಮಹಿಮೆಯಾಗಿರುತ್ತೀ. ನೀನು ಇಸ್ರಾಯೇಲರ ಸಂತೋಷಕ್ಕೆ ಕಾರಣವಾಗಿರುತ್ತಿ. ನೀನು ನಿನ್ನ ಜನರ ಮಹಿಮೆಯು ಗೌರವವು ಆಗಿರುತ್ತಿ."

## 41 ಬಾಬಿಲೋನ್ ಪಟ್ಟಣವು ಹಿಡಿಯಲ್ಪಟ್ಟ ವರ್ತಮಾನ

ಇಸ್ರಾಯೇಲ್ಯರು ದೇವರಿಗೆ ಅವಿಧೇಯಿಸಿ ದುರ್ಮಾರ್ಗದಲ್ಲಿಯೇ ಜೀವಿಸಿದರೆ, ಸರ್ವೇಶ್ವರನು ಅವರನ್ನು ಶಿಕ್ಷಿಸುವದಕ್ಕಾಗಿ ಪರರಾಜರಿಂದ ಅವರನ್ನು ಸೋಲಿಸುವಹಾಗೆ ಮಾಡುವರೆಂದು ದೀರ್ಘದರ್ಶಿಗಳ ಮೂಲಕ ಇಸ್ರಾಯೇಲರಿಗೆ ಹೇಳುತ್ತಿದ್ದರೂ ಅವರು ಪವಿತ್ರ ಮನುಷ್ಯರ ಮಾತನ್ನು ಲಕ್ಷ ಮಾಡುತ್ತಿದ್ದಿಲ್ಲ.

ಇವರ ಶತೃಗಳಲ್ಲಿ ಬಾಬಿಲೋನ್ ಪಟ್ಟಣದ ಅರಸನಾದ ನೆಬೊಕ್ಕದೊನೋಸರನೆಂಬವನೊಬ್ಬನಾಗಿದ್ದನು. ಈ ಅರಸನು ಜರೂಸಲೇಮನ್ನು ಜಯಿಸುವದಕ್ಕಾಗಿ ಒಂದು ಸೈನ್ಯವನ್ನು ಕಳುಹಿಸಿದನು. ಸಿಪಾಯಿಗಳು ದೇವಾಲಯಗಳಿಗೆ ಬೆಂಕಿಯನ್ನು ಹತ್ತಿಸಿ ಕೋಟೆಯ ಗೋಡೆಗಳನ್ನು ಒಡೆದರು. ಅನೇಕ ಜನ ಇಸ್ರಾಯೇಲ್ಯರನ್ನು ಅಡಿಮೆಗಳಾಗಿ ಬಾಬಿಲೋನ್ ಪಟ್ಟಣಕ್ಕೆ ಒಯ್ದರು. ಇಷ್ಟಲ್ಲದೆ ಆ ದೇವಾಲಯದಲ್ಲಿದ್ದ ಶ್ರೇಷ್ಟವಾದ ಪಾತ್ರೆಗಳನ್ನು, ಅಲಂಕರಿಸಲು ಉಪಯೋಗಿಸುವ ಸುಂದರವಾದ ಸಾಮಾನುಗಳನ್ನು ತೆಗೆದು ಕೊಂಡು ಹೋದರು.

ಹೀಗೆ ಅಡಿಮೆಗಳಾಗಿ ತೆಗೆದುಕೊಂಡು ಹೋದವರಲ್ಲಿ ದಾನಿಯೇಲನು ಆತನ ಮೂವರು ಸ್ನೇಹಿತರಾಗಿದ್ದರು. ಇವರಿಗಿರುವ ಜ್ಞಾನದಿಂದ ಅರಸನಿಂದ ಗೌರವಿಸಲ್ಪಡುತ್ತಿದ್ದರು.

ಒಂದು ರಾತ್ರಿ ಅರಸನಿಗೆ ಒಂದು ಕನಸು ಬಿತ್ತು. ಬಾಬಿಲೋನ್ ಪಟ್ಟಣದಲ್ಲಿದ್ದ ಎಲ್ಲ ಶಾಸ್ತ್ರಜ್ಞರು ಸಹ

ಇದರ ಅರ್ಥವನ್ನು ತಿಳಿಸದೆ ಹೋದರು, ಆಗ ಅರಸನು ಸಿಟ್ಟುಗೊಂಡು ಎಲ್ಲ ಶಾಸ್ತ್ರಜ್ಞರನ್ನು ಕೊಲ್ಲುವ ಹಾಗೆ ಕಟ್ಟಳೆಯಿಟ್ಟನು. ಸಿಪಾಯಿಗಳು ದಾನಿಯೇಲನನ್ನು ಆತನ ಮೂವರು ಸ್ನೇಹಿತರನ್ನು ಕೊಲ್ಲಲು ಬರಲು ದಾನಿಯೇಲನು ಇದರ ಅರ್ಥವನ್ನು ಹೇಳುವದಕ್ಕಾಗಿ ತನಗೆ ಸ್ವಲ್ಪ ಸಮಯ ಕೊಡಬೇಕೆಂದು ಅರಸನನ್ನು ಕೇಳಿಕೊಂಡನು.

ದಾನಿಯೇಲನು ತನಗೆ ಆ ಕನಸಿನ ಅರ್ಥವನ್ನು ತಿಳಿಸುವಹಾಗೆ ದೇವರನ್ನು ಪ್ರಾರ್ಥಿಸಿದನು. ಹಾಗೆಯೇ ಕರ್ತರು ಅವನಿಗೆ ಸಹಾಯ ಮಾಡಲು ದಾನಿಯೇಲನು ಅರಸನಿಗೆ ಅದರ ಅರ್ಥವನ್ನು ತಿಳಿಸಿದನು. ಅದನ್ನು ಕೇಳಿ ಅರಸನು ಬಹಳ ಸಂತೋಷಪಟ್ಟು ನಿಮ್ಮ ದೇವರೇ ನಿಜವಾದ ದೇವರು ಎಂದು ಹೇಳಿ ದಾನಿಯೇಲನನ್ನು ಬಾಬಿಲೋನ್ ಪಟ್ಟಣಕ್ಕೆ ಅಧಿಪತಿಯಾಗಿ ಮಾಡಿದನು.

ಕೆಲವು ದಿವಸಗಳಾದ ತರುವಾಯ ನೆಬೂಕದ್ನೆಜ್ಜರ್ ಒಂದು ಬಂಗಾರದ ಮೂರ್ತಿಯನ್ನು ಮಾಡಿ, ಎಲ್ಲರೂ ಅದನ್ನು ಆರಾಧಿಸುವಂತೆ ಕಟ್ಟಪ್ಪಣೆ ಮಾಡಿದನು. ಆದರೆ ದಾನಿಯೇಲನು ಆತನ ಸ್ನೇಹಿತರು ಮಾತ್ರ ಆರಾಧಿಸುತ್ತಿದ್ದಿಲ್ಲ.

ಇದನ್ನು ನೋಡಿ ಅರಸನು ಬಹಳ ಕೋಪಗೊಂಡು ದಾನಿಯೇಲನ ಮೂವರು ಸ್ನೇಹಿತನನ್ನು ಉರಿಯುವ ಬೆಂಕಿಯಲ್ಲಿ ಹಾಕಿ ಸುಡಲು ಆಜ್ಞಾಪಿಸಿದನು. ಆ ಮೂವರನ್ನು ಬೆಂಕಿಯಲ್ಲಿ ಇಳಿಸಲು ಹೋದ ಜನರು ಆ ಉರಿಗೆ ತಾಳದೆ

ಪ್ರಾಣ ಬಿಟ್ಟರು. ಆದರೆ ಈ ಮೂವರಿಗೆ ಯಾವ ಅಪಾಯವು ಜರಗಲಿಲ್ಲ. ಒಬ್ಬ ಸಮ್ಮನಸ್ಸು ಮೋಕ್ಷದಿಂದ ಕೆಳಗೆ ಇಳಿದು ಬಂದರು. ಆ ಬೆಂಕಿಯಲ್ಲಿ ತಂಪಾದಗಾಳಿಯು ಬೀಸುವಹಾಗೆ ಮಾಡಿದರು. ಈ ಮೂವರು ಸ್ನೇಹಿತರು ಆ ಉರಿಯಲ್ಲಿ ಸಹ ಸರ್ವೇಶ್ವರನನ್ನು ಸ್ತುತಿಸುತ್ತಾ ತಿರುಗಾಡುತ್ತಿದ್ದರು.

ನೊಬ್ಕೊದೋನೊಸರ್ ಅರಸನು ಈ ಮೂವರು ಯೌವನಸ್ತರಿಗೆ ಯಾವ ಹಾನಿಯು ಜರಗವೆ ಇರುವದನ್ನು ನೋಡಿ ಅವರನ್ನು ಬೆಂಕಿಯಿಂದ ಹೊರಗೆ ತೆಗೆಯಿಸಿ, ಹೇಳಿದ್ದೇನಂದರೆ "ಇವರ ದೇವರೇ ನಿಜವಾದ ದೇವರು. ಯಾಕಂದರೆ ಬೇರೆ ಯಾವ ದೇವರು ಈಪ್ರಕಾರದಲ್ಲಿ ರಕ್ಷಿಸುವದ್ದಿಲ್ಲ" ವೆಂದನು.

## 42 ದಾನಿಯೇಲನು ಸಿಂಹದ ಗವಿಯಲ್ಲಿ ಹಾಕಲ್ಪಟ್ಟ ವರ್ತಮಾನ

ಬಲ್ತಜಾರನ ಮರಣಾನಂತರ ಮದೆ ಪಟ್ಟಣದ ದಾರಿಯುಸ್ ಎಂಬಾತನು ಅರಸನಾದನು. ಈತನು ಸಹ ದಾನಿಯೇಲನನ್ನು ಪ್ರೀತಿಸುತ್ತಿದ್ದ ಕಾರಣ ಆತನನ್ನು ಎಲ್ಲರಮೇಲೆ ಅಧಿಪತಿಯಾಗಿ ನೇಮಿಸಿದನು.

ಕೆಲವು ವರ್ಷಗಳಾದ ನಂತರ ಬಾಬಿಲೋನ್ ಪಟ್ಟಣವನ್ನು ಸೀರುಸ್ ಎಂಬ ಅರಸನು ಆಳಹತ್ತಿದನು. ಈತನು ಸಹ ದಾನಿಯೇಲನಿಗೆ ಗೌರವವನ್ನು ಅಧಿಕಾರವನ್ನು ಕೊಟ್ಟಿದ್ದನು. ದಾನಿಯೇಲನು ಸೀರುಸಿನಿಗೆ ದೇವರ ವಿಷಯವಾಗಿ ತಿಳಿಸಲು ಪ್ರಯತ್ನಿಸುತ್ತಿದ್ದನು. ಈತನು ಅರಸನನ್ನು ನೋಡಿ "ಓ ರಾಜಾ ನೀವು ಆರಾಧಿಸುವಂಥ ದೇವರುಗಳು ಕಳ್ಳದೇವರು. ಅವುಮಾ

ರಿಗೂ ಸಹಾಯವನ್ನು ಮಾಡಲಾರವು ನಾನು ಆರಾಧಿಸುವ ದೇವರು ನಿಜವಾದ ದೇವರು. ಮತ್ತು ಯಾವಾಗಲೂ ಜೀವಿಸುತ್ತಾರೆ. ನಿಮ್ಮ ದೇವರುಗಳು ಜೀವವಿಲ್ಲದವು" ಎಂದನು.

ದಾನಿಯೇಲನ ಭೋಧನೆಯನ್ನು ಕೇಳಿ ಮೊದಲು ಅರಸನು ಕೆಲವು ಮೂರ್ತಿಗಳನ್ನು ನಾಶನ ಮಾಡಲು ಅಪ್ಪಣೆ ಕೊಟ್ಟನು. ಇದನ್ನು ಕಂಡು ಬಾಬಿಲೋನ್ ಪಟ್ಟಣ ವಾಸಿಗಳು ಬಹಳ ಸಿಟ್ಟುಗೊಂಡು ಅರಸನ ಬಳಿಗೆ ಹೋಗಿ " ನೀನು ದಾನಿಯೇಲನನ್ನು ನಮಗೆ ಹಿಡಿದುಕೊಂಡು ಇಲ್ಲವೇ ನಿನ್ನನ್ನು ಕೊಂದು ನಿನ್ನ ಮನೆಯನ್ನು ಹಾಳುಮಾಡುವೆವು" ಅಂದರು.

ಅರಸನು ಬಹಳ ಅಂಜಿದನು. ದಾನಿಯೇಲನನ್ನು ಹಿಡಿದುಕೊಂಡು ಹೋಗುವ ಹಾಗೆ ಜನರಿಗೆ ಹೇಳಿದನು. ಅವರು ಆತನನ್ನು ಹಿಡಿದು ಹಸಿದಿರುವಂಥ ಸಿಂಹಗಳಿರುವ ಒಂದು ಗುಹೆಯಲ್ಲಿ ಹಾಕಿದರು. ಆದರೆ ಆ ಸಿಂಹಗಳು ಆತನನ್ನು ಕೊಲ್ಲದೆ ನಾಯಿಗಳ ಹಾಗೆ ಆತನ ಪಾದಬಳಿಯಲ್ಲಿ ಬಂದು ಮಲಗಿದವು.

ಹೀಗೆ ಆರು ದಿವಸಗಳ ವರೆಗೆ ದಾನಿಯೇಲನು ಸಿಂಹದ ಗುಹೆಯಲ್ಲಿದ್ದನು. ಆತನಿಗೆ ಯಾರೂ ಭೋಜನವನ್ನು ತಾರದ ಕಾರಣ ಬಹಳ ಹಸಿವೆಗೊಂಡಿದ್ದನು. ಆ ಕಾಲದಲ್ಲಿ ಬಾಬಿಲೋನ್ ಪಟ್ಟಣದಿಂದ ದೂರದಲ್ಲಿ ಹಬಾಕುಕ್ ಎಂಬ ಒಬ್ಬ ಧೀರ್ಘದರ್ಶಿ ಜೀವಿಸುತ್ತಿದ್ದನು, ಈತನು ಹೊಲದಲ್ಲಿ ಕೆಲಸ ಮಾಡುತ್ತಿದ್ದವರಿಗೆ ಬುತ್ತಿಯನ್ನು ತೆಗೆದುಕೊಂಡು ಹೋಗುತ್ತಿದ್ದನು. ಆಗ ಅಕಸ್ಮಾತ್ತಾಗಿ ಒಬ್ಬ ದೇವದೂತನು ಆತನ ಕೂದ

ಲುಗಳನ್ನು ಹಿಡಿದು ಬಾಬಿಲೋನ್ ಪಟ್ಟಣಕ್ಕೆ ಒಯ್ದು ಅಲ್ಲಿ ದಾನಿಯೇಲನಿದ್ದ ಗವಿಯಲ್ಲಿ ಬಿಟ್ಟನು. ಹಬಾಕುಕ್ ದೇವ ದೂತನ ಅಪ್ಪಣೆಯ ಪ್ರಕಾರ ಆ ಬುತ್ತಿಯನ್ನು ದಾನಿಯೇಲ ನಿಗೆ ಕೊಟ್ಟನು. ತರುವಾಯ ದೇವದೂತನು ಆತನನ್ನು ತಿರುಗಿ ಮೇಲಕ್ಕೆತ್ತಿ ಅವನ ಮನೆಗೆ ಒಯ್ದು ಬಿಟ್ಟನು. ಈ ಪ್ರಕಾರ ವಾಗಿ ಕರ್ತರು ಸಿಂಹದ ಗುಹೆಯಲ್ಲಿ ಸಹ ದಾನಿಯೇಲನಿಗೆ ಭೋಜನವನ್ನು ಕೊಟ್ಟರು.

ಏಳನೆಯ ದಿವಸ ಸೀರುಸನು ದಾನಿಯೇಲನಿಗೆ ಏನು ಸಂಭವಿಸಿತೋ ಎಂದು ನೋಡುವದಕ್ಕಾಗಿ ಸಿಂಹದ ಗುಹೆಗೆ ಹೋದನು. ದಾನಿಯೇಲನು ಕ್ರೂರಮೃಗಗಳ ಮಧ್ಯದಲ್ಲಿ ನಿಶ್ಚಿಂತನಾಗಿ ಕುಳಿತಿರುವದನ್ನು ಕಂಡು ಬಹಳ ಆಶ್ಚರ್ಯ ಪಟ್ಟನು. ಮತ್ತು ದಾನಿಯೇಲನನ್ನು ಗವಿಯಿಂದ ಮೇಲಕ್ಕೆ ತೆಗೆದು, ಅವನ ಶತ್ರುಗಳನ್ನು ಅದರಲ್ಲಿ ಹಾಕುವಹಾಗೆ ತನ್ನ ಸೇವಕರಿಗೆ ಹೇಳಿದನು. ಇವರನ್ನು ಆ ಗುಹೆಯೊಳಗೆ ಇಳಿಸುವದರೊಳಗೆ ಸಿಂಹಗಳು ಅವರನ್ನು ಕೊಂದು ನುಂಗಿಬಿಟ್ಟವು.

## 43. ಜೂದರು ಜೆರುಸಲೆಮ್ ಪಟ್ಟಣಕ್ಕೆ ತಿರುಗಿ ಬಂದ ವರ್ತಮಾನ.

ಜೂದರು ಎಪ್ಪತ್ತು ವರ್ಷಗಳವರೆಗೆ ಅಡಿಮೆಗಳಾಗಿದ್ದರು. ಆಗ ಪರ್ಶಿಯಾ ದೇಶದ ಅರಸನಾದ ಸೀರುಸ್ ಎಂಬಾತನು ಬಾಬಿಲೋನ್ ಪಟ್ಟಣದ ಅರಸನಾದನು. ಈತನು ಜೂದ ಜನಗಳೆಲ್ಲರೂ ತಮ್ಮ ಸ್ವದೇಶಕ್ಕೆ ಹೋಗುವ ಹಾಗೆ ಸಾರಿದನು.

ಜೂದ ಜನರಲ್ಲಿದ್ದ ಜೊರೋಬಾಬೆಲ್ ಎಂಬ ರಾಜ

ಕುವಾರನು ೪೦೦೦೦ ಜನರೊಂದಿಗೆ ಜೆರೂಸಲೇಮಿಗೆ ಪ್ರಯಾಣಮಾಡಿದನು. ಆಗ ಸೀರೂಷನು, ನೆಬೂಕದ್ನೇಜರನು ದೇವಾಲಯದಿಂದ ತಂದಿದ್ದ ಎಲ್ಲ ಶ್ರೇಷ್ಠವಾದ ಪಾತ್ರೆಗಳನ್ನೂ, ಬೆಳ್ಳಿ ಬಂಗಾರವನ್ನೂ ಯೂದರಿಗೆ ಕೊಟ್ಟು ಕಳುಹಿಸಿದನು.

ಈ ಯೂದರು ತಮ್ಮ ಸ್ವದೇಶಕ್ಕೆ ಬಂದಕೂಡಲೇ ಒಂದು ಪೀಠವನ್ನು ಕಟ್ಟಿ ಅದರ ಮೇಲೆ ಬಲಿಗಳನ್ನು ಅರ್ಪಿಸುವದಕ್ಕೂ ಪ್ರಾರ್ಥನೆ ಮಾಡುವದಕ್ಕೂ ಪ್ರಾರಂಭಿಸಿದರು. ತರುವಾಯ ಸಲೋಮೋನನು ಕಟ್ಟಿಸಿದ ದೇವಾಲಯವನ್ನು ತಿರುಗಿ ಕಟ್ಟಿಸುವದಕ್ಕಾಗಿ ಪ್ರಾರಂಭಿಸಿದರು.

ಈ ದೇವಾಲಯವು ೨೦ ವರ್ಷಗಳಿಗೆ ಮುಗಿಸಲ್ಪಟ್ಟಿತು. ಆಗ ಎಲ್ಲ ಜನರು ಬಹಳ ಸಂತೋಷಿಸಲಾರಂಭಿಸಿದರು. ಆದರೆ ಸಲೋಮೋನನು ಕಟ್ಟಿಸಿದ ದೇವಾಲಯವನ್ನು ನೋಡಿದ ವೃದ್ಧರು ಈ ಗುಡಿಯನ್ನು ನೋಡಿ ಚೆನ್ನಾಗಿಲ್ಲವೆಂದು ದುಃಖಿಸಲಾರಂಭಿಸಿದರು.

ಆಗ ಅಗ್ಗೆಯನ್ ಎಂಬ ದೀರ್ಘದರ್ಶಿಯು ಅವರನ್ನು ಸಮಾಧಾನಗೊಳಿಸಲು ಹೇಳಿದ್ದೇನಂದರೆ, "ನೀವು ಚಿಂತಿಸಬೇಡಿರಿ. ಯಾಕಂದರೆ ಮೊದಲನೇ ದೇವಾಲಯದ ಮಹಿಮೆಗಿಂತಲೂ ಎರಡನೇಯದರ ಮಹಿಮೆಯು ಹೆಚ್ಚಾಗುವದು. ಯಾಕಂದರೆ ಮೆಸ್ಸಾಯನು ಅದರಲ್ಲಿ ಬೋಧಿಸುವನು. ಹಾಗೆಯೇ ನಮ್ಮ ಕರ್ತರಾದ ಜೇಸು ನಾಥರು ಭೂಲೋಕದಲ್ಲಿ ಜೀವಿಸುತ್ತಿದ್ದಾಗ ಈ ದೇವಾಲಯದಲ್ಲಿಯೇ ಭೋಧಿಸಿದರು.

ಜೋರೋ ಬಾಬೆಲ್ ಎಂಬಾತನು ಜೇರುಸಲೇಮಿಗೆ ಬಂದ ಮೇಲೆ ಇಪ್ಪತ್ತು ವರ್ಷಗಳ ತರುವಾಯ ಎಸ್ ದ್ರಾಸ್ ಎಂಬ ಒಬ್ಬ ಪರಿಶುದ್ಧಗುರು ಬಾಬಿಲೋನ್ ಪಟ್ಟಣದಲ್ಲಿ ಇನ್ನು ಉಳಿದ ಬಾಕಿ ಜನರನ್ನು ಕರೆದುಕೊಂಡು ಜೂದೆಯಾ ದೇಶಕ್ಕೆ ಬಂದನು. ಈ ತನು ತನ್ನ ಸ್ನೇಹಿತನಾದ ನೆಹಮಿಯಾಸನ ಸಹಾಯದಿಂದ ಇವರಿಗೆ ವೇದವನ್ನು ಬೋಧಿಸುತ್ತಿದ್ದನು.

ನೆಹಮಿಯಾಸನು ಜೆರೂಸಲೇಮ್ ನಗರದ ಗೋಡೆಗಳನ್ನು ಕಟ್ಟುವಹಾಗೆ ಹುರಿದುಂಬಿಸಿದನು. ಆ ಗೋಡೆಗಳು ಎರಡು ತಿಂಗಳಗಳೊಳಗೆ ಕಟ್ಟಲ್ಪಟ್ಟು ಬಲವಾಗಿನಿಂತು ಶತ್ರುಗಳನ್ನು ತಡೆಯುವಹಾಗೆ ಯಿದ್ದವು. ಜೇಸುನಾಥರು ಹುಟ್ಟುವಮೊದಲು ನಾಲ್ಕುನೂರ ವರ್ಷಗಳ ಮುಂಚೆ ನೆಹಮೀಸನು, ಮಲಕಿಯಾಸರೆಂಬ ಕಡೆಯ ದೀರ್ಘ ದರ್ಶಿಗಳು ಜೀವಿಸಿದರು. ಮಲಾಕಿಯಸ್ ಎಂಬ ದೀರ್ಘ ದರ್ಶಿಯು ಆ ದಿವಸಗಳಲ್ಲಿದ್ದ ಕಪಟ ಭಕ್ತರ ವಿಷಯವಾಗಿ ಭೋಧಿಸುತ್ತಿದ್ದು, ಸರ್ವೇಶ್ವರನು ಹಳೇ ವೇದದ ಬಲಿಗಳನ್ನು ಬಿಟ್ಟು ಬಿಟ್ಟು ಹೊಸವೇದದ ಬಲಿಯನ್ನು ಆರಿಸಿಕೊಳ್ಳುವರೆಂದೂ, ಈ ಬಲಿಯು ಮುಂಜಾವಿನಿಂದ ಸೂರ್ಯನು ಮುಳುಗುವವರೆಗೂ ಜರುಗುವದೆಂದು ಭವಿಷತ್ತನು ಹೇಳಿದನು. ಈ ದೀರ್ಘ ದರ್ಶನವು ಈಗಲೂ ದಿವ್ಯ ಪೂಜೆಯ ಬಲಿಯಲ್ಲಿ ಜರುಗುತ್ತದೆ.

ಸಲೋಮೋನ್ ಅರಸನು ಕಟ್ಟಿಸಿದ ದೇವಾಲಯವು ಹಾಳುಮಾಡುವ ಸಮಯದಲ್ಲಿ ಜರೆಮಿಯಾಸ್ ಎಂಬ ದೀರ್ಘ

ದರ್ಶಿಯು ಹತ್ತು ಕಲ್ಪನೆಗಳನ್ನು ಬರೆದಿಟ್ಟ ಕಲ್ಲುಗಳನ್ನು ಬಚ್ಚಿಟ್ಟಿದ್ದನು. ಇವುಗಳನ್ನು ಹೊಸದೇವಾಲಯದಲ್ಲಿಡಲು ಹುಡುಕಿದರು. ಆದರೆ ಅವು ಸಿಗಲಿಲ್ಲ. ಆದರಿಂದ ಜೂದರು ವಾಗ್ದತ್ತದ ಪೆಟ್ಟಿಗೆ ಬದಲಾಗಿ ಒಂದು ಕಲ್ಲನ್ನು ಇಟ್ಟು ಮತದವಿಷಯ ಕೆಲವು ಮತಾಚಾರಗಳನ್ನು ಬರೆದಿಟ್ಟರು. ಈ ಪ್ರಕಾರವಾಗಿ ಕರ್ತರು ಈ ಲೋಕಕ್ಕೆ ಬರಲಿಕ್ಕೆ ಜೇಸುನಾಥರ ಸಲುವಾಗಿ ತಯಾರು ಮಾಡುವಹಾಗೆ ತಮ್ಮ ಕಲ್ಲುಗಳನ್ನು ಅಡಗಿಸಿಟ್ಟರು.

ಈ ವಾಗ್ದತ್ತದ ಪೆಟ್ಟಿಗೆಯು ನಿಜವಾದ ದೇವಕುಮಾರನಿರುವ ಪೆಟ್ಟಿಗೆ ಯಾಗಿರುತ್ತದೆ.

## 44 (ಬಿ) ತಾಯಿಯು ಮತ್ತು ಏಳು ಮಂದಿ ಕುಮಾರರೂ ಮರಣ ಹೊಂದಿದ ವರ್ತಮಾನವು.

ಮೇಲೆ ಹೇಳಿದ ಪ್ರಕಾರ ಮೋಯಿಸನ ಕಟ್ಟಳೆಯಲ್ಲಿ ನಿಷೇದಿಸಿದ ಹಂದಿಯ ಮಾಂಸವನ್ನು ತಿನ್ನುವದಕ್ಕಾಗಿ ಒಬ್ಬ ವಿಧವೆಯು ಆಕೆಯ ಏಳು ಮಂದಿ ಕುಮಾರರೂ ಅನೇಕ ಕಠಿಣ ಭಾದೆಗಳನ್ನು ಅನುಭವಿಸಿದರು. ಅಂತಿಯೋಕನು ಈ ಮಕ್ಕಳಲ್ಲಿ ಒಬ್ಬನತರುವಾಯ ಮತ್ತೊಬ್ಬನನ್ನು ಹೀಗೆ ಎಲ್ಲರ ಮುಂದೆಯೂ ಅವರಿಗೆ ಬಹಳ ಕಠಿಣವಾದ ಕಷ್ಟಗಳನ್ನು ಕೊಟ್ಟು ಕೊಲ್ಲಿಸಿದನು. ಆದರೆ ಎಲ್ಲರೂ ದೃಢ ಮನಸ್ಸಾಗಿದ್ದರು. ಅವರಲ್ಲಿ ಹಿರಿಯವನು “ ನಮ್ಮ ವೇದದ ಕಟ್ಟಳೆಯನ್ನು ಮೀರುವದಕ್ಕಿಂತ ಸಾಯುವದೇ ಮೇಲು ” ಎಂದನು.

ಎರಡನೇಯವನು“ ವೇದದ ಸಲುವಾಗಿ ಮರಣಹೊಂದಿ

ದವರನ್ನು ದೇವರು ತಿರುಗಿ ಪುನರುತ್ಥಾನದಕಾಲದಲ್ಲಿ ತಿರುಗಿ ಜೀವಂತರಾಗಿ ಎಬ್ಬಿಸುವರು ಎಂಬದು ಹೀಗೆ ಬಾಕಿ ಎಲ್ಲಾ ಮಗರು ಬಹಳ ಕ್ರೂರತನವಾಗಿ ಅನೇಕ ಬಾಧೆಗಳನ್ನು ಪಟ್ಟು ಮರಣ ಹೊಂದಿದರು. ಕೊನೆಗೆ ತನ್ನ ಮಕ್ಕಳಿಗೆ ಬೇಕಾದ ಧೈರ್ಯವನ್ನು ಉತ್ಸಾಹವನ್ನು ಕೊಟ್ಟತಾಯಿಯು ಸಹ ಕೊಲ್ಲಲ್ಪಟ್ಟಳು.

**೪೫ ರಕ್ಷಕರು ಜನ್ಮಿಸುವ ದೀರ್ಘ ದರ್ಶನವು.**

ಅಂತಿಯೋಕನ ಮರಣಾನಂತರ ಆತನ ಮಗನು ಜೂದೆ ಯಾ ರಾಜ್ಯವನ್ನು ಜಯಿಸಲು ಯತ್ನಿಸಿದನು ಆದರೆ ಜೂದಾಸ್ ಮಕಾಬಿಯಾಸನು ಆತನನ್ನು ಎದುರಿಸುವದಕ್ಕಾಗಿ ಹೋಗು ವಾಗ್ಗೆ, ಇವರ ಸೈನ್ಯದ ಮುಂದೆ ಒಬ್ಬ ಮನುಷ್ಯನು ಬಿಳಿ ವಸ್ತ್ರ ಗಳನ್ನು ಧರಿಸಿ ಬಂಗಾರದ ಆಯುಧಗಳನ್ನು ಕತ್ತಿಯನ್ನು ಕೈಯಲ್ಲಿ ಹಿಡಿದು ಕೊಂಡು ಕುದುರೆಯಮೇಲೆ ಹೋಗುವದನ್ನು ಜೂದರು ನೋಡಿದರು ಅವರು ಬಹಳ ಸಂತೋಷಪಟ್ಟರು. ತಮ್ಮನ್ನು ರಕ್ಷಿಸಲು ಸರ್ವೇಶ್ವರನು ಇವರನ್ನು ಕಳಿಸಿದರೆಂದು ತಿಳಿದು ದೇವರಿಗೆ ಮೇಲರಿತ ಸ್ತೋತ್ರವನ್ನು ಸಲ್ಲಿಸಿ ಧೈರ್ಯ ದಿಂದ ಹೊರಟರು. ಇವರ ಸೈನ್ಯವು ಸಿರಿಯಾದೇಶದ ಸೈನ್ಯದ ಮೇಲೆ ಬಿದ್ದು ಅವರನ್ನು ಸೋಲಿಸಿ ಓಡಿಸಿದರು. ಸಿರಿಯನರು ಕೊಲ್ಲಲ್ಪಡದಿದ್ದರೂ ಅಂಜಿಕೆಯಿಂದ ಓಡಿ ಹೋದರು.

ಈ ಪ್ರಕಾರವಾಗಿ ಜೂದಾಸನು ಅನೇಕ ಯುದ್ಧಗಳನ್ನು ಮಾಡಿ ಕೊನೆಗೆ ತನ್ನ ರಾಜ್ಯವನ್ನು ಪರದೇಶಸ್ಥರ ಕೈಯಿಂದ ಬಿಡುಗಡೆ ಮಾಡಿದನು. ಈತನ ಮರಣಾನಂತರ ಇವನ

ತಮ್ಮನವರು ಸೈನ್ಯಾಧಿ ಪತಿಗಳಾಗಿದ್ದರು.

ಅನೇಕ ವರ್ಷಗಳ ವರೆಗೆ ಜುದಯಾ ದೇಶದಲ್ಲಿ ಸಮಾಧಾನವಿತ್ತು. ಆದ್ದರಿಂದ ತಿರುಗಿ ಅಲ್ಲಿಯು ಜನಸಂಖ್ಯೆ ಹೆಚ್ಚಾಗಹತ್ತಿತು. ಆದರೆ ಕೊನೆಗೆ ಆಳಿದ ಸೇನಾಧಿಪತಿಗಳು ದೇವರನ್ನು ಮರೆತುಬಿಟ್ಟರು. ಜನರೆಲ್ಲರೂ ದೇವಕಲ್ಪನೆಗಳನ್ನು ಮೀರಲಾರಂಭಿಸಿದರು. "ಅವರು ಒಬ್ಬರೇ ದೇವರನ್ನು ಆರಾಧಿಸುತ್ತೇವೆ. ಅವರ ಕಟ್ಟಳೆಗಳನ್ನು ಎಳ್ಳಷ್ಟಾದರೂ ಮೀರುವದಿಲ್ಲ ಅವರನ್ನು ಹೆಚ್ಚಾಗಿ ಪ್ರೇಮಿಸುತ್ತೇವೆ" ಎನ್ನುತ್ತಿದ್ದರು. ಆದರೆ ಅವರ ಹೃದಯಗಳಲ್ಲಿ ಕಪಟ ಭಕ್ತಿಯಿತ್ತು. ತಮ್ಮ ದೇವರನ್ನು ತ್ಯಜಿಸಿ ಬಿಟ್ಟಿದ್ದರು. ಅವರು ನಿಜವಾಗಿ ದೇವರನ್ನು ಪ್ರೇಮಿಸುತ್ತಿದ್ದಿಲ್ಲ.

ಸರ್ವೇಶ್ವರನು ತಮ್ಮನ್ನು ತಾವೇ ತೋರಿಸಿ ಜೂದರಿಗೆ ಬೇಕಾದ ಎಲ್ಲಾ ಸಹಾಯಗಳನ್ನು ಮಾಡಿದ್ದರು. ಇವರು ಈ ಪ್ರಕಾರವಾಗಿ ಅವರನ್ನು ಮರೆತುಬಿಟ್ಟರು.

ಜೂದಯಾ ದೇಶದ ಸುತ್ತಲೂ ಇದ್ದ ಬೇರೆ ಪಟ್ಟಣಗಳಲ್ಲಿದ್ದ ಎಲ್ಲ ಜನರು ಸಹ ಪಾಪದಲ್ಲಿ ಮುಳುಗಿದ್ದರು. ಇವರು ಮೂರ್ತಿಗಳನ್ನು ಪೂಜಿಸುತ್ತಿದ್ದರು. ಕಳ್ಳ ದೇವರುಗಳನ್ನು ಆರಾಧಿಸುತ್ತಿದ್ದರು. ಅನೇಕ ದುಷ್ಕಾರ್ಯಗಳನ್ನು ಮಾಡುತ್ತಿದ್ದರು. ಇವರ ಹೃದಯಗಳು ಕಪಟದಿಂದ ತುಂಬಿದ್ದವು. ಆದ್ದರಿಂದ ಇವರಿಗೆ ಒಳ್ಳೇಮಾರ್ಗವನ್ನು ತೋರಿಸುವವರು ಅವಶ್ಯವಾಗಿತ್ತು. ಮತ್ತು ಜಾಕೋಬನ ಕಾಲದಲ್ಲಿ ಹೇಳಿದ ದೀರ್ಘದರ್ಶನವು ಅಂದರೆ ಆತನು ತನ್ನ ಮಗನಾದ ಜೂದಾಸನಿಗೆ ಹೇಳಿದ ವಾರ್ತೆ

ಯು ನೆರವೇರಬೇಕಾಗಿತ್ತು. ಏನಂದರೆ, "ನಿನ್ನ ವಂಶದಲ್ಲಿ ಲೋಕವನ್ನು ರಕ್ಷಿಸಲು ಲೋಕರಕ್ಷಕನು ಜನ್ಮಿಸುವರು" ಎಂಬದು.

ತರುವಾಯ ಜೂದರು ಸಹ ತಮ್ಮೊಳಗೆ ತಾವು ಜಗಳಾಡಲು ಪ್ರಾರಂಭಿಸಿದರು. ಆಗ ರೋಮದವರು ಬಂದು ಈ ದೇಶವನ್ನು ಹಿಡಿದು ಆಳಹತ್ತಿದರು. ಜೂದರು ತಮ್ಮ ದೇಶದಲ್ಲಿಯೇ ತಾವು ಇದ್ದು ಅಲ್ಲಿಯೇ ನಿವಾಸಿಸಹತ್ತಿದರು.

ಅನ್ಯ ದೇಶಸ್ಥನಾದ ಹೆರೋದನು ಜೂದೆಯಾ ದೇಶವನ್ನು ಆಳಹತ್ತಿದನು. ಈತನಿಂದ ರಾಜ್ಯವನ್ನು ಕಸೆದುಕೊಳ್ಳಲು ಯಾವ ಜೂದ ಜನರು ತಲೆ ಯೆತ್ತಲಿಲ್ಲ. ಜಾಕೋಬನು ಹೇಳಿದ ದೇವದರ್ಶನವು ನೆರವೇರಿತು. ಯಾವದೆಂದರೆ "ಇವನ ಗೋತ್ರಕ್ಕೆ ರಾಜ್ಯಾಧಿಕಾರವು ಬಂದು ಒಂದು ಕಾಲಕ್ಕೂ ಅದನ್ನು ಬಿಟ್ಟು ಅಗಲದೆ ಇರುವದು." ಈ ಕಾಲದಲ್ಲಿಯೇ ನಮ್ಮ ಕರ್ತರಾದ ಜೇಸುನಾಥರು ಮನುಷ್ಯಾವತಾರ ಯೆತ್ತಿ, ಮನುಷ್ಯರನ್ನು ರಕ್ಷಿಸಲು ಲೋಕಕ್ಕೆ ಬಂದರು.

## ಹೊಸ ವೇದವು.

### 46 ಸ್ನಾಪಕ ಅರುಳಪ್ಪರ ಜನನವನ್ನು ಕುರಿತು

ಹೆರೋದನು ಜೂದೆಯಾ ದೇಶವನ್ನು ಆಳುತ್ತಿದ್ದಾಗ ಜೆರೂಸಲೇಮ ಪಟ್ಟಣದ ಸಮೀಪದಲ್ಲಿದ್ದ ಒಂದು ಹಳ್ಳಿಯೂರಿನಲ್ಲಿ ಜಕರಿಯಾಸನೆಂಬ ಗುರುವು, ಆತನ ಹೆಂಡತಿಯಾದ ಎಲಿಜಬೇತಮ್ಮನ ಸಂಗಡ ಜೀವಿಸುತ್ತಿದ್ದನು. ಇವರಿಬ್ಬರು ಬಹಳ ಒಳ್ಳೇಯವರು, ಮತ್ತು ನೀತಿವಂತರಾಗಿದ್ದರು. ಇವರು ದೇವರ ಎಲ್ಲ ಕಟ್ಟಳೆಗಳನ್ನು ಸರಿಯಾಗಿ ಅನುಸರಿಸುತ್ತಿದ್ದರು.

ದೇವರಲ್ಲಿ ವಿಶ್ವಾಸವಿಟ್ಟು ತಮಗೆ ಒಬ್ಬ ಮಗನನ್ನು ಕೊಡಬೇಕೆಂದು ಪ್ರತಿದಿನ ಪ್ರಾರ್ಥಿಸುತ್ತಿದ್ದರು. ಯಾಕಂದರೆ ಅವರು ಮುದುಕರಾಗುತ್ತಿದ್ದರು. ಅವರಿಗೆ ಪುತ್ರಸಂತಾನವಿರಲಿಲ್ಲ.

ಒಂದು ದಿನ ಧೂಪವನ್ನು ಬೀಸುವ ಪಾಳಿಯು ಜಕರಿಯಾಸನಿಗೆ ಬಂತು. ಆತನು ಒಳಗೆ ಒಬ್ಬನೇ ಇದ್ದನು. ಬಾಕಿ ಜನರೆಲ್ಲರೂ ಹೊರಗೆ ಜಪ ಮಾಡುತ್ತಿದ್ದರು. ಆಗ ಇವನು ಧೂಪವನ್ನು ಒಂದು ಬಂಗಾರದ ಒಟ್ಟಿಲಲ್ಲಿ ಹಾಕಿಕೊಂಡು ಹೋಗಿ ಪೀಠದ ಮೇಲೆ ಅದನ್ನು ಹರವಿ ಸುಡಹತ್ತಿದನು.

ಆಗ ಅಕಸ್ಮಾತ್ತಾಗಿ ಒಬ್ಬ ದೇವದೂತನು ಪೀಠದ ಬಲಗಡೆ ದರ್ಶನವಾದನು. ಆತನು ಜಕರಿಯಾಸನನ್ನು ನೋಡಿ "ಕರ್ತನು ನಿನ್ನ ಪ್ರಾರ್ಥನೆಯನ್ನು ಕೇಳಿದನು. ನಿನಗೆ ಒಬ್ಬ ಮಗನನ್ನು ದಯಪಾಲಿಸುವನು. ಆತನಿಗೆ ಅರಳಪ್ಪನೆಂದು ಹೆಸರು ಇಡಬೇಕು. ಆತನು ನಿಮಗೆ ಬಹಳ ಸಂತೋಷವನ್ನು ಬರಮಾಡುವನು. ತನ್ನ ಜೀವದ ಕಾಲದಲ್ಲೆಲ್ಲ ಆಶೀರ್ವಾದಿಸಲ್ಪಟ್ಟವನಾಗಿರುವನು. ದೇವರ ಸಲುವಾಗಿ ಅನೇಕ ದೊಡ್ಡ ಕಾರ್ಯಗಳನ್ನು ಮಾಡುವನು. ಅನೇಕ ಜನರನ್ನು ದೇವರ ಕಡೆಗೆ ಮನಸ್ಸು ತಿರುಗಿಸುವನು. ಮತ್ತು ತಮ್ಮ ಕರ್ತನನ್ನು ಸ್ವೀಕರಿಸಲು ಜನರನ್ನು ಸಿದ್ಧಪಡಿಸುವನು" ಎಂದು ಹೇಳಿದನು.

ಈ ಮಾತನ್ನು ಕೇಳಿ ಜಕರಿಯಾಸನು ಅಪನಂಬಿಕೆಪಟ್ಟು ಆಶ್ಚರ್ಯದಿಂದ "ನನ್ನ ಹೆಂಡತಿಯಾದ ಎಲಿಜಬೇತಳು ಮುದುಕಿಯಾಗಿರುತ್ತಾಳಲ್ಲ, ಹ್ಯಾಗೆ ಮಗನನ್ನು ಪಡೆಯುವಳು" ಎಂದು ಕೇಳಿದನು.

ಆಗ ದೇವದೂತನು ಹೇಳಿದ್ದೇನಂದರೆ “ ನಾನು ದೇವ ದೂತನಾದ ಗಾಬ್ರಿಯೇಲನು. ದೇವರು ನಿನಗೆ ಈ ಸಂಗತಿ ಯನ್ನು ತಿಳಿಸುವದಕ್ಕಾಗಿ ನನ್ನನ್ನು ಇಲ್ಲಿಗೆ ಕಳುಹಿಸಿದರು. ಆದರೆ ನೀನು ನನ್ನ ಮಾತನ್ನು ನಂಬಲಿಲ್ಲ. ಆದಕಾರಣ ನೀನು ಶಿಕ್ಷಿಸಲ್ಪಡುವಿ. ನಾನು ನಿನಗೆ ತಿಳಿಸಿದದೆಲ್ಲ ನೆರವೇರುವವರೆಗೆ ನೀನು ಮೂಕನಾಗಿರುವಿಯಾಗಲಿ ” ಎಂದು ಹೇಳಿ ಹೊರಟು ಹೋದನು.

ದೇವಾಲಯದ ಹೊರಭಾಗದಲ್ಲಿದ್ದ ಜನರೆಲ್ಲರೂ ಪ್ರಾರ್ಥ ನೆಯನ್ನು ಮಾಡುತ್ತಿದ್ದರು. ಜಕರಿಯಾಸನು ಲಗು ಹೊರಗೆ ಬಾರದ್ದರಿಂದ ಅವರು ಆಶ್ಚರ್ಯಪಟ್ಟರು. ಕೊನೆಗೆ ಆತನು ಹೊರಗೆ ಬಂದನು. ಆದರೆ ಮಾತಾಡದೆ ಇದ್ದನು. ಆದಕಾರಣ ತಾನು ಒಂದು ದರ್ಶನವನ್ನು ಕಂಡನೆಂದು ಬರೀ ಸಂಜ್ಞೆಯಿಂದ ತೋರಿಸಿದನು. ಆತನು ಗಾಬ್ರಿಯೇಲ್ ದೂತನ ಮಾತನ್ನು ನಂಬದ ಕಾರಣ ಅವನ ಮಗನು ಜನ್ಮಿಸುವವರೆಗೆ ಮೂಕನಾಗಿದ್ದನು.

ಜಕರಿಯಾಸ ಮತ್ತು ಎಲಿಜಾಬೇತಮ್ಮನ ಮಗನು ದೊಡ್ಡ ವನಾದ ಮೇಲೆ ದೇವಕುಮಾರನ ಮುಂದೆ ಜನರಿಗೆ ದಾರಿ ತೋರಿಸುತ್ತಿದ್ದನು. ಜೇಸುನಾಥರನ್ನು ಕುರಿತು ಬೋಧಿಸು ತ್ತಿದ್ದನು. ಈತನೇ ಸ್ನಾಪಕ ಅರಳಪ್ಪನೆಂದು ಕರೆಯಲ್ಪಡು ತ್ತಿದ್ದನು.

## 47 ಗಾಬ್ರಿಯೇಲ ದೂತನು ಕನ್ಯಮರಿಯಮ್ಮನಿಗೆ ಹೇಳಿದ ಮಂಗಳವಾರ್ತೆ

ಗಲೀಲೆಯ ದೇಶದ ನಜರೇತೆಂಬ ಊರಲ್ಲಿ ಮರಿಯಳೆಂಬ

ಹೆಸರುಳ್ಳ ಒಬ್ಬ ಯೌವನ ಸ್ತ್ರೀ ಇದ್ದಳು. ಈಕೆಯು ಜಕರಿಯಾಸನ ಹೆಂಡತಿಯಾದ ಎಲಿಜಬೇತಮ್ಮನಿಗೆ ಬಂಧುವಾಗಿದ್ದಳು.

ಮರಿಯಮ್ಮನು ಮಹಾಪರಿಶುದ್ಧಳಾಗಿದ್ದಳು. ಈಕೆಯು ಎಂದಿಗೂ ಒಂದು ಸಣ್ಣ ಪಾಪವನ್ನಾದರೂ ಮಾಡಿದ್ದಿಲ್ಲ. ನಮ್ಮ ನಸ್ಸಿನ ಹಾಗೆ ಪರಿಶುದ್ಧಳೂ ಒಳ್ಳೇಯವಳೂ ಆಗಿದ್ದಳು. ಮರಿಯಮ್ಮನು ಜೋಸೇಫನೆಂಬ ಒಬ್ಬ ಬಡಿಗನನ್ನು ಮದುವೆಯಾಗಿದ್ದಳು. ಈಕೆಯನ್ನು ಕಾಪಾಡುವದಕ್ಕಾಗಿ ದೇವರು ಆತನನ್ನು ಆರಿಸಿಕೊಂಡಿದ್ದರು.

ಜಕರಿಯಾಸನಿಗೆ ದೇವದೂತನು ದರ್ಶನವಾದ ಆರು ತಿಂಗಳ ತರುವಾಯ ಗಾಬ್ರಿಯೇಲ್ ದೂತನು ದೇವರಿಂದ ಮರಿಯಮ್ಮನ ಬಳಿಗೆ ಕಳುಹಿಸಲ್ಪಟ್ಟನು. ಮರಿಯಮ್ಮನು ತನ್ನ ಜಪಾಲಯದಲ್ಲಿ ಜಪಮಾಡುತ್ತ ದೇವರ ಉಪಕಾರವನ್ನು ಕುರಿತು ಧ್ಯಾನಿಸುತ್ತಿದ್ದಳು. ಅಕಸ್ಮಾತ್ತಾಗಿ ದೇವದೂತನು ದರ್ಶನವಾಗಿ ಈ ವಾರ್ತೆಗಳನ್ನು ಹೇಳಿದನು. “ ದೇವಪ್ರಸಾದದಿಂದ ಪರಿಪೂರ್ಣವಾದವಳೇ ನಮಃ, ಕರ್ತರು ನಿಮ್ಮೊಡನೆ, ಸ್ತ್ರೀಯರೊಳಗೆ ಆಶೀರ್ವದಿಸಲ್ಪಟ್ಟವಳು ನೀವೆ ಎಂದನು.

ಇದನ್ನು ಕೇಳಿ ಮರಿಯಮ್ಮನು ಬಹಳ ಗಾಬ್ರಿ ಪಟ್ಟಳು. ಆದರೆ ಬಹಳ ದೀನತೆಯುಳ್ಳವಳಾದ್ದರಿಂದ, ಯಾಕೆ ದೇವದೂತನು ತನಗೆ ಹೀಗೆ ಹೊಗಳಿದನೆಂದು ಆಶ್ಚರ್ಯಪಡಹತ್ತಿದಳು.

ಆಗ ದೇವದೂತನು ಪ್ರತ್ಯುತ್ತರವಾಗಿ ದೇವರು ನಿನ್ನ ಒಳ್ಳೆಯತನವನ್ನು ಪರಿಶುದ್ಧತನವನ್ನು ಕಂಡು ಬಹಳ ಸಂತೋಷಪಟ್ಟರು. ಆದ್ದರಿಂದ ನಿನ್ನನ್ನು ಆಶೀರ್ವದಿಸಿರುತ್ತಾರೆ. ಸ್ಪಿರಿತು ಸಾಂಕ್ತುವಾದವರು ನಿನ್ನ ಮೇಲೆ ಬರುವರು. ಆಗ ನಿಮ್ಮ

ಲ್ಲಿ ಒಬ್ಬ ಗಂಡು ಮಗು ಹುಟ್ಟುವದು. ಅದಕ್ಕೆ ಜೇಸು ಎಂಬ ಹೆಸರನ್ನು ಇಡಬೇಕು. ಆತನು ದೇವರ ಮಗನೆಂದು ಕರೆಯಲ್ಪಡುವನು. ದೀರ್ಘದರ್ಶಿಗಳು ತಿಳಿಸಿದ ಹಾಗೆ ಆತನು ಒಬ್ಬ ದೊಡ್ಡ ರಾಜನಾಗುವನು. ಆತನ ರಾಜ್ಯವು ಎಂದಿಗೂ ಮುಗಿಯಲಿಕ್ಕಿಲ್ಲ.

ಮರಿಯಮ್ಮನು ವಿಧೇಯತೆಯುಳ್ಳವಳಾಗಿದ್ದಳು. ಸರ್ವೇಶ್ವರನೇ ತನ್ನ ಚಿತ್ತವನ್ನು ತಿಳಿಸಲು ತನ್ನ ಬಳಿಗೆ ಗಾಬ್ರಿಯೇಲ ದೂತನನ್ನು ಕಳುಹಿಸಿದನೆಂದು ಆಕೆಗೆ ತಿಳಿದಿತ್ತು. ಆದ್ದರಿಂದ ಮರಿಯಮ್ಮನು "ಪ್ರತ್ಯುತ್ತರವಾಗಿ" ಇಗೋ ಕರ್ತರಿಗೆ ಅಡಿಮೆಯಾದವಳು. ನಿಮ್ಮ ಮಾತಿನ ಪ್ರಕಾರ ನನಗಾಗಲಿ " ಎಂದಳು.

ಮರಿಯಮ್ಮನು ಈ ಪ್ರತ್ಯುತ್ತರವನ್ನು ಕೊಟ್ಟ ಕೂಡಲೇ ದೇವರ ತಾಯಿಯಾದಳು, ಎರಡನೇ ವ್ಯಕ್ತಿಯಾದ ಪುತ್ರನಾದ ಸರ್ವೇಶ್ವರನು ನಮ್ಮ ಹಾಗೆ ಒಂದು ಆತ್ಮವನ್ನು ಶರೀರವನ್ನು ತೆಗೆದುಕೊಂಡು, ಮನುಷ್ಯರಾದರು. ಇದು ಒಂದು ಪರಮ ರಹಸ್ಯವು. ಇದನ್ನು ನಾವು ಕಂಡುಹಿಡಿಯಲಾರೆವು. ಆದರೆ ನಾವು ಇದನ್ನು ನಂಬುತ್ತೇವೆ. ಯಾಕೆಂದರೆ ನಮ್ಮ ಕರ್ತರು ಸತ್ಯ ತಿರುಸಭೆಯ ದ್ವಾರ ಬೋಧಿಸುತ್ತಾರೆ. ಈ ಪರಮ ರಹಸ್ಯವು ಮನುಷ್ಯವತಾರವೆಂದು ಅನ್ನಲ್ಪಡುತ್ತದೆ. ಇದ್ದರಿಂದ ದೇವರ ಮಗನು ಮನುಷ್ಯನಾಗಿ ನಮ್ಮೊಂದಿಗೆ ಜೀವಿಸಿದ್ದರು. ಗಾಬ್ರಿಯೇಲ ದೂತನು ದೇವ ಮಾತೆಯ ಹತ್ತಿರ ಬಂದದ್ದು ಮಂಗಳವಾರ್ತೆಯೆಂದು ಕರೆಯಲ್ಪಡುತ್ತದೆ. ಯಾಕಂದರೆ ನಮ್ಮನಸ್ಸಿ ಜೇಸುನಾಥರ

ಜನನೋತ್ಸವದ ಶುಭವಾರ್ತೆಯನ್ನು ತಿಳಿಸಿದನು. ಈ ಮಂಗಳ ವಾರ್ತೆಯ ಹಬ್ಬವನ್ನು ಪ್ರತಿವರ್ಷ ಮಾರ್ಚ್ ತಿಂಗಳ ೨೫ನೇ ತಾರೀಖಿನ ದಿವಸ ಕೊಂಡಾಡಲ್ಪಡುತ್ತದೆ. ಇದು ಗಾಬ್ರಿಯೇಲ ದೂತನು ಜೇಸುನಾಥರ ಮಾತೆ ನಮ್ಮ ಎಲ್ಲ ಕ್ರೀಸ್ತರ ತಾಯಿಯಾದ ಮರಿಯಮ್ಮನ ಹತ್ತಿರ ಬಂದದ್ದನ್ನು ನೆನಪು ಮಾಡುತ್ತದೆ.

## 48. ಅರ್ಚ್ಯ ಕನ್ಯಮರಿಯಮ್ಮನು ಎಲಿಸಬೇತಮ್ಮನನ್ನು ಸಂಧಿಸಿದ್ದು.

ಎಲಿಜಬೇತಮ್ಮನು ತನ್ನ ವೃದ್ಧಾಪ್ಯದಲ್ಲಿ ಒಬ್ಬ ಮಗನನ್ನು ಹೆರುವಳೆಂದೂ ದೇವರಿಗೆ ಅಸಾಧ್ಯವಾದ ಕಾರ್ಯವು ಒಂದೂ ಇಲ್ಲವೆಂದೂ ಗಾಬ್ರಿಯೇಲ ದೂತನು ದೇವಮಾತೆಗೆ ತಿಳಿಸಿದ್ದನು. ಆದ್ದರಿಂದ ಮರಿಯಮ್ಮನು ತನ್ನ ಬಂಧುವನ್ನು ಸಂಧಿಸಬೇಕೆಂದು ನಿಶ್ಚಯಮಾಡಿಕೊಂಡಳು. ಆಕೆ ಗುಡ್ಡಗಳಲ್ಲಿಯೂ ಕಂದರಗಳಲ್ಲಿಯೂ ಪ್ರಯಾಣವಾಗಿ ತನ್ನ ಬಂಧುವಿನ ಮನೆಗೆ ಹೋದಳು. ಈ ಪ್ರಯಾಣವು ಬಹಳ ಕಷ್ಟವಾಗಿದ್ದರೂ ಮರಿಯಮ್ಮನು, ಎಲಿಜಬೇತಮ್ಮನ ಸಹಾಯವಾಗಿ ತಾಳ್ಮೆಯಿಂದ ಸಹಿಸಿಕೊಂಡಳು.

ಮರಿಯಮ್ಮನು ತನ್ನ ಮನೆಯನ್ನು ಪ್ರವೇಶಿಸಿದಾಗ ಎಲಿಜಬೇತಮ್ಮನು ಕಂಡು ಬಹಳ ಆಶ್ಚರ್ಯಪಟ್ಟಳು. ಆಕೆಯಲ್ಲಿ ಒಂದು ವಿಧವಾದ ಸಂತೋಷವುಂಟಾಯಿತು. ಮತ್ತು ಮರಿಯಮ್ಮನಲ್ಲಿ ನಡೆದ ಸಂಗತಿಗಳನ್ನು ಸ್ಪಿರಿತುಸಾಂತುವಿನಿಂದ ತಿಳಿದುಕೊಂಡಳು.

ಎಲಿಜಬೇತಮ್ಮನು ಸ್ಪಿರಿತು ಸಾಂಕ್ತುವಿನಿಂದ ತುಂಬಿದವಳಾಗಿ ಮರಿಯಮ್ಮನನ್ನು ನೋಡಿ ಹೀಗೆಂದು ನುಡಿದಳು. "ಸ್ತ್ರೀಯರೊಳಗೆ ಆಶೀರ್ವದಿಸಲ್ಪಟ್ಟವಳು ನೀವೇ. ನಿಮ್ಮ ಉದರದ ಫಲವಾದ ಜೇಸು ಆಶೀರ್ವದಿಸಲ್ಪಟ್ಟವರು ಹೌದೇ." ತರುವಾಯ ಎಲಿಜಬೇತಮ್ಮನು ತನ್ನನ್ನು ತಾನು ತಗ್ಗಿಸಿಕೊಂಡು, "ನನ್ನ ಕರ್ತರ ತಾಯಿಯೇ! ನನ್ನನ್ನು ಸಂಧಿಸ ಬರಲು ನಾನು ಯಾರು? ಎಂದಳು.

ಈ ಮಾತುಗಳನ್ನು ಕೇಳಿ ಮರಿಯಮ್ಮನು ಮಾಜ್ಞಿಪಿಕಾತ್ ಎಂಬ ಸಂಗೀತದಿಂದ ದೇವರನ್ನು ಸ್ತುತಿಸಿದಳು. ಏನಂದರೆ "ನನ್ನ ಆತ್ಮವಾದದ್ದು ಆಳಿದವರನ್ನು ಮಹಿಮೆ ಪಡಿಸುತ್ತದೆ. ನನ್ನ ರಕ್ಷಣ್ಯವಾದ ಸರ್ವೇಶ್ವರನ ಬಳಿಯಲ್ಲಿ ನನ್ನ ಆತ್ಮವು ಆನಂದ ಉತ್ಸಾಹ ಪಡುತ್ತದೆ. ಯಾಕಂದರೆ ಅವರು ತಮ್ಮ ಅಡಿಮೆಯಾದವಳ ದೀನತ್ವವನ್ನು ಕೃಪೆ ಕಟಾಕ್ಷದಿಂದ ನೋಡಿದರು. ಈಗಿನಿಂದ ಎಲ್ಲ ಜನಾಂಗಗಳು ನನ್ನನ್ನು ಭಾಗ್ಯವತಿಯೆಂದು ಕರೆಯುವವು.

ಗಾಬ್ರಿಯೇಲ ದೂತನು ಹೇಳಿದ ಮಂಗಳವಾರ್ತೆಯು ಎಲಿಜಬೇತಮ್ಮನು ಹೇಳಿದ ಮಾತುಗಳು ಈಗ ಎಲ್ಲ ಕತೋಲಿಕ ಜನರು ಹೇಳುವ "ನಮೋದೇವ ಮಂತ್ರದ ಮೊದಲನೇ ಭಾಗವಾಗಿದೆ. ಈ ಜಪದ ಕೊನೆಯ ಭಾಗದಲ್ಲಿ ಹೇಳಿದ ಚಂದವಾದ ಜಪವು ತಿರುಸಭೆಯಿಂದ ಸೇರಿಸಲ್ಪಟ್ಟಿದೆ.

ಮರಿಯಮ್ಮನು ತನ್ನ ಬಂಧುವಿನ ಸಂಗಡ ಮೂರು ತಿಂಗಳವರೆಗೆ ಇದ್ದಳು. ಅರ್ಚಶಿಷ್ಟಸ್ನಾಪಕ ಅರಳಪ್ಪರು ಹುಟ್ಟುವ ತನಕ ಎಲಿಜಬೇತಮ್ಮನಿಗೆ ಬಹಳ ಸಹಾಯುಮಾಡುತ್ತ ಸಮ್ಮ

ನನ್ನು ಹೇಳಿದ ಪ್ರಕಾರ ಜರಗುವವರೆಗೆ ಅವರ ಮನೆಯಲ್ಲಿದ್ದಳು.

ಮಗುವು ಹುಟ್ಟಿದಾಗ ಅನೇಕ ಮಂದಿ ಬಂಧುಗಳು ಸ್ನೇಹಿತರು ಮನೆಗೆ ಬಂದರು. ಕೂಸಿಗೆ ಯಾವ ಹೆಸರನ್ನು ಕೊಡಬೇಕೆಂದು ಕೇಳಿದರು. ತಂದೆಯ ನಂತರ ಇವನನ್ನು ಸಹ ಜಕರಿಯಾಸನೆಂದು ಕರೆಯಲು ಯೋಚಿಸಿದರು. ಅವರು ತನ್ನ ಮಗನಿಗೆ ಯಾವ ಹೆಸರನ್ನು ಕೊಡಬೇಕೆಂದು ಜಕರಿಯಾಸನನ್ನು ಕೇಳಲು ಆತನು ಮೂಕನಾಗಿದ್ದದರಿಂದ ಒಂದು ಕಟ್ಟಿಗೆ ಹಲಿಗೆಯ ಮೇಲೆ ಜ್ವಾನ್ನೆಸ್ ಎಂದು ಬರೆದನು. ಕೂಡಲೇ ಜಕರಿಯಾಸನು ಬಾಯಿ ತೆರೆದು ಮಾತಾಡಲಾರಂಭಿಸಿದನು.

ಈ ಬಾಲಕನಾದ ಜ್ವಾನ್ನೆಸನು ದೊಡ್ಡವನಾಗಿ ಬಹಳ ಪವಿತ್ರತೆಯುಳ್ಳವನಾದನು. ಈತನು ತನ್ನ ಕೆಲಸವನ್ನು ಮಾಡುವದಕ್ಕೆ ಸಮಯವು ಬರುವವರೆಗೆ ಅಡವಿಯಲ್ಲಿ ಹೋಗಿ ಜೀವಿಸಿದನು.

## 49. ಕರ್ತರು ಹುಟ್ಟಿದ ವರ್ತಮಾನ.

ಆ ಕಾಲದಲ್ಲಿ ರೋಮಾನರ ಚಕ್ರವರ್ತಿಯಾದ ಅಗುಸ್ತುಸ್ ಸೀಜರ್ ಎಂಬಾತನು ಬಹಳ ಪರಾಕ್ರಮಶಾಲಿಯಾಗಿದ್ದು ಲೋಕದ ಅನೇಕ ದೇಶಗಳನ್ನು ಆಳುತ್ತಿದ್ದನು ಈತನು ಜೂದರನ್ನು ಸಹ ಆಳುತ್ತಿದ್ದನು. ತನ್ನ ರಾಜ್ಯದ ಜನಸಂಖೆ ಎಷ್ಟು ಇದೆಯೆಂದು ತಿಳಕೊಳ್ಳುವದಕ್ಕಾಗಿ, ಎಲ್ಲ ಜನರು ತಮ್ಮ ಸ್ವಂತ ದೇಶಕ್ಕೆ ಹೋಗಿ ತನ್ನ ಸ್ವಗೋತ್ರದಲ್ಲಿ ಹೆಸರನ್ನು ಬರೆದು ಕೊಡಬೇಕಾಗಿತ್ತು.

ಮರಿಯಮ್ಮನು ಮತ್ತು ಜೋಸೆಫನವರು, ಗಲೀಲೆಯ ದೇಶದ ನಜರೇತ್ ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದರು. ಆದರೆ ಅವರು ದಾವೀದರಾಜನ ವಂಶದವರಾಗಿದ್ದರು. ಆದ್ದರಿಂದ ದಾವೀದನ ಪಟ್ಟಣವಾದ ಬೆತ್ಲೆಹೇಮ್ ಊರಿಗೆ ಹೋಗಬೇಕಾಗಿತ್ತು.

ಆಗ ಡಿಸೆಂಬರ್ ತಿಂಗಳವಾದ್ದರಿಂದ ಬಹಳ ಚಳಿಯಿತ್ತು. ಬೆತ್ಲೆಹೇಮ್ ಗ್ರಾಮವು ನಜರೇತಿನಿಂದ ಬಹಳ ದೂರದಲ್ಲಿತ್ತು. ಆದ್ದರಿಂದ ಮರಿಯಮ್ಮನು ಜೋಸೆಫನು ಚಕ್ರವರ್ತಿಗೆ ವಿಧೇಯಿಸುವದಕ್ಕಾಗಿ ಪ್ರಯಾಣವಾದರು. ಯಾಕಂದರೆ ಇದೆಲ್ಲವೂ ದೇವರ ಚಿತ್ತವೆಂದು ಅವರಿಗೆ ಗೊತ್ತಿತ್ತು.

ಕೊನೆಗೆ ಮರಿಯಮ್ಮನು ಮತ್ತು ಜೋಸೆಫನು ಬೆತ್ಲೆಹೇಮ್ ಊರನ್ನು ರಾತ್ರಿಯ ಸಮಯದಲ್ಲಿ ಸೇರಿದರು. ಬಹಳ ದೂರ ಪ್ರಯಾಣವನ್ನು ಮಾಡಿದ್ದರಿಂದ ಬಹಳ ಆಯಾಸಗೊಂಡಿದ್ದರು, ಆದ್ದರಿಂದ ಎಲ್ಲಿಯಾದರೂ ಇಳಕೊಳ್ಳುವವಕ್ಕೆ ಜಾಗವನ್ನು ಹುಡುಕಲಾರಂಭಿಸಿದರು, ಆದರೆ ಬೆತ್ಲೆಹೇಮಿನ ತುಂಬ ಜನರು ಕಿಕ್ಕಿರಿದು ಹೋಗಿದ್ದರು. ಯಾಕಂದರೆ, ಅಲ್ಲಿಗೆ ಎಲ್ಲರೂ ತಮ್ಮ ಹೆಸರುಗಳನ್ನು ಬರೆದುಕೊಡಲು ಬಂದಿದ್ದರು.

ಕಟ್ಟಕಡೆಗೆ ಜೋಸೆಫರು ಒಂದು ಛತ್ರದಲ್ಲಿ ಸ್ವಲ್ಪ ಜಾಗವನ್ನು ಕೇಳಿದರು. ಆದರೆ ಛತ್ರದ ಯಜಮಾನನು ಅವರನ್ನು ಹಿಂದಕ್ಕೆ ಕಳುಹಿಸಿದನು. ಕೊನೆಗೆ ಒಂದು ದನದ ಕೊಟ್ಟಿಗೆಯ ಸಮೀಪ ಬಂದರು. ಆಗ ಚಳಿಗಾಲವಿದ್ದದರಿಂದ ಅಲ್ಲಿ ಕುರಿಗಳನ್ನು, ದನಗಳನ್ನು ಕಟ್ಟುತ್ತಿದ್ದರು. ಆದರೂ ಮರಿಯಮ್ಮನು ಮತ್ತು ಜೋಸೇಫನವರು ಅಲ್ಲಿ ಇಳಕೊಂಡರು.

ಆ ರಾತ್ರಿ ಜೇಸುನಾಥರು ಅಲ್ಲಿ ಜನ್ಮಿಸಿದರು. ಆತನ ತಾಯಿ ಮಗುವನ್ನು ಹರೆದ ಬಟ್ಟೆಗಳಲ್ಲಿ ಸುತ್ತಿ ಗೋದಲ್ಲಿಯಲ್ಲಿ ಹುಲ್ಲಿನಮೇಲೆ ಮಲಗಿಸಿದಳು. ತರುವಾಯ ತಾನೂ ಜೋಸೇಫರೂ ಕೂಡಿ ಈ ದಿವ್ಯ ಬಾಲರನ್ನು ಆರಾಧಿಸಿದರು. ಇದೇ ಮೊಟ್ಟ ಮೊದಲನೇ ಕ್ರಿಸ್‌ಮಸ್ ಹಬ್ಬವು.

ಈ ಪ್ರಕಾರವಾಗಿ ದೇವಕುಮಾರನು ಮನುಷ್ಯನಾಗಿ ಮಾಡಲ್ಪಟ್ಟನು. ಈತನು ಈ ಲೋಕಕ್ಕೆ ಇಳಿದು ಬಂದು ಮರಿಯಮ್ಮನಲ್ಲಿ ಹುಟ್ಟಿದನು. ಆಗ ಈ ಲೋಕದಲ್ಲಿ ಮರಿಯಮ್ಮ ಮತ್ತು ಜೋಸೇಫನು ತಪ್ಪ ಯಾರೂ ಆತನನ್ನು ಸ್ವೀಕರಿಸಲಿಲ್ಲ. ಬರೇ ಪ್ರಾಣಿಗಳು ವಾಸಮಾಡುವ ಜಾಗದಲ್ಲಿ ಹುಟ್ಟಿ ಒಂದು ಗೋದಲಿಯಲ್ಲಿ ಮಡುಗಲ್ಪಟ್ಟಿದ್ದನು. ನಿಜವಾದ ದೇವರು ನಮ್ಮ ಮೇಲಿದ್ದ ಪ್ರೇಮಕ್ಕಾಗಿ ಹೀನವಾದ ಸ್ಥಳದಲ್ಲಿ ಹುಟ್ಟಿದರು. ಈ ಪ್ರಕಾರವಾಗಿ ಕರ್ತರು ದೀನತ್ವವೆಂಬ ಪುಣ್ಯವನ್ನು ತಾವು ಎಷ್ಟು ಪ್ರೇಮಿಸಿದರೆಂದು ನಮಗೆ ತೋರಿಸಿದರು. ಕ್ರಿಸ್‌ಮಸ್ ಹಬ್ಬವು ವರ್ಷಗಳಲ್ಲಿರುವ ಎಲ್ಲಾ ಹಬ್ಬಗಳಲ್ಲಿ ಒಂದು ಚೆಂದವಾದ ಹಬ್ಬವಾಗಿದ್ದು ಜೇಸುನಾಥರು ಹುಟ್ಟಿದ ಜ್ಞಾಪಕಾರ್ಥವಾಗಿದೆ.

## 50. (ಎ) ಗೊಲ್ಲರು ಬಂದ ವರ್ತಮಾನ

ದಿವ್ಯ ಬಾಲಕರು ಹುಟ್ಟಿದಾಗ ರಾತ್ರಿಯಾಗಿದ್ದದರಿಂದ ಬೆತ್ಲೇಹೇಮ್ ಪಟ್ಟಣದಲ್ಲಿ ಎಲ್ಲ ಕಡೆಗೂ ನಿಶಬ್ದವಾಗಿತ್ತು. ಎಲ್ಲರೂ ಗಾಢನಿದ್ರೆ ಮಾಡುತ್ತಿದ್ದರು. ಆದ್ದರಿಂದ ಇಲ್ಲಿ ಜರಗಿದ ಸಂಗತಿ ಯಾರಿಗೂ ಗೊತ್ತಿದ್ದಿಲ್ಲ. ಬೆತ್ಲೆಹೇಮಿನ ಹೊರಗೆ ಬೆಟ್ಟಗಳಲ್ಲಿ ಗೊಲ್ಲರು ಮಾತ್ರ ಕುರಿಗಳನ್ನು ಕಾಯುತ್ತಿದ್ದರು.

ಆಗ ಅವರಿಗೆ ಇದ್ದಕ್ಕಿದ್ದ ಹಾಗೆ ಒಂದು ಬೆಳಕು ಕಾಣಲು ಒಬ್ಬ ದೇವದೂತನು ಅವರಿಗೆ ಕಾಣಿಸಿಕೊಂಡನು. ಅದನ್ನು ಕಂಡು ಅವರು ಬಹಳ ಅಂಜಿದರು, ಆದರೆ, ದೇವದೂತನು ಅವರನ್ನು ನೋಡಿ ನೀವು ಅಂಜಬೇಡಿರಿ. ಯಾಕಂದರೆ ನಾನು ನಿಮಗೆ ಸಂತೋಷವಾದ ವಾರ್ತೆಯನ್ನು ಹೇಳಲು ಬಂದಿದ್ದೇನೆ. ಒಬ್ಬ ರಕ್ಷಕರು ಹುಟ್ಟಿದ್ದಾರೆ, ಅವರನ್ನು ನೋಡಲು ಹೋಗಿರಿ. ಆ ಬಾಲಕನನ್ನು ಹರಕು ಬಟ್ಟೆಯಲ್ಲಿ ಸುತ್ತಿ ಒಂದು ಗೋದಲಿಯಲ್ಲಿ ಮಲಗಿಸಿರುವದನ್ನು ಕಾಣುವಿರಿ " ಎಂದನು.

ತರುವಾಯ ಸಮ್ಮನಸ್ಸುಗಳ ಒಂದು ಗುಂಪು ಕಾಣಿಸಿಕೊಂಡು, ಮಹೋನ್ನತದಲ್ಲಿ ಸರ್ವೇಶ್ವರನಿಗೆ ಮಹಿಮೆಯೂ ಈ ಭೂಲೋಕದಲ್ಲಿ ಒಳ್ಳೇ ಮನಸ್ಸಿನವರಿಗೆ ಸಮಾಧಾನವು ಎಂದು ದೇವರನ್ನು ಸ್ತುತಿಸುತ್ತ ಹಾಡುತ್ತಿದ್ದರು. ನಿಶಬ್ಧವಾಗಿದ್ದ ಆ ರಾತ್ರಿಯಲ್ಲಿ ಈ ದೇವದೂತರು ಮಧುರವಾದ ಪದಗಳನ್ನು ಹಾಡುತ್ತ ಲೋಕಕ್ಕೆ ಸುದ್ದಿಯನ್ನು ತಂದರು.

ಗೊಲ್ಲರು ಇದನ್ನು ಕೇಳಿ ಆಶ್ಚರ್ಯಪಟ್ಟು ಒಬ್ಬರನ್ನೊಬ್ಬರು ನೋಡುತ್ತ " ನಾವು ಸಹ ಹೋಗಿ ಹೊಸದಾಗಿ ಹುಟ್ಟಿದ್ಧ ದೇವರನ್ನು ನೋಡೋಣ ಎಂದರು.

ಇವರು ಬೆತ್ಲಹೇಮಿಗೆ ಅವಸರದಿಂದ ಓಡಿದರು, ಅಲ್ಲಿ ಮರಿಯಮ್ಮ ಮತ್ತು ಜೋಸೇಫನವರು ಇಳಿದ ಜಾಗವನ್ನು ಗೊಲ್ಲರು ಹುಡುಕಿದರು, ಅದನ್ನು ಮೆಲ್ಲಗೆ ಮತ್ತು ಭಕ್ತಿಯಿಂದ ಪ್ರವೇಶಿಸಿ ಮರಿಯಮ್ಮಾಗನ್ನು ಜೋಸೇಫರನ್ನು ದಿವ್ಯ ಬಾಲರನ್ನು ನೋಡಿದರು.

ಗೊಲ್ಲರು ದಿವ್ಯ ಬಾಲರ ಮುಂದೆ ಮೊಣಕಾಲೂರಿ ಅವರನ್ನು ಆರಾಧಿಸಿದರು. ತರುವಾಯ ದೇವರನ್ನು ಹೊಗಳುತ್ತಾ ತಮ್ಮ ಮನೆಗೆ ಹಿಂದಿರುಗಿ ಹೋದರು. ತಮಗೆ ಹಾದಿಯಲ್ಲಿ ಭೆಟ್ಟಿಯಾದ ಎಲ್ಲಾ ನೆರೆ ಹೊರೆಯವರಿಗೆ ತಾವು ಕಂಡದ್ದನ್ನು, ಕೇಳಿದ್ದನ್ನು ತಿಳಿಸಿದರು.

## 51 (ಬಿ) ದಿವ್ಯ ಬಾಲರನ್ನು ಕಾಣಿಕೆಯಾಗಿ ಒಪ್ಪಿಸಿದ್ದು

ದಿವ್ಯ ಬಾಲರು ಹುಟ್ಟಿದನಂತರ ನಾಲ್ವತ್ತನೇಯ ದಿವಸದಲ್ಲಿ ಅವರನ್ನು ಮರಿಯಮ್ಮನು ಜೋಸೇಫನು ಜೇರೂಸಲೇಮ್ ದೇವಾಲಯಕ್ಕೆ ತೆಗೆದುಕೊಂಡು ಹೋದರು. ವೇದದ ಕಟ್ಟಳೆಯ ಪ್ರಕಾರ ಮರಿಯಮ್ಮನು ದಿವ್ಯ ಬಾಲನನ್ನು ದೇವರಿಗೆ ಒಪ್ಪಿಸಿದಳು.

ಆ ದೇವಾಲಯದಲ್ಲಿ ಮರಿಯಮ್ಮ ಮತ್ತು ಜೋಸೇಫರಿಗೆ ಸಿಮೋನನೆಂಬ ಒಬ್ಬ ಪವಿತ್ರವಾದ ಮನುಷ್ಯನು ಭೆಟ್ಟಿಯಾದನು. ಆ ದಿವಸ ಆತನು ಅಲ್ಲಿಗೆ ಯಾಕೆ ಹೋಗಿದ್ದನೆಂದರೆ, ಆತನಿಗೆ ಸ್ಪಿರಿತು ಸಾಂಕ್ತುವಾದವರು, ಆ ದೇವಾಲಯದಲ್ಲಿ ಆ ದಿವಸ ರಕ್ಷಕರನ್ನು ಕಾಣುವಿಯೆಂದು ತಿಳಿಸಿದ್ದರು. ಸಿಮೋನನೆಂಬವರು ಆ ದಿವ್ಯ ಬಾಲರನ್ನು ಕೈಯಲ್ಲಿ ಎತ್ತಿಕೊಂಡರು. ತಾನು ಲೋಕ ರಕ್ಷಕರನ್ನು ನೋಡುವವರೆಗೆ ತನ್ನನ್ನು ಉಳಿಸಿದ ಕಾರಣ ದೇವರಿಗೆ ಮೇಲರಿತ ಸ್ತೋತ್ರವನ್ನು ಮಾಡಿದರು.

ಆ ದೇವಾಲಯದಲ್ಲಿಯೇ ಅನ್ನಮ್ಮನೆಂಬ ಒಬ್ಬ ಮುದುಕಿಯಾದ ದೀರ್ಘದರ್ಶಿ ಇದ್ದಳು. ಆಕೆಯು ಜೇಸುನಾಥರನ್ನು ಕಂಡು ಎಷ್ಟೋ ಸಂತೋಷ ಪಟ್ಟಳು. ಈ ದಿವ್ಯ ಬಾಲಕನು ಲೋಕ ರಕ್ಷಕರೆಂದು ಎಲ್ಲರಿಗೂ ಸಾರಿ ಹೇಳಿದಳು.

## 52 ಮೂರು ರಾಯರನ್ನು ಕುರಿತು

ಆ ಕಾಲದಲ್ಲಿ ಜೇರೂಸಲೇಮಿನ ಪೂರ್ವ ದಿಕ್ಕಿನಲ್ಲಿ ಮೂವರು ಜ್ಯೋತಿಶಾಸ್ತ್ರ ಗೊತ್ತಿದ್ದ ಪಂಡಿತರಿದ್ದರು. ಒಂದು ರಾತ್ರಿ ಇವರು ಒಂದು ಹೊಸ ನಕ್ಷತ್ರವನ್ನು ಕಂಡರು. ಇದು ಉಳಿದ ಎಲ್ಲಾ ನಕ್ಷತ್ರಗಳಿಗಿಂತಲೂ ಬಹಳ ಚೆಂದವಾಗಿದ್ದು. ಬಹಳ ಪ್ರಕಾಶವನ್ನು ಕೊಡುತ್ತಿತ್ತು.

ಈ ಶಾಸ್ತ್ರಿಗಳು ರಕ್ಷಕನು ಹುಟ್ಟಿದನೆಂದು ಗುರ್ತನ್ನು ತೋರಿಸುವದಕ್ಕಾಗಿ ಒಂದು ನಕ್ಷತ್ರವು ಹುಟ್ಟುವದೆಂದು ಮೊದಲು ಕೇಳಿದ್ದರು. ಆದ್ದರಿಂದ ಒಂಟೆಗಳನ್ನು ಅನೇಕ ಬಹುಮಾನಗಳನ್ನು ತೆಗೆದುಕೊಂಡು ಹೊಸದಾಗಿ ಹುಟ್ಟಿದ ಲೋಕ ರಕ್ಷಕರನ್ನು ಹುಡುಕಲು ಪ್ರಯಾಣವಾದರು. ಇವರು ಜೆರೂಸಲೇಮಿಗೆ ಬರುವತನಕ ಆ ನಕ್ಷತ್ರವು ಇವರಿಗೆ ದಾರಿಯನ್ನು ತೋರಿಸುತ್ತಿತ್ತು.

ಅವರು ಜೆರೂಸಲೇಮನ್ನು ಸೇರಿದ ಕೂಡಲೇ ಆ ನಕ್ಷತ್ರವು ಕಾಣದೆ ಮರೆಯಾಯಿತು. ಆದ್ದರಿಂದ ಈ ಶಾಸ್ತ್ರಿಗಳು ಹುಟ್ಟಿದ ಬಾಲಕನನ್ನು ನೋಡಲು ಬಹಳ ಆಶೆಗೊಂಡರು. ದಾರಿಯಲ್ಲಿ ತಮಗೆ ಭೆಟ್ಟಿಯಾದವರನ್ನೆಲ್ಲ ಕಂಡು “ ಜೂದರಿಗೆ ರಾಯನಾಗಿ ಹುಟ್ಟಿರುವ ಬಾಲಕನೆಲ್ಲಿರುವನು ? ಯಾಕಂದರೆ ನಾವು ಆತನ ನಕ್ಷತ್ರವನ್ನು ಪೂರ್ವ ದಿಕ್ಕಿನಲ್ಲಿ ಕಂಡೆವು. ಆದ್ದರಿಂದ ಆತನನ್ನು ಆರಾಧಿಸಲು ಬಂದೆವು. ” ಎಂದು ಕೇಳುತ್ತಿದ್ದರು.

ಈ ಶಾಸ್ತ್ರಿಗಳು ಹೇಳಿದ್ದನ್ನು ಹೆರೋದರಾಯನು ಕೇಳಿದನು. ಆದ್ದರಿಂದ ಬಹಳ ಹೊಟ್ಟೆಕಿಚ್ಚು ಪಟ್ಟನು. ಯಾಕಂ

ಪರಿ ಈ ರಾಯನು ತನ್ನ ರಾಜ್ಯವನ್ನು ತನ್ನಿಂದ ಕಸಕೊಳ್ಳುವ ನೆಂಪು ಅಂಜಿದನು. ಮತ್ತು ತನ್ನ ಗುರುಗಳನ್ನು ಕರೆಪು ಜೂದರ ರಾಜನು ಹುಟ್ಟಬೇಕಾದ ಸ್ಥಳವು ಯಾವದೆಂದು ಕೇಳಿದನು. ಆದಕ್ಕೆ ಅವರು " ಜೂದೆಯಾ ದೇಶದ ಬೆತ್ಲೆಹೇಮಿನಲ್ಲಿ " ಎಂದರು.

ಹೆರೋದರಾಯನು ಅಲ್ಲಿಗೆ ಬಂದ ಮೂವರು ಶಾಸ್ತ್ರಿಗಳನ್ನು ಕರೆಕಳುಹಿಸಿ, " ಬಾಲಕನು ಹುಟ್ಟಿದ ಜಾಗವನ್ನು ಹುಡುಕಿರಿ. ನೀವು ಆತನನ್ನು ಕಂಡ ಮೇಲೆ ನನಗೂ ಬಂದು ತಿಳಿಸಿರಿ. ಯಾಕಂದರೆ ನಾನು ಸಹ ಅವರನ್ನು ಆರಾಧಿಸಲು ಮನಸ್ಸಾಗಿದ್ದೇನೆ " ಎಂದು ಕಪಟವಾಗಿ ನುಡಿದನು. ಹೆರೋಧನು ಹೀಗೆ ಅವರಿಗೆ ಹೇಳಿದ್ದು, ದಿವ್ಯ ಬಾಲರನ್ನು ಆರಾಧಿಸುವದಕ್ಕಲ್ಲ. ಆದರೆ ಅವರಿರುವ ಜಾಗವನ್ನು ತಿಳಕೊಂಡು ಅವರನ್ನು ಕೊಲ್ಲುವದಕ್ಕಾಗಿ ಹೀಗೆ ಅಂದನು.

ಈ ಮೂವರು ಶಾಸ್ತ್ರಜ್ಞರು ಜೆರೂಸಲೇಮನ್ನು ಬಿಟ್ಟು ತಿರುಗಿ ಪ್ರಯಾಣರಾದರು. ಮರೆಯಾದ ನಕ್ಷತ್ರವು ತಿರುಗಿ ಅವರಿಗೆ ಕಾಣಿಸಿಕೊಂಡಿತು. ಇದು ಅವರು ಬೆತ್ಲೆಹೇಮಿನಲ್ಲಿ ದಿವ್ಯಬಾಲರು ಹುಟ್ಟಿದಸ್ಥಳವನ್ನು ಮುಟ್ಟುವವರೆಗೆ ದಾರಿ ತೋರಿಸಿತು. ಇವರು ದಿವ್ಯ ಬಾಲರನ್ನು ಕಂಡಕೂಡಲೇ ಮೊಣಕಾಲೂರಿ ಆತನನ್ನು ಆರಾಧಿಸಿದರು. ತಾವು ತಂದ ಎಲ್ಲಾ ಬಹು ಮಾನಗಳನ್ನು, ಬಂಗಾರವನ್ನೂ ಧೂಪವನ್ನು ಮಿರ್ರವೆಂಬ ಪರಿಮಳವನ್ನು ಕಾಣಿಕೆಯಾಗಿ ಒಪ್ಪಿಸಿದರು.

ಆರಾತ್ರಿ ಅವರು ಮಲಗಿರುವಾಗ ದೇವರು ಅವರಿಗೆ ತಿಳಿಸಿದ್ದೇನಂದರೆ " ನೀವು ಜೇಸುಬಾಲರು ಹುಟ್ಟಿದ ಸ್ಥಳ

ವನ್ನು ಹೆರೋದನಿಗೆ ಹೇಳಬೇಡರಿ ಯಾಕಂದರೆ ಅವನು ಆ ಬಾಲಕನನ್ನು ಕೊಲ್ಲಬೇಕೆಂದಿದ್ದಾನೆ" ಎಂದನು. ಆದ್ದರಿಂದ ಅವರು ಮರುದಿವಸ ಬೆತ್ಲೆಹೇಮನ್ನು ಬಿಟ್ಟು ಇನ್ನೊಂದು ಮಾರ್ಗವಾಗಿ ತಮ್ಮ ಊರಿಗೆ ಹೋದರು.

ಈ ಸಂಗತಿಯಿಂದ ನಾವು ಕಲಿಯಬೇಕಾದದ್ದೇನಂದರೆ, ನಾವು ಸಹ ಜೇಸುನಾಥರಿಗೆ ಬಹುಮಾನಗಳನ್ನು ಕೊಡಬೇಕು. ಯಾಕಂದರೆ ಎಲ್ಲವನ್ನು ಅವರಿಂದ ನಾವು ಪಡೆದಿರುತ್ತೇವೆ. ಆದ್ದರಿಂದ ತಿರುಗಿ ಅವನ್ನು ಅವರಿಗೆ ಕೊಡಬೇಕು. ಇದಲ್ಲದೆ ಅವರು. ನಮ್ಮ ಮೇಲೆ ಇದ್ದ ಪ್ರೇಮಕ್ಕಾಗಿ ಕಷ್ಟಪಟ್ಟ ಹಾಗೆ ನಾವು ಸಹ ಅವರ ಸಲುವಾಗಿ ಕಷ್ಟಪಡಲು ಸಿದ್ಧರಾಗಿರಬೇಕು.

## 53 ಏಜಿಪ್ತ ಸೀಮೆಗೆ ಓಡಿಹೋದದ್ದನ್ನು ಕುರಿತು.

ಹೆರೋದನು ಜೇಸುನಾಥರು ಹುಟ್ಟಿದ ಸ್ಥಳವನ್ನು ತಿಳಕೊಳ್ಳುವದಕ್ಕಾಗಿ ಆ ಮೂವರು ಶಾಸ್ತ್ರಿಗಳ ದಾರಿಯನ್ನು ಕಾಯುತ್ತಿದ್ದನು. ಆದರೆ ಅವರು. ತಿರಿಗಿ ಬಾರದನ್ನು ಕಂಡು ಬಹಳ ಸಿಟ್ಟುಗೊಂಡನು. ಮತ್ತು ಅವರು ಮುಂಚೆ ತನಗೆ ತಿಳಿಸಿದ ಬಾಲಕನು ಎರಡು ವರ್ಷ ಪ್ರಾಯದೊಳಗಿನವನೇ ಇರಬಹುದೆಂದು ತಿಳಿದು ಬೆತ್ಲೆಹೇಮ ಪಟ್ಟಣದ ಎರಡು ವರ್ಷ ಪ್ರಾಯದೊಳಗಿನ ಎಲ್ಲಾ ಗಂಡು ಮಕ್ಕಳನ್ನು ಕೊಲ್ಲುವಹಾಗೆ ತನ್ನ ಸೇವಕರಿಗೆ ಆಜ್ಞಾಪಿಸಿದನು ಆದ್ದರಿಂದ ಈ ಬಾಲಕರಲ್ಲಿ ಜೇಸುನಾಥರು ಸಹ ಸಾಯಬಹುದೆಂದು ನೆನಸಿದ್ದನು

ಈ ಸೇವಕರು ಹೆರೋದನು ಹೇಳಿದ ಹಾಗೆ ಮಾಡಿದರು. ಬೆತ್ಲೆಹೇಮ್ ಪಟ್ಟಣದಲ್ಲಿ ಆ ದಿವಸ ಬಹಳ ದುಃಖವುಂಟಾಯಿತು. ಯಾಕಂದರೆ ಸೇವಕರು ಪ್ರತಿಯೊಂದು ಮನೆಗೆ ಹೋಗಿ ಅಲ್ಲಿದ್ದ ಕೂಸನ್ನು ತೆಗೆದುಕೊಂಡು ಕೊಂದು ಹಾಕುತ್ತಿದ್ದರು.

ಹೀಗೆ ಕ್ರೂರವಾಗಿ ಕೊಲ್ಲಲ್ಪಟ್ಟ ಮಕ್ಕಳು ತಿರುಸಭೆಯಿಂದ ಪಾವನ ಶಿಶುಗಳೆಂಬ ಕರೆಯಲ್ಪಡುತ್ತಾರೆ. ಪ್ರತಿವರ್ಷ ಡಿಸೆಂಬರ್ ೨೮ನೇ ತಾರೀಖಿನ ದಿವಸ ಈ ಹಬ್ಬವು ಕೊಂಡಾಡಲ್ಪಡುತ್ತದೆ.

ಆದರೆ ಹೆರೋಧನ ಭಂಟರು ಜೇಸುನಾಥರನ್ನು ಕೊಲ್ಲಲಿಲ್ಲ. ಆ ರಾತ್ರಿ ಒಬ್ಬ ದೇವದೂತನು ಜೋಸೇಫರಿಗೆ ಕಾಣಿಸಿಕೊಂಡು "ಏಳು, ಕೂಸನ್ನು ಅದರ ತಾಯಿಯನ್ನು ಕರಕೊಂಡು ಏಜಿಪ್ತ ದೇಶಕ್ಕೆ ಓಡಿ ಹೋಗು ಮತ್ತು ನಾನು ನಿನಗೆ ಪುನಃ ಬಂದು ಹೇಳುವವರೆಗೂ ಅಲ್ಲಿಯೇ ಇರು. ಯಾಕಂದರೆ, ಹೆರೋಧನು ಕೂಸನ್ನು ಕೊಲ್ಲಬೇಕೆಂದು ಇದ್ದಾನೆ" ಎಂದನು.

ಹೆರೋಧನು ಪಾವನ ಶಿಶುಗಳನ್ನು ಕೊಲ್ಲಿಸಿದ ಕೆಲವು ವರ್ಷಗಳೊಳಗೆ ಒಂದು ಭಯಂಕರವಾದ ರೋಗವು ಬಂದು ಸತ್ತು ಹೋದನು. ಈತನ ತರುವಾಯ ಇವನ ಮಗನಾದ ಅರ್ಕೆಲೂಸ್ ಎಂಬವನು ಅರಸನಾದನು. ತರುವಾಯ ತಿರುಗಿ ದೇವದೂತನು ಜೋಸೇಫನಿಗೆ ಕಾಣಿಸಿಕೊಂಡು, ಏಳು ಕೂಸನ್ನೂ ಅದರ ತಾಯಿಯನ್ನೂ ಕರಕೊಂಡು ಇಸ್ರಾಯೇಲರ ದೇಶಕ್ಕೆ ಹೋಗು. ಯಾಕಂದರೆ ಕೂಸನ್ನು ಕೊಲ್ಲಬೇಕೆಂದು ನೆನಸಿದ್ದವನು ಈಗ ಸತ್ತು ಹೋಗಿದ್ದಾನೆ ಎಂದನು.

ತಿರು ಕುಟುಂಬವು ತಿರುಗಿ ಇಸ್ರಾಯೇಲರ ದೇಶಕ್ಕೆ ತಿರುಗಿ ಬಂದಿತು. ಆದರೆ ಆರ್ಕೆಲೂಸ್ ಎಂಬವನು ಜೇಸು ನಾಥರಿಗೆ ಏನಾದರೂ ಅಪಾಯವನ್ನು ಮಾಡುವನೆಂದು ಜೋಸೇಫರು ಅಂಜಿದರು. ಆದ್ದರಿಂದ ತಿರುಗಿ ಬೆತ್ಲೇಮಿಗೆ ಹೋಗದೆ ತಮ್ಮ ಹಳೇಮನೆ ಇದ್ದ ನಜರೇತ ಎಂಬ ಊರಿಗೆ ಹೋದರು.

ಅಲ್ಲಿ ಜೇಸುನಾಥರು ಬಹಿರಂಗವಾದ ಕೆಲಸವನ್ನು ಪ್ರಾರಂಭಿಸುವವರೆಗೂ ತಮ್ಮ ಬಾಲ ಪ್ರಾಯವನ್ನು ಕಳೆದರು. ತಮ್ಮ ತಾಯಿಗೂ, ತಂದೆಗೂ ವಿಧೇಯಿಸಿ ನಡೆಯುತ್ತಿದ್ದರು. ಈ ಪ್ರಕಾರವಾಗಿ ನಾವು ಸಹ ದೇವರಿಗೂ, ಹಿರಿಯರಿಗೂ ನಮ್ಮ ತಂದೆ ತಾಯಿಗಳಿಗೂ ವಿಧೇಯಿಸಬೇಕೆಂದು ಕಲಿಸಿದರು.

## 54 ಜೇಸುನಾಥರು ದೇವಾಲಯದಲ್ಲಿ ನಿಂತುಹೋದ ವರ್ತಮಾನ.

ಆ ಕಾಲದಲ್ಲಿ ಜೂದರೆಲ್ಲರು ಪ್ರತಿವರ್ಷ ಪಾಸ್ಕಹಬ್ಬವನ್ನು ಕೊಂಡಾಡಲು ಜೇರುಸಲೇಮಿಗೆ ಹೋಗುವಪದ್ಧತಿಯಿತ್ತು. ಈ ಹಬ್ಬವು, ಮೋಯಿಸನು ಇಸ್ರಾಯೇಲಪುತ್ರರನ್ನು ಈಜಿಪ್ತುದೇಶದ ಅಡಿಮೆತನದಿಂದ ಬಿಡಿಸಿದ ಜ್ಞಾಪಕಾರ್ತವಾಗಿ ಮಾಡಲ್ಪಡುತ್ತಿತ್ತು.

ಜೇಸುನಾಥರಿಗೆ ೧೨ ವರ್ಷ ಪ್ರಾಯ ನಡೆಯುವಾಗ ಮರಿಯಮ್ಮನು, ಜೋಸೇಫರು ಜೇಸುನಾಥರನ್ನು ಕರಕೊಂಡು ಪಾಸ್ಕಹಬ್ಬದ ಸಲುವಾಗಿ ಜೆರೂಸಲೇಮಿಗೆ ಹೋದರು.

ಹಬ್ಬವು ಮುಗಿದ ಬಳಿಕ ಮರಿಯಮ್ಮನು ಮತ್ತು ಜೋಸೇಫನು ನಜರೆತ್ತು ಊರಿಗೆ ತಿರುಗಿ ಬರಲು ಪ್ರಯಾಣ ರಾದರು. ಇವರ ಸಂಗಡ ಅನೇಕ ಜನ ಸ್ನೇಹಿತರೂ, ಬಂಧು ಗಳೂ ಇದ್ದರು.

ಇವರು ಪ್ರಯಾಣವಾಗಿ ಬರುವಾಗ ಮರಿಯಮ್ಮನು, ಜೋಸೇಫರು ಜೇಸುನಾಥರು ಇನ್ನೊಂದು ಜನ ಗುಂಪಿನಲ್ಲಿರ ಬಹುದೆಂದು ತಿಳಿದಿದ್ದರು. ಆದರೆ ಒಂದು ದಿವಸ ಪ್ರಯಾಣ ಮಾಡಿದ ಮೇಲೆ ಸಂಜೆಯ ಸಮಯದಲ್ಲಿ ಜೇಸುನಾಥರನ್ನು ಕಾಣದೆ ಹೋದರು. ಎಲ್ಲಾ ಪ್ರಯಾಣಸ್ಥರನ್ನು ಕೇಳಿದರು. ಯಾರೂ ನೋಡಲಿಲ್ಲವೆಂದು ಹೇಳಿದರು.

ಮರಿಯಮ್ಮನು ಜೋಸೇಫರು ಬಹಳ ಕಳವಳಗೊಂಡರು. ಕಡೆಗೆ ಜೇಸುನಾಥರನ್ನು ಹುಡುಕಲು ಜೇರೂಸಲೇಮಿಗೆ ತಿರುಗಿ ಹೋದರು. ಅಲ್ಲಿ ಎರಡು ದಿವಸಗಳವರೆಗೆ ಹುಡುಕಿದರು. ಎಲ್ಲೆಲ್ಲಿಯೂ ಹೋಗಿ ನೋಡಿದರು. ಆದರು ಅವರನ್ನು ಕಾಣದೆ ಹೋದರು. ಆದ್ದರಿಂದ ಇನ್ನು ಜೇಸುನಾಥರನ್ನು ಎಂದೂ ಕಾಣಲಿಕ್ಕಿಲ್ಲವೆಂದು ತಮ್ಮ ನಂಬಿಕೆಯನ್ನು ಬಿಟ್ಟು ಬಿಟ್ಟರು. ಮೂರನೇಯ ದಿವಸ ತಿರುಗಿ ದೇವಾಲಯಕ್ಕೆ ಹೋದರು. ಅಲ್ಲಿ ಜೇಸುನಾಥರು ತರ್ಕಶಾಸ್ತ್ರಜ್ಞರ ಮಧ್ಯ ದಲ್ಲಿ ಕೂತು ಕೊಂಡಿರುವದನ್ನು ನೋಡಿದರು. ಈ ತರ್ಕ ಶಾಸ್ತ್ರಜ್ಞರು ವೇದದ ಸಂಗತಿಗಳನ್ನು ಬೇರೆ ಜನರಿಗೆ ಭೋಧಿ ಸುವವರಾಗಿದ್ದರು. ಇಂಥವರು ಸಹ ಜೇಸುನಾಥರು ತಮಗೆ ಹಾಕುವ ಪ್ರಶ್ನೆಗಳನ್ನು ಕೇಳಿ ಆಶ್ಚರ್ಯಪಡುತ್ತಿದ್ದರು. ಮತ್ತು ಇಂಥಾ ಸಣ್ಣ ಬಾಲಕನು ಇಷ್ಟು ಜ್ಞಾನ ವುಳ್ಳವ ನಾಗಿರುವನೆಂದು ನಂಬದೆ ಹೋದರು.

ಮರಿಯಮ್ಮನು ಜೋಸೇಫರು ಜೇಸುನಾಥರನ್ನು ಕಂಡ ಕೂಡಲೇ ಬಹಳ ಸಂತೋಷಪಟ್ಟರು. ಮರಿಯಮ್ಮನು ತನ್ನ ಮಗನ ಹತ್ತಿರ ಬಂದು, ಮೆಲ್ಲಗೆ ಹೇಳಿದ್ದೇನಂದರೆ, "ಮಗನೇ, ಯಾಕೆ ನೀನು ನಮ್ಮನ್ನು ಬಿಟ್ಟಿ, ಇಷ್ಟರವರೆಗೆ ದುಃಖದಿಂದ ನಾವು ನಿನ್ನನ್ನು ಹುಡುಕಿದೆವು.

ಆದರೆ ಜೇಸುನಾಥರು ಪ್ರತ್ಯುತ್ತರವಾಗಿ ಯಾಕೆ ನೀವು ನನ್ನನ್ನು ಹುಡುಕಿದಿರಿ? ನಾನು ನನ್ನ ತಂದೆಯ ಕೆಲಸವನ್ನು ಮಾಡಬೇಕೆಂದು ನಿಮಗೆ ಗೊತ್ತಿಲ್ಲವೋ? ಎಂದು ಹೇಳಿ ಕೂಡಲೇ ದೇವಾಲಯವನ್ನು ಬಿಟ್ಟು ತಂದೆ ತಾಯಿಯವರ ಸಂಗಡ ನಜರೇತೂರಿಗೆ ಹೋದರು.

ಹೀಗೆ ಜೇಸುನಾಥರು ಎಲ್ಲಕ್ಕಿಂತಲೂ ಮುಂಚೆ ದೇವರನ್ನು ಪ್ರೇಮಿಸಬೇಕೆಂದು ತಿಳಿಸುತ್ತಾರೆ. ದೇವರ ಚಿತ್ತವನ್ನು ನೆರವೇರಿಸಲು ನಮಗೆ ಪ್ರಿಯರಾದವರನ್ನು ಸಹ ಬಿಟ್ಟು ಬಿಡಬೇಕೆಂದು ಈ ಚರಿತ್ರೆಯಿಂದ ಕಲಿಸುತ್ತಾರೆ.

## 55 ಜೇಸುನಾಥರು ತಪೋಸ್ನಾನವನ್ನು ಹೊಂದಿದ್ದು.

ಆ ಕಾಲದಲ್ಲಿ ಜಕರಿಯನ ಮತ್ತು ಎಲಿಜಬೇತಮ್ಮನ ಮಗನಾದ ಸ್ನಾಪಕ ಅರುಳಪ್ಪನು ಮೂವತ್ತು ವರ್ಷ ಪ್ರಾಯದವನಾಗಿದ್ದನು. ಈತನು ಚಿಕ್ಕ ಪ್ರಾಯದಿಂದಲೂ ಅರಣ್ಯದಲ್ಲಿ ಜೀವಿಸುತ್ತಿದ್ದನು. ಇವನು ಆಮಿಡತೆಗಳನ್ನು ಕಾಡು ಜೇನುತುಪ್ಪವನ್ನು ಮಾತ್ರ ಆಹಾರವಾಗಿ ತಿನ್ನುತ್ತಿದ್ದನು. ಈತನು ಅರಣ್ಯದಲ್ಲಿರುವಾಗಲೇ ದೇವರ ಬಲದಿಂದ ಈ ಲೋಕಕ್ಕೆ ಬರಲಿಕ್ಕಿರು ಲೋಕರಕ್ಷಕರ ಮುಂದೆ ದಾರಿಯನ್ನು ಸಿದ್ಧ

ಮಾಡುವವನಾಗಿದ್ದನು. ಈತನು ಅರಣ್ಯದಿಂದ ಹೊರಗೆ ಹೋಗುವಾಗ ಒಂಟೆಯ ರೋಮದ ಅಂಗಿಯನ್ನು ಧರಿಸಿ ಕೊಳ್ಳುತ್ತಿದ್ದನು.

ಅರಳಪ್ಪನವರು ಜೋರ್ಡಾನನದಿಯ ಕರೆಯಲ್ಲಿದ್ದ ಊರುಗಳಿಗೆ ಹೋಗಿ ಅಲ್ಲಿಗೆ ಜೆರೂಸಲೇಮಿನಿಂದ ಬರಹೋಗುತ್ತಿದ್ದ ಜನರನ್ನು ನೋಡಿ, " ತಪಸ್ಸು ಮಾಡಿರಿ, ಯಾಕೆಂದರೆ ಪರಲೋಕದ ರಾಜ್ಯವು ಸಮೀಪಿಸಿರುವದು ಆದ್ದರಿಂದ ನಿಮ್ಮ ಪಾಪಗಳಿಗಾಗಿ ತಪಸ್ಸುಮಾಡಿರಿ " ಎಂದು ಬೋಧಿಸುತ್ತಿದ್ದರು.

ಆಗ ಅನೇಕರು ಇವರ ಹತ್ತಿರ ಬಂದು ತಾವು ಮಾಡಬೇಕಾದದ್ದೇನೆಂದು ಕೇಳಲು " ನೀವು ನಿಮಗೆ ಇದ್ದದ್ದನ್ನು ಬಡವರಿಗೆ ಕೊಡಿರಿ. ತೆರಿಗೆಯ ಎತ್ತುವವರು ಅನ್ಯಾಯ ಮಾಡಬೇಡಿರಿ. ನಿಮ್ಮ ನೆರೆಹೊರೆಯವರನ್ನು ತಿರಸ್ಕರಿಸಬೇಡಿರಿ " ಎಂದು ಹೇಳುವನು.

ತಪ್ರೋಸ್ನಾನವನ್ನು ಹೊಂದಲು ಆಶೆಯಾಗಿದ್ದವರೆಲ್ಲರಿಗೆ ಅರಳಪ್ಪನವರು ಜೋರ್ಡಾ ನದಿಯಲ್ಲಿ ತಪ್ರೋಸ್ನಾನವನ್ನು ಕೊಟ್ಟನು. ಇದು ಪಾಪಗಳನ್ನು ಪರಿಹಾರ ಮಾಡುವದರ ಗುರುತಾಗಿತ್ತು. ಅರಳಪ್ಪನವರು ಎಲ್ಲರಿಗೂ ತಪ್ರೋಸ್ನಾನವನ್ನು ಕೊಡುತ್ತಿದ್ದರಿಂದ ಸ್ನಾಪಕ ಅರಳಪ್ಪರೆಂದು ಕರೆಯಲ್ಪಡುತ್ತಾರೆ.

ಅರಳಪ್ಪರ ಬೋಧನೆಯನ್ನು ಕೇಳಿದವರಲ್ಲಿ ಕೆಲವರು, " ಇವರು ಒಬ್ಬ ದೀರ್ಘದರ್ಶಿ " ಯೆಂದು ನೆನಸುತ್ತಿದ್ದರು. ಇನ್ನು ಕೆಲವರು ಹುಟ್ಟಲಿಕ್ಕಿದ್ದ ದೇವಕುಮಾರನು ಎಂದು

ಈತನಿಗೆ ಅನ್ನುತ್ತಿದ್ದರೆ. ಆದರೆ ಅರಳಪ್ಪರು ಪ್ರತ್ಯುತ್ತರವಾಗಿ " ನಾನು ದೀರ್ಘದರ್ಶಿಯೂ ಅಲ್ಲ, ದೇವಕುಮಾರನು ಅಲ್ಲ. ನಾನು ನಿಮಗೆ ನೀರಿನಿಂದ ಸ್ನಾನವನ್ನು ಕೊಡುತ್ತೇನೆ. ಆದರೆ ನನಗಿಂತಲೂ ವಲ್ಲಭವುಳ್ಳವರು ಒಬ್ಬರು ಬರುತ್ತಾರೆ. ನಾನು ಅವರ ಪಾದರಕ್ಷೆಯನ್ನು ಸಹ ಬಿಚ್ಚಲು ಪಾತ್ರನಲ್ಲ. ಅವರು ಸ್ಪಿರಿತು ಸಾಂಕ್ತುವಿನಿಂದ ಸಾಂಕ್ತಾವಿ ಜ್ಞಾನ ಸ್ನಾನವನ್ನು ಕೊಡುವರು. ಎಂದು ಜೇಸುನಾಥರನ್ನು ಕುರಿತು ತಿಳಿಸಿದರು.

ಒಂದು ದಿನ ಜೇಸುನಾಥರು ತಾವೇ ಜ್ಞಾನ ಸ್ನಾನವನ್ನು ಹೊಂದಲು ಅರಳಪ್ಪರ ಹತ್ತಿರ ಬಂದರು. ಆಗ ಅರಳಪ್ಪರು ಅವರನ್ನು ಕಂಡುಹಿಡಿದು ಅವರಿಗೆ ತಪೋಸ್ನಾನ ಕೊಡಲು ಒಪ್ಪಲಿಲ್ಲ. ಮತ್ತು ಹೇಳಿದ್ದೇನಂದರೆ, " ನಾನೇ ನಿಮ್ಮ ಬಳಿಯಲ್ಲಿ ತಪೋಸ್ನಾನ ಹೊಂದಬೇಕೇ ಹೊರತು ನೀವು ನನ್ನ ಬಳಿಗೆ ಬರುತ್ತೀರಾ ಎಂದರು.

ಜೇಸುನಾಥರಿಗೆ ತಪೋಸ್ನಾನ ಕೊಟ್ಟಕೂಡಲೇ ನೀರಿನಿಂದ ಹೊರಗೆ ಬಂದರು ಕೂಡಲೇ ಮೋಕ್ಷವು ತೆರೆಯಲ್ಪಟ್ಟು ಸ್ಪಿರಿತು ಸಾಂಕ್ತುವಾದವರು ಪಾರಿವಾಳದ ರೂಪದಲ್ಲಿ ಇಳಿದು ಬಂದು ಜೇಸುನಾಥರಮೇಲೆ ನಿಂತರು. ಮೋಕ್ಷದಿಂದ ಪಿತನಾದ ಸರ್ವೇಶ್ವರನು ಇವರೇ ನಮ್ಮ ಪ್ರಿಯ ಕುಮಾರನು. ಇವರಿಂದಲೇ ಆನಂದಪಡುತ್ತೇವೆ ಎಂದು ಹೇಳಿದರು.

ನಾವು ಸಹ ಜ್ಞಾನಸ್ನಾನ ತಕ್ಕೊಂಡಾಗ ದೇವರ ಮತ್ತು ತಿರುಸಭೆಯ ಮಕ್ಕಳಾಗುತ್ತೇವೆ. ಸ್ಪಿರಿತು ಸಾಂಕ್ತುವಾದವರು ನಮ್ಮ ಮೇಲೆ ಇಳಿದು ಬರುವರು. ಆಗ ನಮ್ಮಲ್ಲಿದ್ದ ಜನ್ಮ

ಪಾಪವು ಮತ್ತು ಉಳಿದ ಎಲ್ಲಾ ಪಾಪಗಳು ಪರಿಹಾರವಾಗಿ ಹೋಗುತ್ತವೆ.

## 56 ಜೇಸುನಾಥರು ಪಿಶಾಚಿಯಿಂದ ಶೋಧಿಸಲ್ಪಟ್ಟದ್ದು

ಜೇಸುನಾಥರು ತಪೋಸ್ನಾನವನ್ನು ಹೊಂದಿದ ಮೇಲೆ ಸ್ಪಿರಿತು ಸಾಂಕ್ಟುವಿನಿಂದ ವನಾಂತರಕ್ಕೆ ಒಯ್ಯಲ್ಪಟ್ಟರು. ಅಲ್ಲಿ ಅವರು ನಾಲ್ವತ್ತು ಹಗಲು ನಾಲ್ವತ್ತು ರಾತ್ರಿ ಏನೂ ಊಟ ಮಾಡದೆ ಉಪವಾಸ ಮಾಡಿದರು. ಈ ನಾಲ್ವತ್ತು ದಿವಸಗಳಲ್ಲಿ ಏನೂ ಭುಜಿಸದ್ದರಿಂದ ಬಹಳ ಹಸಿವೆಗೊಂಡರು. ಆಗ ಸೈತಾನನು ಅವರನ್ನು ಶೋಧಿಸಲು ಹತ್ತಾರ ಬಂದಿತು. ಕಲ್ಲನ್ನು ತೋರಿಸಿ ನೀನು ದೇವರ ಮಗನಾಗಿದ್ದರೆ, ಈ ಕಲ್ಲುಗಳನ್ನು ರೊಟ್ಟಿಗಳಾಗುವ ಹಾಗೆ ಹೇಳು ಎಂದಿತು. ಅದಕ್ಕೆ ಜೇಸುನಾಥರು, ಪ್ರತ್ಯುತ್ತರವಾಗಿ " ಮನುಷ್ಯನು ಬರೇ ರೊಟ್ಟಿಯಿಂದ ಮಾತ್ರವಲ್ಲ, ದೇವರಿಂದ ಬರುವ ಪ್ರತಿಯೊಂದು ವಾಕ್ಯದಿಂದಲೂ ಜೀವಿಸುವನು " ಎಂದರು.

ಆಗ ಪಿಶಾಚಿಯು ಜೇಸುನಾಥರನ್ನು ಎತ್ತಿಕೊಂಡು ಹೋಗಿ ಜೆರೂಸಲೆಮ್ ದೇವಾಲಯದ ಶಿಖರದಮೇಲೆ ನಿಲ್ಲಿಸಿತು. ಅಲ್ಲಿಂದ ಕೆಳಗೆ ಜನರು ತಮ್ಮ ಕೆಲಸಕ್ಕೆ ಹೋಗುವದನ್ನು ಬರುವದನ್ನು ಕಾಣಬಹುದಾಗಿತ್ತು. ಸೈತಾನನು ಜೇಸುನಾಥರನ್ನು ನೋಡಿ " ನೀನು ದೇವರ ಮಗನಾಗಿದ್ದರೆ ಇಲ್ಲಿಂದ ಕೆಳಕ್ಕೆ ಹಾರು ಯಾಕಂದರೆ ದೇವರು ತಮ್ಮ ದೂತರನ್ನು ಕಳಿಸುವರೆಂದು ಅವರು ಬಂದು ನಿಮ್ಮ ಪಾದಗಳು ಕಲ್ಲಿಗೆ ತಗಲದ ಹಾಗೆ ಹಿಡಿಯುವರೆಂದು ವೇದದ ಪುಸ್ತಕದಲ್ಲಿ ಬರೆದಿದೆ " ಎಂದಿತು.

ಅದಕ್ಕೆ ಜೇಸುನಾಥರು "ನಿನ್ನ ಕರ್ತರಾದ ಸರ್ವೇಶ್ವರ ನನ್ನು ನೀನು ಶೋಧಿಸಬೇಡವೆಂದು ಸಹ ವೇದಾಗಮದಲ್ಲಿ ಬರೆದಿದೆ ಎಂದರು.

ಇಷ್ಟಾದರೂ ಸಹ ಪಿಶಾಚಿಯು ಅಧೈರ್ಯಗೊಳ್ಳಲಿಲ್ಲ. ಇನ್ನೊಂದುಸಾರಿ ಜೇಸುನಾಥರನ್ನು ಶೋಧಿಸಲು ಯತ್ನಿಸಿತು. ಆದ್ದರಿಂದ ಜೇಸುನಾಥರನ್ನು ಒಂದು ದೊಡ್ಡ ಬೆಟ್ಟದ ಮೇಲೆ ತೆಗೆದುಕೊಂಡು ಹೋಯಿತು. ಅಲ್ಲಿಂದ ಈ ಲೋಕದಲ್ಲಿದ್ದ ಎಲ್ಲಾ ರಾಜ್ಯಗಳನ್ನು ಅವುಗಳ ಮಹಿಮೆಯನ್ನು ತೋರಿಸಿತು. ತರುವಾಯ ಕರ್ತರಿಗೆ ಹೇಳಿದ್ದೇನಂದರೆ, "ನೀನು ಸಾಷ್ಟಾಂಗ ವಾಗಿ ಬಿದ್ದು ನನ್ನನ್ನು ನಮಸ್ಕರಿಸಿದರೆ ಇವುಗಳನ್ನೆಲ್ಲ ನಿನಗೆ ಕೊಡುತ್ತೇನೆ" ಎಂದು ಹೇಳಿತು.

ಅದಕ್ಕೆ ಜೇಸುನಾಥರು "ಸೈತಾನನೇ ಆಚೆಗೆ ಹೋಗು: ನಿನ್ನ ಕರ್ತರಾದ ಸರ್ವೇಶ್ವರನನ್ನು ಮಾತ್ರ ಆರಾಧಿಸಿ, ಅವ ರೊಬ್ಬರಿಗೆ ಸೇವೆ ಮಾಡುವಿಯಾಗಲಿ" ಎಂದರು.

ಕಡೆಗೆ ಪಿಶಾಚಿಯು ಜೇಸುನಾಥರನ್ನು ಬಿಟ್ಟು ಹೋ ಯಿತು. ಆಗ ದೇವದೂತರು ಬಂದು ಜೇಸುನಾಥರಿಗೆ ಸೇವೆ ಮಾಡಿದರು.

ಜೇಸುನಾಥರು ವನಾಂತರವನ್ನು ಬಿಟ್ಟ ಬಳಿಕ ಜೋರ್ದಾ ನ್ ನದಿಯ ಬಳಿಯಲ್ಲಿದ್ದ ಊರಿಗೆ ಹೋದರು. ಅಲ್ಲಿ ಅರಳ ಪ್ಪರು ಬೋಧಿಸುತ್ತಿದ್ದ ಮತ್ತು ಸ್ನಾನ ಕೊಟ್ಟ ಸ್ಥಳ ದಾಟು ತ್ತಿದ್ದರು. ಆಗ ಅರಳಪ್ಪರೂ ಮತ್ತು ಜನ ಗುಂಪುಗಳು ಅವ ರನ್ನು ಸುತ್ತಿಕೊಳ್ಳಲು, ಅರಳಪ್ಪರು ಜೇಸುನಾಥರನ್ನು ಅವ

ವರಿಗೆ ತೋರಿಸಿ, " ಇವರೇ ಲೋಕದ ಪಾಪಗಳನ್ನು ಪರಿಹರಿಸುವ ಸರ್ವೇಶ್ವರನ ಕೆಂಗುರಿಮರಿಯಾದವರು. ನಾನು ಹೇಳಿದ ಹಾಗೆ ನನಗಿಂತಲೂ ವಲ್ಲಭರಾದವರು ಇವರೇ ! ಯಾಕಂದರೆ ಇವರು ನನಗಿಂತ ಮುಂಚೆ ಇದ್ದರು; ನಾನು ನೀರಿನಿಂದ ಸ್ನಾನವನ್ನು ಕೊಟ್ಟೆನು. ಯಾಕಂದರೆ ಇವರು ದೇವಕುಮಾರ ನೆಂದು ತೋರಿಸುವದಕ್ಕಾಗಿಯೇ ಹೀಗೆ ಮಾಡಿದೆನು.

## 57 ಜೇಸುನಾಥರು ಮಾಡಿದ ಮೊದಲನೇ ಅದ್ಭುತ

ಜೇಸುನಾಥರೂ ಅವರ ಶಿಷ್ಯರೂ ಕೂಡಿ ಗಲಿಲೆಯ ದೇಶದ ಕಾನಾನ್ ಎಂಬ ಊರಿಗೆ ಹೋಗಿದ್ದರು. ಅಲ್ಲಿ ;ಜರಗಿದ ವಿವಾಹಕ್ಕಾಗಿ ಇವರನ್ನು ಕರೆದಿದ್ದರು. ಜೇಸುನಾಥರ ತಾಯಿಯಾದ ಮರಿಯಮ್ಮನು ಸಹ ಅಲ್ಲಿಗೆ ಕರೆಯಲ್ಪಟ್ಟಿದ್ದಳು.

ಅಲ್ಲಿಗೆ ಅನೇಕ ಮಂದಿ ಊಟಕ್ಕೆ ಬಂದಿದ್ದರು ಆದ್ದರಿಂದ ಸ್ವಲ್ಪದರೊಳಗೆ ದ್ರಾಕ್ಷೆಯ ರಸವೆಲ್ಲಾ ಮುಗಿದು ಹೋಯಿತು. ಅದರಿಂದ ಮದುಮಗನಿಗೆ ಬಹಳ ಚಿಂತೆ ಉಂಟಾಯಿತು. ಇದನ್ನು ನೋಡಿ ಮರಿಯಮ್ಮನು ಆತನ ಮೇಲೆ ಕನಿಕರ ಪಟ್ಟಳು. ಮತ್ತು ಜೇಸುನಾಥರ ಹತ್ತಿರ ಹೋಗಿ, "ಇವರಿಗೆ ದ್ರಾಕ್ಷೆಯ ರಸವು ಸಾಲದು" ಎಂದು ಮೆಲ್ಲಗೆ ಹೇಳಿದಳು. ಅದಕ್ಕೆ ಜೇಸುನಾಥರು "ಅದು ನಿನಗೂ ನನಗೂ ಏನು? ನನ್ನ ಕಾಲವು ಇನ್ನೂ ಬರಲಿಲ್ಲ" ಎಂದು ಹೇಳಿದರು.

ಆದರೆ ಜೇಸುನಾಥರು ಮನುಷ್ಯರನ್ನು ಎಷ್ಟು ಪ್ರೀತಿಸು

ತ್ತಿದ್ದರೆಂದು ಮರಿಯಮ್ಮನಿಗೆ ಗೊತ್ತಿತ್ತು ಆತನು ಜನರು ಕಷ್ಟದಲ್ಲಿರುವಾಗ ಸಹಾಯ ಮಾಡುತ್ತಾನೆಂದು ತಿಳಿದಿದ್ದಳು. ಆದ್ದರಿಂದ ತಾನು ಕೇಳಿದ್ದು ತಪ್ಪದೇ ನೆರವೇರಿಸುವರೆಂದು ತಿಳಿದು ಕನ್ಯ ಮರಿಯಮ್ಮನು ಸೇವಕರಿಗೆ ಇವರು ನಿಮಗೆ ಹೇಳುವದನ್ನು ಮಾಡಿರಿ, ಅಂದಳು. ಅಲ್ಲಿ ಒಂದು ಕೋಣೆ ಯಲ್ಲಿ ಆರು ನೀರಿನ ಹಂಡೆಗಳಿದ್ದವು. ಅವುಗಳನ್ನು ನೀರಿನಿಂದ ತುಂಬಿಸಿರಿ ಎಂದು ಜೇಸುನಾಥರು ಸೇವಕರಿಗೆ ಹೇಳಿದರು.

ಕೂಡಲೇ ಅವರು ವಿಧೇಯಿಸಿ ಹಂಡೆಗಳನ್ನು ಕಂಠದ ವರೆಗೆ ನೀರಿನಿಂದ ತುಂಬಿಸಿದರು. ಆಗ ಜೇಸುನಾಥರು ಆ ಹಂಡೆಯಲ್ಲಿದ್ದದ್ದನ್ನು ಸ್ವಲ್ಪ ತೆಗೆದುಕೊಂಡು ಹೋಗಿ ಉಗ್ರಾ ಣಿಕನಿಗೆ ಕೊಡಿರೆಂದು ಹೇಳಿದರು.

ಉಗ್ರಾಣಿಕನು ಸೇವಕರು ತಂದದ್ದನ್ನು ರುಚಿ ನೋಡಿ ದನು. ಅದು ಬಹಳ ಒಳ್ಳೆ ದ್ರಾಕ್ಷೆಯ ರಸವಾಗಿತ್ತು. ಅದನ್ನು ಕಂಡು ಬಹಳ ಆಶ್ಚರ್ಯ ಪಟ್ಟನು. ಅದು ಎಲ್ಲಿಂದ ಬಂತೆಂದು ತಿಳಿಯದೆ ಮದು ಮಗನನ್ನು ನೋಡಿ, "ಯಾರಾ ದರೂ ಮುಂಚೆ ಒಳ್ಳೇ ರಸವನ್ನು ಕೊಟ್ಟು ತರುವಾಯ ಕೀಳು ತರವಾದದನ್ನು ಕೊಡುತ್ತಾರೆ ಆದರೆ ನೀವು ಒಳ್ಳೇ ರಸವನ್ನು ಕಡೆಯಲ್ಲಿ ಕೊಡುತ್ತೀರಲ್ಲಾ" ಎಂದನು.

ಈ ಪ್ರಕಾರವಾಗಿ ಜೇಸುನಾಥರು ತಮ್ಮ ಮೊದಲನೇ ಅದ್ಭುತವನ್ನು ಗಲಿಲೀಯ ದೇಶದ ಕಾನಾನ್ ನಗರದಲ್ಲಿ ಮಾಡಿ ದರು. ತಮ್ಮ ತಾಯಿಯ ಮಾತನ್ನು ತೀರಿಸುವದಕ್ಕಾಗಿ ನೀರನ್ನು ರಸವಾಗಿ ಮಾರ್ಪಡಿಸಿದರು. ಇದರಿಂದ ಜೇಸುನಾ

ಥರು ತಮ್ಮ ತಾಯಿಯನ್ನು ಎಷ್ಟು ಪ್ರೀತಿಸುತ್ತಿದ್ದರೆಂದು ಕಂಡು ಬರುತ್ತದೆ. ನಾವು ಸಹ ಜೇಸುನಾಥರ ತಾಯಿಯಾದ ಮತ್ತು ನಮ್ಮ ತಾಯಿಯಾದ ಮರಿಯಮ್ಮನ ದ್ವಾರ ಏನಾದರೂ ಕೇಳಿದರೆ ತಪ್ಪದೇ ಕೊಡುವರು.

ಶಿಷ್ಯರು ಜೇಸುನಾಥರಿಗೆ ಇದ್ದ ಶಕ್ತಿಯನ್ನು ನೋಡಿದರು. ಜೇಸುನಾಥರಲ್ಲಿ ಹೆಚ್ಚು ನಂಬಿಕೆಯನ್ನಿಟ್ಟರು ತಮ್ಮ ದೈವತ್ವವನ್ನು ತೋರಿಸುವದಕ್ಕಾಗಿ ಜೇಸುನಾಥರು ಮಾಡಿದ ಅದ್ಭುತಗಳಲ್ಲಿ ಇದು ಮೊದಲನೇಯದಾಗಿತ್ತು.

ಆ ಸಮಯದಿಂದ ಜೇಸುನಾಥರ ಕೀರ್ತಿ ಎಲ್ಲಾ ಕಡೆಗೂ ಹಬ್ಬಿತು ಅನೇಕರು ಅವರನ್ನು ಕಾಣಲು ಬಂದರು. ಕುಂಟರು ಕುರುಡರು ಮೂಕರು ಕಿವುಡರೂ ಕುಷ್ಟರೋಗಿಗಳು ಮೊದಲಾದವರು ಸಹ ಅವರ ಹತ್ತಿರ ಬಂದರು. ಜೇಸುನಾಥರು ಜೂದೆಯಾ ಮತ್ತು ಗಲಿಲೀಯ ದೇಶದ ಎಲ್ಲ ಭಾಗಗಳಲ್ಲಿಯೂ ತಿರುಗಾಡಿ, ತಮ್ಮಲ್ಲಿ ನಂಬಿಕೆಯನ್ನಿಟ್ಟವರಿಗೆ ಸ್ವಸ್ಥವನ್ನು ಮಾಡುತ್ತಾ ಬಂದರು. ಕೊನೆಯಲ್ಲಿ ಸತ್ತವರನ್ನು ಸಹ ಜೀವದಿಂದ ಎಬ್ಬಿಸುತ್ತಿದ್ದರು

## 58 ದೇವಾಲಯದಲ್ಲಿ ವ್ಯಾಪಾರ ಮಾಡುತ್ತಿದ್ದವರು ಓಡಿಸಲ್ಪಟ್ಟಿದ್ದು

ಜೂದರು ಜೆರುಸಲೇಮಿನ ದೇವಾಲಯದಲ್ಲಿ ಪ್ರತಿ ವರ್ಷ ಪಾಸ್ಕ ಹಬ್ಬವನ್ನು ಕೊಂಡಾಡಲು ಹೋಗುತ್ತಿದ್ದರು ಆದ್ದರಿಂದ ಜೇಸುನಾಥರು ಸಹ ತಮ್ಮ ಶಿಷ್ಯರ ಸಂಗಡ ಅಲ್ಲಿಗೆ ಹೋದರು. ಜೇಸುನಾಥರು ದೇವಾಲಯವನ್ನು ಪ್ರವೇಶಿಸು

ತ್ತಲೇ ಅದರೊಳಗೆ ವ್ಯಾಪಾರಸ್ಥರು ದನಗಳನ್ನು, ಕುರಿಗಳನ್ನು, ಪಾರಿವಾಳಗಳನ್ನು ಮಾರುತ್ತಿರುವದನ್ನು ಕಂಡರು. ಇನ್ನೂ ಅಲ್ಲಿ ಹಣದ ಚಿಲ್ಲರೆಯನ್ನು ಮಾಡುವವರೂ ಇದ್ದರು.

ಜೇಸುನಾಥರು ಮಾರುವವರನ್ನೂ ಕೊಂಡು ಕೊಳ್ಳುವವ ರನ್ನೂ ನೋಡಿದರು. ಮತ್ತು ಅವರು ಅಲ್ಲಿ ಮಾಡುವ ಗದ್ದಲ ವನ್ನೂ ಕೇಳಿದರು. ಇದೆಲ್ಲವೂ ಅವರಿಗೆ ಬಹಳ ವ್ಯಸನವನ್ನುಂ ಟುಮಾಡಿತು. ಆದ್ದರಿಂದ ಕೈಯಲ್ಲಿ ಚಿ ಪ್ರಾಣಿಯನ್ನು ತೆಗೆದು ಕೊಂಡು ಅಲ್ಲಿದ್ದ ವ್ಯಾಪಾರಸ್ಥರನ್ನೆಲ್ಲ ಹೊಡೆಯುತ್ತ ಹೊರಗೆ ಓಡಿಸಿದರು. ಹಣದ ಮೇಜುಗಳನ್ನು ಕೆಳಗೆ ಕೆಡವಿದರು. ಪಾರಿ ವಾಳಗಳನ್ನು ಮಾರುವವರನ್ನು ಕಂಡು "ಇವುಗಳನ್ನು ತೆಗೆದು ಕೊಂಡು ಹೋಗಿರಿ. ನನ್ನ ತಂದೆಯ ಮನೆಯನ್ನು ಮಾರಾ ಟದ ಮನೆಯಾಗಿ ಮಾಡಬೇಡಿರಿ." ಎಂದರು.

ಜೂದರು ಬಹಳ ಕೋಪಗೊಂಡರು. ಜೇಸುನಾಥರು ಯಾವ ಅಧಿಕಾರದಿಂದ ಹೀಗೆ ಮಾಡುತ್ತಾರೆಂದು ತಮ್ಮ ಅಧಿ ಕಾರದ ಗುರ್ತನ್ನು ತೋರಿಸಬೇಕೆಂದು ಕೇಳಿದರು. ಅದಕ್ಕೆ ಜೇಸುನಾಥರು "ಈ ದೇವಾಲಯವನ್ನು ನೀವು ನಾಶನಮಾ ಡಿರಿ, ಇದನ್ನು ಮೂರು ದಿವಸಗಳೊಳಗೆ ತಿರುಗಿ ಕಟ್ಟುವೆನು" ಅಂದರು. ಹೀಗೆ ಅವರು ತಮ್ಮ ಶರೀರದ ವಿಷಯ ಮಾತಾ ಡಿದರು. ಆದರೆ ಇದು ಆಗ ಜೂದರಿಗೆ ತಿಳಿಯಲಿಲ್ಲ

ಆವಾಗ್ಗಿನಿಂದ ಫರಿಜೇಯರು ಮತ್ತು ವೇದ ಶಾಸ್ತ್ರಿಗಳು ಜೇಸುನಾಥರನ್ನು ವಿರೋಧಿಸಹತ್ತಿದರು. ಫರಿಜೇಯರೆಂಬವರು ಜೂದ ಜನರಲ್ಲಿ ವೇದವನ್ನು ಕಲಿತವರು. ಆದರೆ ಅವರು ಹೆಸ ರಿಗೆ ಮಾತ್ರ ವೇದವನ್ನು ಅನುಸರಿಸುತ್ತಿದ್ದರು. ಮತ್ತು ಕಪಟ

ಭಕ್ತರಾಗಿದ್ದರು. ಒಳ್ಳೇಯುವರಾಗಿ ಜೀವಿಸುತ್ತಿದ್ದಿಲ್ಲ. ದೇವರನ್ನು ಎಷ್ಟು ಮಾತ್ರವೂ ಪ್ರೇಮಿಸುತ್ತಿದ್ದಿಲ್ಲ. ಆದರೆ ತಮಗಿಂತಲೂ ಒಳ್ಳೇಯುವರು ಮತ್ತು ಜ್ಞಾನವುಳ್ಳವರು ಯಾರೂ ಇಲ್ಲವೆಂದು ನೆನಸುತ್ತಿದ್ದರು. ವೇದ ಶಾಸ್ತ್ರಿಗಳು ವೇದವನ್ನು ಕುರಿತು ಜನರಿಗೆ ಬೋಧಿಸುವಂಥವರು. ಈ ಫರಿಜೇಯರು ಮತ್ತು ಶಾಸ್ತ್ರಜ್ಞರು ಜೇಸುನಾಥರ ಮೇಲೆ ಹೊಟ್ಟಿಕಿಚ್ಚುಪಡಹತ್ತಿದರು. ಯಾಕಂದರೆ ಎಲ್ಲ ಜನರು ಜೇಸುನಾಥರನ್ನು ಪ್ರೇಮಿಸುತ್ತಿದ್ದರು. ಮತ್ತು ಜೇಸುನಾಥರು ಎಲ್ಲರಿಗೂ ಸ್ನೇಹಿತರಾಗಿದ್ದರು. ಅದಲ್ಲದೆ ಸುಂಕದವರನ್ನು ಪಾಪಾತ್ಮರನ್ನು ಹೆಚ್ಚಾಗಿ ಪ್ರೇಮಿಸುತ್ತಿದ್ದರಿಂದ ಅವರಲ್ಲಿ ತಪ್ಪನ್ನು ಕಂಡು ಹಿಡಿಯಲು ಪ್ರಯತ್ನಿಸುತ್ತಿದ್ದರು.

ಸುಂಕದವರೆಂದರೆ ರೋಮಾನ ರಾಜ್ಯದಲ್ಲಿ ಜೂದರಿಂದ ತೆರಿಗೆಯನ್ನು ಎತ್ತುವವರು. ಇವರು ತೆರಿಗೆ ಎತ್ತುವಾಗ ಕೆಲವು ಸಾರೆ ನಿರ್ಧಯರಾಗಿರುತ್ತಿದ್ದರು. ಆದರೆ ಜೂದರಿಗೆ ಇವರ ಮೇಲೆ ಬಹಳ ಸಿಟ್ಟು ಇತ್ತು.

ಆ ಕಾಲದಲ್ಲಿ ಜೂದರು ಇತರ ಜನಾಂಗದವರೊಂದಿಗೆ ಸೇರುವದು ತಪ್ಪೆಂದು ನೆನಸುತ್ತಿದ್ದರು. ಮತ್ತು ತಮ್ಮನ್ನು ತಾವೇ ಹೆಚ್ಚಿಸಿಕೊಳ್ಳುತ್ತಿದ್ದರು. ಆದರೆ ಜೇಸುನಾಥರು ಜೂದರ ಸಂಗಡಲೂ, ಸಾಮರ್ಯ್ರರಸಂಗಡಲೂ ಸುಂಕದವರ ಸಂಗಡಲೂ ಇದ್ದು, ಎಲ್ಲರೂ ಅರಿತ ಪಾಪಾತ್ಮರನ್ನು ಬಹಳವಾಗಿ ಪ್ರೇಮಿಸುತ್ತಿದ್ದರು. ಆದ್ದರಿಂದ ಫರಿಜೇಯರು ಇವರನ್ನು ವಿರೋಧಿಸಿ ಕೊಲ್ಲಲು ಯತ್ನಿಸಿದರು.

## 59 ಜೇಸುನಾಥರು ಸಮಾರಿಯಾ ಸ್ತ್ರೀಯುಸಂಗಡ ಮಾತನಾಡಿದ್ದು

ಆ ಕಾಲದಲ್ಲಿ ಜೇಸುನಾಥರು ಮತ್ತು ಅವರ ಶಿಷ್ಯರು ಜೂದೆಯ ದೇಶದಿಂದ ಗಲೀಲಿಯ ದೇಶಕ್ಕೆ ಪ್ರಯಾಣವಾಗಿ ಹೋಗುತ್ತಿದ್ದಾಗ ಸಮಾರ್ಯಾ ಪಟ್ಟಣವನ್ನು ಹಾದುಹೋದರು. ಆಗ ಅವರು ಅಲ್ಲಿ ಜಾಕೋಬನ ಬಾವಿಯ ಹತ್ತಿರ ಇಳಕೊಂಡರು.

ಜೇಸುನಾಥರು ಬಹಳ ಆಯಾಸಗೊಂಡದ್ದರಿಂದ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲು ಬಾವಿಯ ಕಲ್ಲಿನ ಮೇಲೆ ಕುಳಿತರು. ಅವರ ಶಿಷ್ಯರು ಭೋಜನಕ್ಕೆ ಬೇಕಾದ ಪದಾರ್ಥಗಳನ್ನು ತರಲು ಊರೊಳಗೆ ಹೋದರು. ಆಗ ಅಲ್ಲಿ ಸಮಾರಿತಾನಳೊಬ್ಬಳು ನೀರು ಸೇದಿಕೊಂಡು ಹೋಗಲು ಅಲ್ಲಿಗೆ ಬಂದಳು.

ಜೇಸುನಾಥರು ಅವರನ್ನು ನೋಡಿ; " ನನಗೆ ಸ್ವಲ್ಪ ನೀರನ್ನು ಕುಡಿಯಲು ಕೊಡು " ಅಂದರು. ಇದನ್ನು ಕೇಳಿ ಆಕೆ ಆಶ್ಚರ್ಯಪಟ್ಟು; ಏನು ನೀವು ಜೂದೇಯನಲ್ಲವೋ ಸಮರಿತಾನಳಾದ ನನ್ನಿಂದ ನೀರನ್ನು ಕೇಳಬಹುದೋ. " ? ಎಂದಳು.

ಅದಕ್ಕೆ ಜೇಸುನಾಥರು ನಿನ್ನಿಂದ ನೀರನ್ನು ಕೇಳುವಂಥವರು ಯಾರೆಂದು ನೀನು ತಿಳಿದುಕೊಂಡರೆ, ನೀನೇ ಅವರಿಂದ ನೀರನ್ನು ಕೇಳುವಿ; ಅವರು ನಿನಗೆ ಅತಿ ಉತ್ತಮವಾದ ಜೀವದ ನೀರನ್ನು ನಿನಗೆ ಕೊಡುವರೆಂದರು.

ಇದನ್ನು ಕೇಳಿ ಆ ಹೆಂಗಸು ಆಶ್ಚರ್ಯಪಡುತ್ತಾ " ಈ ಬಾವಿಯು ಬಹಳ ಆಳವಾಗಿದೆ ನೀರನ್ನು ಸೇದಿಕೊಳ್ಳಲು ನಿಮ್ಮ ಬಳಿಯಲ್ಲಿ ಯಾವ ವಸ್ತುವು ಇಲ್ಲ. ಹಾಗಾದರೆ ನೀವು ಜೀವದ ನೀರನ್ನು ಹೇಗೆ ಕೊಡುವಿರಿ ? ಎಂದಳು.

ಆಗ ಜೇಸುನಾಥರು ಪ್ರತ್ಯುತ್ತರವಾಗಿ ಈ ನೀರನ್ನು ಕುಡಿಯುವವರು ತಿರುಗಿ ದಾಹಗೊಳ್ಳುವರು. ಆದರೆ ನಾನು ಕೊಡುವ ನೀರನ್ನು ಕುಡಿಯುವವರು ಎಂದಿಗೂ ನೀರಡಿಸ ಲಾರರು " ಎಂದರು. ಅದಕ್ಕೆ ಆ ಸ್ತ್ರೀಯು ಹಾಗಾದರೆ ಆ ನೀರನ್ನು ನನಗೆ ಕೊಡಿರಿ ಆ ಮೇಲೆ ನಾನು ಸಹ ಎಂದಿಗೂ ನೀರಡಿಸದೆ ಇರಬಹುದು " ಎಂದಳು.

ಆಗ ಜೇಸುನಾಥರು ತಾವೇ ಕ್ರಿಸ್ತುನಾಥರೆಂದು ಆಕೆಗೆ ತಿಳಿಸಿದರು. ಮತ್ತು ಈಕೆಯು ತಾನು ಗುಟ್ಟಾಗಿ ಮಾಡಿದ ಪಾಪಗಳನ್ನು ಸಹ ಇವರು ಹೇಳಿದ್ದರಿಂದ ಬಹಳ ಆಶ್ಚರ್ಯ ಪಡಹತ್ತಿದಳು.

ಈ ಸಮಾರಿತನಳು ತನ್ನ ಊರಿಗೆ ತಿರುಗಿ ಹೋದಳು. ಅಲ್ಲಿ ಎಲ್ಲ ಜನರಿಗೂ ಜೇಸುನಾಥರು ಕ್ರೀಸುನಾಥರೆಂದು ತಿಳಿ ಸಿದಳು. ಮತ್ತು ಅವರು ರಹಸ್ಯವಾದ ಪಾಪಗಳನ್ನು ಸಹ ಹೇಳಬಲ್ಲರೆಂದಳು.

ಅಷ್ಟರೊಳಗೆ ಜೇಸುನಾಥರ ಶಿಷ್ಯರು ಅಲ್ಲಿಗೆ ತಿರುಗಿ ಬಂದರು. ಅವರು ತಂದ ಊಟವನ್ನು ಸ್ವಲ್ಪ ಭುಜಿಸಲು ಜೇಸುನಾಥರನ್ನು ಜುಲುಮೆ ಮಾಡಿದರು. ಆದರೆ ಜೇಸು ನಾಥರು " ನನ್ನನ್ನು ಕಳುಹಿಸಿದ ನನ್ನ ತಂದೆಯ ಚಿತ್ತವನ್ನು ಮಾಡುವದೇ ನನ್ನ ಭೋಜನವಾಗಿದೆ " ಎಂದರು.

ಕೂಡಲೇ ಸಮಾರ್ಯಸ್ತರು ಅಲ್ಲಿಗೆ ಬಂದು ಜೇಸುನಾಥರನ್ನು ನೋಡಿ ತಮ್ಮ ಕೂಡ ಇರಲು ಅವರನ್ನು ಕೇಳಿಕೊಂಡರು. ಹಾಗೆಯೇ ಜೇಸುನಾಥರು ಅವರ ಸಂಗಡ ಎರಡು ದಿವಸಗಳವರೆಗೆ ಇದ್ದು ಅವರಿಗೆ ವೇದದ ಸತ್ಯವನ್ನು ಭೋದಿಸಿದರು. ಆಗ ಆ ಜನರು ಜೇಸುನಾಥರನ್ನು ನಂಬಿ, ಸಮಾರ್ಯ ಸ್ತ್ರೀಯನ್ನು ಕಂಡು, ಈಗ ನಾವು ಇವರು ನಿಜವಾದ ಲೋಕ ರಕ್ಷಕರೆಂದು ತಿಳಕೊಂಡೆವು. ” ಅಂದರು.

ಅಲ್ಲಿಂದ ಜೇಸುನಾಥರು ಗಲೀಲೆಯ ದೇಶಕ್ಕೆ ಹಿಂತಿರುಗಿದರು. ಅಲ್ಲಿ ಸಿನಗೋಗಿನಲ್ಲಿ ಜನರಿಗೆ ಬೋಧಿಸುತ್ತಿದ್ದರು. ಸಿನಗೋಗುಗಳು ಅಂದರೆ ಜೂದರು ಆರಾಧಿಸಲು ಹೋಗುವದಕ್ಕೂ, ಮತ್ತು ಗುರುಗಳಿಂದ ವೇದದ ಅರ್ಥವನ್ನು ತಿಳಕೊಳ್ಳುವದಕ್ಕೂ ಏರ್ಪಡಿಸಿದ್ದಂಥಾ ಸ್ಥಳವು.

## 60 ಜೇಸುನಾಥರು ಪಕ್ಷವಾಯು ರೋಗಿಯನ್ನು ಗುಣಪಡಿಸಿದ್ದು

ಒಂದು ದಿನ ಜೇಸುನಾಥರು ಕಫಾರ್ನಾಹುಮ್ ಪಟ್ಟಣದಲ್ಲಿ ಒಂದು ಮನೆಯಲ್ಲಿ ಬೋಧಿಸುತ್ತಿದ್ದರು. ಆಗ ಅನೇಕ ಜನರು ಅವರ ಪ್ರಸಂಗಗಳನ್ನು ಕೇಳಲು ಅಲ್ಲಿಗೆ ಬಂದದ್ದರಿಂದ ಆ ಮನೆಯು ಜನಗುಂಪಿನಿಂದ ತುಂಬಿಹೋಗಿತ್ತು. ಬಾಗಿಲದಲ್ಲಿ ಸಹ ಸ್ವಲ್ಪ ಸ್ಥಳವೂ ಇರಲಿಲ್ಲ.

ಆಗ ಅಲ್ಲಿಗೆ ನಾಲ್ಕು ಮಂದಿ ಒಬ್ಬ ರೋಗಿಷ್ಟನನ್ನು ಎತ್ತಿಕೊಂಡು ಬಂದರು. ಆ ರೋಗಿಷ್ಟನು ಪಕ್ಷವಾಯು ವುಳ್ಳವನಾಗಿದ್ದದರಿಂದ ಕದಲಲಾರದೆ ಇದ್ದನು.

ಈ ನಾಲ್ಕು ಮಂದಿ ಆ ಕೋಣೆಯೊಳಗೆ ಪ್ರವೇಶಿಸಲು ಯತ್ನಿಸಿದರು. ಮತ್ತು ಆತನನ್ನು ಗುಣಪಡಿಸಬೇಕೆಂದು ಜೇಸುನಾಥರನ್ನು ಕೇಳಬೇಕೆಂದಿದ್ದರು.

ಆದರೆ ಜನ ಗುಂಪು ದೊಡ್ಡದಾಗಿದ್ದದರಿಂದ ಅವರಿಗೆ ಒಳಗೆ ಹೋಗಲು ಸಾಧ್ಯವಾಗಲಿಲ್ಲ. ಆದ ಕಾರಣ ಅವರು ಆ ವ್ಯಾದಿಷ್ಟನನ್ನು ಹಾಸಿಗೆಯೊಂದಿಗೆ ಮನೆಯ ಮೇಲಕ್ಕೆತ್ತಿ ಮಾಳಿಗೆಯ ಮೇಲೆ ಒಂದು ಕಿಂಡಿಯನ್ನು ಮಾಡಿ ಆ ವ್ಯಾದಿಷ್ಟನನ್ನು ಆ ಕಿಂಡಿಯ ಮೂಲಕವಾಗಿ ಮನೆಯೊಳಗೆ ಜೇಸುನಾಥರ ಮುಂದೆ ಇಳಿಸಿದರು.

ಜೇಸುನಾಥರು ಆ ನಾಲ್ಕು ಮಂದಿ ಮತ್ತು ವ್ಯಾದಿಷ್ಟನ ವಿಶ್ವಾಸವನ್ನು ನೋಡಿ ವ್ಯಾದಿಷ್ಟನಿಗೆ, ಹೇಳಿದ್ದೇನಂದರೆ, "ಮಗನೇ ನಿನ್ನ ಪಾಪಗಳು ಕ್ಷಮಿಸಲ್ಪಟ್ಟವು." ಎಂದು ವಚನಿಸಿದರು.

ಜೇಸುನಾಥರು ಹೇಳಿದ ಮಾತುಗಳನ್ನು ಕೇಳಿ ಅಲ್ಲಿದ್ದ ವೇದ ಪಾಠಕರು ಅವರಲ್ಲಿ ತಪ್ಪು ಕಂಡು ಹಿಡಿಯಲು ಯತ್ನಿಸಿದರು. ಜೇಸುನಾಥರು ದೇವದೂಷಣೆಯನ್ನು ಹೇಳುತ್ತಾರೆ. ಸರ್ವೇಶ್ವರನು ಒಬ್ಬರಿಂದ ಮಾತ್ರವೇ ಪಾಪಗಳನ್ನು ಕ್ಷಮಿಸಬಹುದೇ ವಿನಾ ಬೇರೆ ಯಾರಿಂದಲೂ ಕ್ಷಮಿಸ ಕೂಡುವದು ? ಎಂದು ನೆನಸುತ್ತಿದ್ದರು.

ಆಗ ಜೇಸುನಾಥರು ಅವರ ಆಲೋಚನೆಗಳನ್ನು ಅರಿತು ಅವರನ್ನು ನೋಡಿ, "ಯಾಕೆ ನೀವು ಹೀಗೆ ನಿಮ್ಮ ಹೃದಯಗಳಲ್ಲಿ ನೆನಸುತ್ತೀರಿ ? ನಿನ್ನ ಪಾಪಗಳು ಕ್ಷಮಿಸಲ್ಪಸ್ಟವು ಎನ್ನುವದು ಸುಲಭವೊ ಎದ್ದು ಮಂಚವನ್ನು ಎತ್ತಿಕೊಂಡು ನಡೆಯನ್ನುವದು ಸುಲಭವೋ ? ಆದರೆ ಭೂಲೋಕದಲ್ಲಿ ಪಾಪಗಳನ್ನು

ಕ್ಷಮಿಸಲು ದೇವರ ಮಗನಿಗೆ ಅಧಿಕಾರವಿದೆಯೆಂದು ನೀವು ಅರಿಯುವ ಹಾಗೆ ತೋರಿಸುವೆನು" ಎಂದರು.

ತರುವಾಯ ಪಕ್ಷ ವಾಯು ರೋಗಿಯ ಕಡೆಗೆ ತಿರುಗಿ "ನೀನು ಎದ್ದು, ನಿನ್ನ ಮಂಚವನ್ನು ಎತ್ತಿಕೊಂಡು ನಿನ್ನ ಮನೆಗೆ ಹೋಗು" ಎನ್ನಲಾಗಿ ಕೂಡಲೇ ಆ ರೋಗಿಷ್ಟನು ಎದ್ದು ನಿಂತನು. ತನ್ನ ಮಂಚವನ್ನು ಎತ್ತಿಕೊಂಡು ಅಲ್ಲಿದ್ದ ಜನ ಗುಂಪುಗಳ ಮುಂದೆ ತನ್ನ ಮನೆಗೆ ಹೋದನು.

ಈ ಅದ್ಭುತವನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಯಾಕೆಂದರೆ ದೇವರಿಗೆ ಮಾತ್ರ ಸಾಧ್ಯವಾದ ಕಾರ್ಯವನ್ನು ಜೇಸುನಾಥರು ಮಾಡುತ್ತಿದ್ದರು. ಈ ಅದ್ಭುತದಿಂದಲೂ ಮತ್ತು ಜೇಸುನಾಥರು ಹೇಳಿದ ವಾಕ್ಯಗಳಿಂದಲೂ ನಮಗೆ ತಿಳಿದು ಬರುವದೇನಂದರೆ, ದೇವರಿಗೆ ಪಾಪಗಳನ್ನು ಕ್ಷಮಿಸುವ ಶಕ್ತಿಯಿದೆಯೆಂದು ಕಂಡು ಬರುತ್ತದೆ. ತರುವಾಯ ಜೇಸುನಾಥರು ಇದನ್ನೆ ಪಾಪದ ಸಂಕೀರ್ತನೆಯೆಂಬ ದೇವದ್ರವ್ಯ ಅನುಮಾನವಾಗಿ ತಿರು ಸಭೆಗೆ ಕೊಟ್ಟರು. ಮತ್ತು ಪಾಪಗಳನ್ನು ಕ್ಷಮಿಸುವ ಅಧಿಕಾರವನ್ನು ತಮ್ಮ ಶಿಷ್ಯರಿಗೆ ಕೊಟ್ಟರು. ಅವರ ಸ್ಥಳದಲ್ಲಿ ಈಗ ಇರುವ ಎಲ್ಲಾ ಮೆತ್ರಾಣಿಗಳು ಗುರುಗಳಿಗೆ ಸಹ ಈ ಅಧಿಕಾರವು ಬಂದದರಿಂದ ಇವರು ಸಹ ಪಾಪಗಳನ್ನು ಕ್ಷಮಿಸಬಲ್ಲರು.

## 61 ಜೇಸುನಾಥರು ೧೨ ಮಂದಿ ಅಪೋಸ್ತಲರನ್ನು ಆರಿಸಿಕೊಂಡದ್ದು

ಜೇಸುನಾಥರು ಜಪ ಮಾಡಲು ಒಂದು ಪರ್ವತವನ್ನು ಹತ್ತಿದರು. ರಾತ್ರಿಯೆಲ್ಲ ಜಪಮಾಡಿದರು. ಮುಂಜಾನೆ ತಮ್ಮ

ಶಿಷ್ಯರನ್ನು ಹತ್ತಿರ ಕರೆದು ಅವರಲ್ಲಿ ಹನ್ನೆರಡು ಮಂದಿಯನ್ನು ಆರಿಸಿಕೊಂಡರು.

ಅವರು ಯಾರೆಂದರೆ, ರಾಯಪ್ಪನು ಮತ್ತು ಆತನ ಸಹೋದರನಾದ ಅಂದ್ರಿಯಪ್ಪನು; ಜಬದೇಯನ ಮಕ್ಕಳಾದ ಜಾಕೋಬನು ಮತ್ತು ಜುವಾನ್ನೇಸನು, ಫಿಲಿಯಪ್ಪನು ಮತ್ತು ಬರ್ತಲೋಮೆಯೆಂಬವನು, ಮತ್ತಾಯನು ಮತ್ತು ತೋಮಾಸನು ಅಲ್ಫೆಯೂಸನ ಮಕ್ಕಳಾದ ಜಾಕೋಬನು ಮತ್ತು ಜೂದಿಸ್ ತದ್ದೇಯೂಸನು, ಸಿಮೋನ್ ಜಲೋತಸ್ ಮತ್ತು ಜೂದಾಸ್ ಇಸ್ಕಾರಿಯೋತನು ಆಗಿದ್ದರು. ಈ ಹನ್ನೆರಡು ಮಂದಿ ಅಪೋಸ್ತಲರೆಂದು ಕರೆಯಲ್ಪಡುತ್ತಿದ್ದರು. ಇವರಿಗೆ ಜೇಸುನಾಥರು ಅಪೋಸ್ತಲರೆಂಬ ಹೆಸರನ್ನು ಕೊಟ್ಟು ತಮ್ಮ ಎಲ್ಲಾ ಶಿಷ್ಯರಿಗಿಂತಲೂ ಹೆಚ್ಚು ಅಧಿಕಾರವನ್ನು ಕೊಟ್ಟಿದ್ದರು.

ಜೇಸುನಾಥರು ತಮ್ಮನ್ನು ಹಿಂಬಾಲಿಸಿದ ಜನಗುಂಪನ್ನು ನೋಡಿ ಬಹಳ ವ್ಯಸನ ಪಟ್ಟರು. ಯಾಕೆಂದರೆ ಅವರು ಕುರುಬನಿಲ್ಲದ ಕುರಿಗಳ ಹಾಗೆ ಕಾಣಿಸುತ್ತಿದ್ದರು. ಆದ್ದರಿಂದ ಕರ್ತರು ತಮ್ಮ ಅಪೋಸ್ತಲರನ್ನು ನೋಡಿ ಹೇಳಿದ್ದೇನೆಂದರೆ, "ಬೆಳೆಯು ವಿಸ್ತಾರವಾಗಿದೆ ಆದರೆ ಕೆಲಸ ಮಾಡುವವರು ಕಡಿಮೆಯಾಗಿದ್ದಾರೆ. ಆದ್ದರಿಂದ ಹೆಚ್ಚು ಕೆಲಸಗಾರರನ್ನು ಕಳಿಸುವ ಹಾಗೆ ಪರಲೋಕದ ತಂದೆಯನ್ನು ಕುರಿತು ಪ್ರಾರ್ಥಿಸಿರಿ" ಅಂದರು.

ಒಂದು ರಾತ್ರಿ ಜಪ ಸಮಯದಲ್ಲಿ ಜೇಸುನಾಥರು ತಮ್ಮ ಹನ್ನೆರಡು ಮಂದಿ ಅಪೋಸ್ತಲರನ್ನು ಕರೆದು, "ನೀವು ಹೋಗಿ

ಪರಲೋಕದ ರಾಜ್ಯವು ಸಮೀಪಿಸಿರುವದೆಂದು ಜನರಿಗೆ ಬೋಧಿಸಿರಿ" ಎಂದರು.

ಜೇಸುನಾಥರು ಅವರಿಗೆ ರೋಗಿಷ್ಟರನ್ನು ಸ್ವಸ್ಥ ಮಾಡುವದಕ್ಕೂ, ಕುಷ್ಟವ್ಯಾಧಿಯನ್ನು ಗುಣಪಡಿಸುವದಕ್ಕೂ, ಸೈತಾನನನ್ನು ಓಡಿಸುವದಕ್ಕೂ, ಸತ್ತವರನ್ನು ಜೀವಂತರಾಗಿ ಎಬ್ಬಿಸುವದಕ್ಕೂ ಶಕ್ತಿಯನ್ನು ಕೊಟ್ಟರು. ಇನ್ನು ಹೇಳಿದ್ದೇನಂದರೆ "ಇವೆಲ್ಲವೂ ನಿಮಗೆ ಉಚಿತಾರ್ಥವಾಗಿ ಸಿಕ್ಕದ್ದರಿಂದ ನೀವು ಸಹ ಉಚಿತಾರ್ಥವಾಗಿ ಕೊಡಿರಿ. ನಿಮ್ಮ ಸಂಗಡ ಯಾವ ಹಣವನ್ನು ತೆಗೆದುಕೊಂಡು ಹೋಗಬೇಡಿರಿ. ಕೆಲಸಗಾರನು ತನ್ನ ಕೂಲಿಗೆ ತಕ್ಕವನಾಗಿದ್ದಾನೆ. ನೀವು ಯೋಗ್ಯ ವಾದವರಲ್ಲಿಗೆ ಹೋಗಿರಿ. ನೀವು ಯಾವದೊಂದು ಮನೆಯನ್ನು ಪ್ರವೇಶಿಸಿದ ಕೂಡಲೇ ಆ ಮನೆಗೆ ಸಮಾಧಾನ ಉಂಟಾಗಲಿ ಎಂದ ಹೇಳಿರಿ. ಆ ಮನೆಯು ಯೋಗ್ಯವಾಗಿದ್ದದ್ದಾದರೆ ನಿಜವಾಗಿ ಅದಕ್ಕೆ ಸಮಾಧಾನವು ಬರುವದು. ಯಾವದೊಂದು ಊರಾಗಲಿ, ಅಥವಾ ಮನೆಯಾಗಲಿ ನಿಮ್ಮನ್ನು ಸೇರಿಸಿಕೊಳ್ಳಲು ತಿರಸ್ಕರಿಸಿದರೆ ಆ ಸ್ಥಳವನ್ನು ಕೂಡಲೇ ಬಿಟ್ಟು ಬಿಡಿರಿ. ಮತ್ತು ಅದರ ಧೂಳವು ಸಹ ಅಂಟಿಕೊಳ್ಳದಂತೆ ನಿಮ್ಮ ಪಾದಗಳನ್ನು ಜಾಡಿಸಿರಿ. ಎಂದರು.

ತರುವಾಯ ಜೇಸುನಾಥರು ತಮ್ಮ ೭೨ ಮಂದಿ ಶಿಷ್ಯರನ್ನು ಸಹ; ದೇವರ ರಾಜ್ಯವನ್ನು ಕುರಿತು ಬೋಧಿಸುವದಕ್ಕಾಗಿ ಇಬ್ಬಿಬ್ಬರನ್ನು ಜತೆಯಾಗಿ ಊರೊಳಗೆ ಕಳುಹಿಸಿದರು. ಆಗ ಅವರಿಗೆ ಹೇಳಿದ್ದೇನಂದರೆ "ಇಗೋ ನಾನು ನಿಮ್ಮನ್ನು ಕುರಿಗಳ ಹಾಗೆ ತೋಳಗಳ ಮಧ್ಯದಲ್ಲಿ ಕಳಿಸುತ್ತೇನೆ. ಮನು

ಷ್ಯರು ನಿಮ್ಮನ್ನು ಬಾಧಿಸುವರು. ಅವರು ನಿಮ್ಮನ್ನು ಹೊಡೆಯುವರು. ನನ್ನ ಹೆಸರಿನ ಸಲುವಾಗಿ ನಿಮ್ಮನ್ನು ವಿರೋಧಿಸುವರು, ಆದರೆ ಯಜಮಾನನಿಗಿಂತ ಸೇವಕನು ಹೆಚ್ಚಿನವನಲ್ಲ. ಅವರು ನನ್ನನ್ನೇ ಕಷ್ಟಪಡಿಸಿದಾಗ ನಿಮಗೆಷ್ಟು ಮಾಡಬೇಡ? ಆದರೆ ಭಯ ಪಡ ಬೇಡಿರಿ. ಯಾಕಂದರೆ ಅವರು ಶರೀರವನ್ನು ಮಾತ್ರವೇ ಕೊಲ್ಲಬಹುದು. ಆದರೆ ನರಕದಲ್ಲಿ ಆತ್ಮವನ್ನು ಶರೀರವನ್ನು ನಾಶನ ಮಾಡುವಂಥವರಿಗೆ ಭಯಪಡಿರಿ" ಎಂದರು.

ಜೇಸುನಾಥರ ಶಿಷ್ಯರಲ್ಲಿ ಅನೇಕರು ವೇದ ಸಾಕ್ಷಿಗಳ ಮರಣವನ್ನು ಹೊಂದಿದರು.

## 62 ಜೇಸುನಾಥರು ಪರ್ವತದ ಮೇಲೆ ಮಾಡಿದ ಪ್ರಸಂಗವು.

ಜೇಸುನಾಥರು ಪ್ರಸಂಗ ಮಾಡಲು ಒಂದು ಪರ್ವತವನ್ನು ಹತ್ತಿ ಹೋದರು. ಅಲ್ಲಿಗೆ ಅನೇಕ ಜನರು ಅವರನ್ನು ಹಿಂಬಾಲಿಸಿ ಹೋದರು. ಆಗ ಜೇಸುನಾಥರು ಪರ್ವತದ ಒಂದು ಮಗ್ಗಲಿಗೆ ಕೂತು ಜನರಿಗೆ ಬೋಧಿಸತೊಡಗಿದರು ಏನಂದರೆ "ಮನೋದರಿದ್ರರು ಭಾಗ್ಯವಂತರು; ಯಾಕಂದರೆ ಪರಲೋಕ ರಾಜ್ಯವು ಅವರದಾಗಿದೆ.

"ಶಾಂತಗುಣವುಳ್ಳವರು ಭಾಗ್ಯವಂತರು; ಯಾಕಂದರೆ ಅವರು ಭೂಮಿಯನ್ನು ಸ್ವತಂತ್ರಿಸಿಕೊಳ್ಳುವರು.

"ಅಳುವವರು ಭಾಗ್ಯವಂತರು; ಯಾಕಂದರೆ, ಅವರು ಉಪಶಮನ ಹೊಂದುವರು.

"ನೀತಿಯ ಸಲುವಾಗಿ ಹಸಿದು ದಾಹಪಡುವವರು ಭಾಗ್ಯವಂತರು; ಯಾಕಂದರೆ ಅವರು ತೃಪ್ತಿ ಹೊಂದುವರು.

"ಕನಿಕರವುಳ್ಳವರು ಭಾಗ್ಯವಂತರು; ಯಾಕಂದರೆ ಅವರು ಕನಿಕರವನ್ನು ಹೊಂದುವರು.

"ಶುದ್ಧ ಹೃದಯವುಳ್ಳವರು ಭಾಗ್ಯವಂತರು; ಯಾಕಂದರೆ ಅವರು ಸರ್ವೇಶ್ವರನನ್ನು ನೋಡುವರು."

"ಸಮಾಧಾನ ಗುಣವುಳ್ಳವರು ಭಾಗ್ಯವಂತರು ಯಾಕಂದರೆ; ಅವರು ದೇವರ ಮಕ್ಕಳೆಂದು ಕರೆಯಲ್ಪಡುವರು.

"ನೀತಿಗೋಸ್ಕರ ಉಪದ್ರವಪಡುವವರು ಭಾಗ್ಯವಂತರು: ಯಾಕಂದರೆ ಪರಲೋಕ ರಾಜ್ಯವು ಅವರದಾಗಿದೆ.

"ಪರರು ನಿಮ್ಮನ್ನು ಅನ್ಯಾಯವಾಗಿ ಅವಮಾನಪಡಿಸಿ ನಿಮ್ಮನ್ನು ಬಾಧಿಸಿ ಚಿತ್ರಯಿಸುವಾಗ ನೀವು ತಾಳ್ಮೆಯುಳ್ಳವರಾಗಿದ್ದರೆ ನೀವು ಭಾಗ್ಯವಂತರು; ನಿಮಗೆ ಮೋಕ್ಷದಲ್ಲಿ ನಿಯಮಿಸಲ್ಪಟ್ಟಿರುವ ಸಂಭಾವನೆಯು ಮಹಾ ದೊಡ್ಡದಾಗಿರುದದು. ಆದುರಿಂದ ನೀವು ಸಂತೋಷಪಟ್ಟು ಆನಂದಿಸುವಿರಾಗಲಿ."

"ನಾನು ವೇದದ ಕಟ್ಟಳೆಯನ್ನು ನಾಶನ ಮಾಡಲು ಬಂದೆನೆಂದು ತಿಳಿಯಬೇಡಿರಿ. ಆದರೆ ಆ ಕಟ್ಟಳೆಗಳನ್ನು ಪೂರ್ತಿಗೊಳಿಸಲು ಬಂದಿರುತ್ತೇನೆ; ನಿಮ್ಮನ್ನು ವಿರೋಧಿಸುವವರನ್ನು ಪ್ರೇಮಿಸಿ, ಅವರಿಗೆ ಒಳ್ಳೇದನ್ನು ಮಾಡಿರಿ. ಯಾಕಂದರೆ ನಿಮ್ಮನ್ನು ಪ್ರೇಮಿಸುವವರನ್ನು ನೀವು ಪ್ರೇಮಿಸಿದರೆ ಯಾವ ಸಂಭಾವನೆಗೆ ಪಾತ್ರರಾಗುವಿರಿ ? ಹೀಗೆ ಅಜ್ಞಾನಿಗಳು ಸಹ ಮಾಡುವವರಲ್ಲವೋ.

ನಿಮ್ಮ ಪರಲೋಕ ಪಿತನು ಸಂಪೂರ್ಣರಾಗಿರುವ ಹಾಗೆ ನೀವು ಸಹ ಸಂಪೂರ್ಣರಾಗಿರ್ರಿ. ನೀವು ಇತರರನ್ನು ತೀರ್ಮಾನಿಸಬೇಡಿರಿ. ಆಗ ನೀವು ಸಹ ತೀರ್ಮಾನಿಸಲ್ಪಡಲಾರಿರಿ. ನಿನ್ನ ಸಹೋದರನ ಕಣ್ಣಿನೊಳಗಿರುವ ರವೆಯನ್ನು ನೋಡುತ್ತೀ. ಆದರೆ ನಿನ್ನ ಕಣ್ಣಿನೊಳಗಿರುವ ತೊಲೆಯನ್ನು ನೋಡದೇ ಇರುವದೇನು ? ಮೊದಲು ನಿನ್ನ ಕಣ್ಣಿನೊಳಗಿರುವ ತೊಲೆಯನ್ನು ತೆಗೆದು ಹಾಕು. ಆ ಮೇಲೆ ನಿನ್ನ ಸಹೋದರನ ಕಣ್ಣಿನಲ್ಲಿರುವ ರವೆಯನ್ನು ತೆಗೆಯಬಹುದು.

" ಕಳ್ಳ ದೀರ್ಘ ದರ್ಶಿಗಳನ್ನು ಕುರಿತು ಎಚ್ಚರಿಕೆಯಾಗಿರ್ರಿ. ಅವರು ನಿಮ್ಮ ಬಳಿಗೆ ಕುರಿಯ ಚರ್ಮವನ್ನು ಧರಿಸಿಕೊಂಡು ಬರುವರು. ಆದರೆ ಅಂತರಂಗದಲ್ಲಿ ಹರಿದು ತಿನ್ನುವ ತೋಳಗಳಾಗಿರುತ್ತಾರೆ. ಪ್ರತಿಯೊಂದು ಒಳ್ಳೇ ಮರವು ಒಳ್ಳೇ ಫಲವನ್ನು ಕೊಡುವದು. ಮತ್ತು ಪ್ರತಿಯೊಂದು ಕೆಟ್ಟ ಮರವು ಕೆಟ್ಟ ಫಲವನ್ನು ಕೊಡುವದು. ನನ್ನನ್ನು ನೋಡಿ, ಆಳಿದವರೇ, ಆಳಿದವರೇ ಎಂದು ಕರೆಯುವವರೆಲ್ಲರೂ ಮೋಕ್ಷ ರಾಜ್ಯವನ್ನು ಪ್ರವೇಶಿಸಲಾರರು. ಆದರೆ ನನ್ನ ತಂದೆಯ ಚಿತ್ತವನ್ನು ನೆರವೇರಿಸುವವರು ಮಾತ್ರ ಅದನ್ನು ಪ್ರವೇಶಿಸುವರು. ಈ ಪ್ರಕಾರವಾಗಿ ಜೇಸುನಾಥರು ವಚನಿಸಿದ ಈ ಎಂಟು ವಚನಗಳಿಗೆ, ಅಷ್ಟ ಭಾಗ್ಯಗಳೆಂದು ಹೆಸರು.

## 63 [೨] ಜೇಸುನಾಥರು ಒಬ್ಬ ಶತಾಧಿಪತಿಯ ಸೇವಕನನ್ನು ಸ್ವಸ್ಥ ಮಾಡಿದ್ದು.

ಆ ಕಾಲದಲ್ಲಿ ರೋಮಾನರು ಶತಾಧಿಪತಿಯೆಂಬ ಅಧಿಕಾರಸ್ಥನ ಕೈಕೆಳಗೆ ಇರುತ್ತಿದ್ದರು. ಕಫರ್ನಾಮುದ ಶತಾಧಿ

ಪತಿಗೆ ಒಬ್ಬ ಸೇವಕನಿದ್ದನು. ಆತನನ್ನು ಅಧಿಕಾರಿ ಬಹಳ ವಾಗಿ ಪ್ರೀತಿಸುತ್ತಿದ್ದನು. ಒಂದು ದಿವಸ ಈ ಸೇವಕನಿಗೆ ಜಡ್ಡಾಗಿ ಮರಣ ಹೊಂದಲು ಸಿದ್ಧನಾಗಿದ್ದನು.

ಆಗ ಶತಾಧಿಪತಿಯು ಜೇಸುನಾಥರ ಬಳಿಗೆ ಹೋಗಿ "ಆಳಿದವರೇ ನನ್ನ ಸೇವಕನು ವ್ಯಾಧಿಯಾಗಿ ಮನೆಯಲ್ಲಿ ಮಲಗಿದ್ದಾನೆ," ಎಂದನು ಅದಕ್ಕೆ ಜೇಸುನಾಥರು "ನಾವು ಬಂದು ಸ್ವಸ್ಥ ಪಡಿಸುವೆವು" ಎಂದರು. ಆದರೆ ಶತಾಧಿಪತಿ ಹೇಳಿದ್ದೇನಂದರೆ, ಆಳಿದವರೇ ತಾವು ನನ್ನ ಮನೆಯನ್ನು ಪ್ರವೇಶಿಸಲು ನಾನು ಪಾತ್ರನಲ್ಲ. ಆದರೆ ತಾವು ಒಂದು ವಾಕ್ಯ ಮಾತ್ರ ಪಾಲಿಸಿದರೆ ನನ್ನ ಸೇವಕನು ಗುಣ ಹೊಂದುವನು. ಯಾಕಂದರೆ ನನ್ನ ಕೈ ಕೆಳಗೆ ಸಹ ಅನೇಕ ಮಂದಿ ಸೇವಕರಿರುವರು. ನಾನು ಅವರಿಗೆ ಏನಾದರೂ ಹೇಳಿದ ಕೂಡಲೇ ವಿಧೇಯಿಸಿ ಮಾಡುವರು.

ಜೇಸುನಾಥರು ಈ ಶತಾಧಿಪತಿಯ ಮಾತನ್ನು ಕೇಳಿ ಆಶ್ಚರ್ಯ ಪಟ್ಟು ಸಂತೋಷಿಸಿ, ತಮ್ಮನ್ನು ಹಿಂಬಾಲಿಸಿದವರನ್ನು ನೋಡಿ ಹೀಗೆಂದರು "ನಾನು ಇಸ್ರಾಯೇಲರಲ್ಲಿ ಇಂಥ ವಿಶ್ವಾಸವನ್ನು ಕಾಣಲಿಲ್ಲ" ಎಂದು ಶತಾಧಿಪತಿಯ ಕಡೆಗೆ ತಿರುಗಿ, "ನೀನು ಹೋಗು," ನಿನ್ನ ವಿಶ್ವಾಸದ ಪ್ರಕಾರ ನಿನಗೆ ಆಗಲಿ," ಎಂದರು. ಹಾಗೆಯೇ ಅವನ ಸೇವಕನು ಸ್ವಸ್ಥವಾದನು.

ಈ ಪ್ರಕಾರವಾಗಿ ನಾವು ಸಹ ನಮ್ಮ ಅವಸರಗಳಲ್ಲಿ ಅಧಿಕ ವಿಶ್ವಾಸದೊಂದಿಗೆ ಜೇಸುನಾಥರನ್ನು ಬೇಡಿಕೊಳ್ಳಬೇಕು.

## 64 (ಬಿ) ಜೇಸುನಾಥರು ಒಬ್ಬ ವಿಧವೆಯ ಮಗನನ್ನು ಎಬ್ಬಿಸಿದ್ದು

ಜೇಸುನಾಥರು ತಮ್ಮ ಶಿಷ್ಯರೊಂದಿಗೆ ನಾಯಿಮ್ ಎಂಬ ಪಟ್ಟಣಕ್ಕೆ ಹೋದರು. ಒಂದು ದೊಡ್ಡ ಜನ ಗುಂಪು ಅವರನ್ನು ಹಿಂಬಾಲಿಸಿತ್ತು. ಅವರು ಆ ಪಟ್ಟಣದ ಹೆಬ್ಬಾಗಿಲದ ಬಳಿ ಇದ್ದಾಗ ಜನರು ಒಂದು ಪ್ರೇತವನ್ನು ಹೊತ್ತುಕೊಂಡು ಅವರ ಎದುರಿಗೆ ಬರುತ್ತಿದ್ದರು. ಈ ಪ್ರೇತದ ಕೂಡ ಅನೇಕ ಜನರು ಸಹ ಬರುತ್ತಿದ್ದರು. ಸತ್ತ ಮನುಷ್ಯನು ಒಬ್ಬ ವಿಧವೆಯ ಒಬ್ಬನೇ ಮಗನಾಗಿದ್ದನು. ತಾಯಿಯು ಪ್ರೇತದ ಹಿಂದೆ ಅಳುತ್ತಾ ಹೋಗುತ್ತಿದ್ದಳು. ಜೇಸುನಾಥರು ಆಕೆಯ ದುಃಖವನ್ನು ಕಂಡು ಆಕೆಯ ಮೇಲೆ ಕನಿಕರಪಟ್ಟು, "ಅಳಬೇಡ" ಎಂದು ಹೇಳಿ ಆ ಪ್ರೇತದ ಬಳಿಗೆ ಹೋಗಿ ಆ ಸತ್ತ ಮನುಷ್ಯನನ್ನು ನೋಡಿ "ಯೌವನಸ್ತನೆ, ಎದ್ದೇಳು" ಎಂದ ಕೂಡಲೇ ಆ ವಿಧವೆಯ ಮಗನು ಎದ್ದು ಕುಳಿತು ಮಾತಾಡಲಾರಂಭಿಸಿದನು. ಜೇಸುನಾಥರು ಆತನನ್ನು ಆತನ ತಾಯಿಗೆ ಒಪ್ಪಿಸಿದರು. ಇದನ್ನು ನೋಡಿ ಅಲ್ಲಿದ್ದ ಜನರು ಆಶ್ಚರ್ಯಪಡಹತ್ತಿದರು. ಮತ್ತು ನಮ್ಮ ಮಧ್ಯದಲ್ಲಿ ಒಬ್ಬ ಮಹಾ ದೀರ್ಘದರ್ಶಿಯು ಕಾಣಿಸಿದ್ದಾರೆ; ಕರ್ತರು ತಮ್ಮ ಪ್ರಜೆಯನ್ನು ಸಂಧಿಸಿದರೆಂದರು.

ಈ ಅದ್ಭುತವು ಸ್ವಲ್ಪದರೊಳಗೆ ಜೂದೆಯಾ ದೇಶದಲ್ಲೆಲ್ಲಾ ಹರಡಿತು. ಇದರಿಂದ ಜೇಸುನಾಥರು ನಿಜವಾಗಿ ದೇವರೆಂದು ಗೊತ್ತಾಯಿತು. ಯಾಕಂದರೆ ಇವರು ಸತ್ತವರಿಗೆ ಜೀವವನ್ನು ಕೊಡುತ್ತಿದ್ದರು. ನಾವು ಜೇಸುನಾಥರಲ್ಲಿ ನಂಬಿಕೆಯನ್ನಿ

ಟ್ಟರೆ ನಮಗೆ ಸಹ ಅದ್ಭುತ ಕಾರ್ಯಗಳನ್ನು ಮಾಡಬಹುದು. ಮತ್ತು ವಿಧವೆಯ ಸ್ತ್ರೀಯ ಮೇಲೆ ಕನಿಕರ ಪಟ್ಟ ಹಾಗೆ ನಮ್ಮ ಮೇಲೆ ಸಹ ಕನಿಕರ ಪಡಬಹುದು.

## 65 ಜೇಸುನಾಥರು ಮರಿಯ ಮಗ್ದಲೇನಮ್ಮನ ಪಾಪಗಳನ್ನು ಮನ್ನಿಸಿದ್ದು

ಒಂದು ದಿನ ಸಿಮೋನನೆಂಬ ಫರಿಜೇಯನೊಬ್ಬನು ಜೇಸುನಾಥರನ್ನು ತನ್ನ ಮನೆಗೆ ಊಟಕ್ಕೆ ಕರೆದಿದ್ದನು. ಇವರು ಬೇರೆ ಇತರ ಜನರೊಂದಿಗೆ ಭೋಜನ ಪಂಕ್ತಿಯಲ್ಲಿ ಕುಳಿತು ಕೊಂಡಿದ್ದಾಗ ಒಬ್ಬ ಸೌಂದರ್ಯವಾದ ಹೆಂಗಸು ಅಲ್ಲಿಗೆ ಬಂದಳು.

ಈಕೆಯ ಹೆಸರು ಮರಿಯ ಮಗ್ದಲೇ ನಮ್ಮ. ಈಕೆಯು ದೊಡ್ಡ ಪಾಪಿಷ್ಟಳೆಂದು ಎಲ್ಲ ಜನರಿಗೂ ಗೊತ್ತಿತ್ತು. ಆದರೂ ಒಂದು ಪರಿಮಳ ತೈಲದ ಸೀಸೆಯನ್ನು ತೆಗೆದುಕೊಂಡು ಜೇಸುನಾಥರು ಇದ್ದ ಕಡೆಗೆ ಅಳುತ್ತಾ ಹೋಗಿ ಅವರ ಪಾದದ ಮೇಲೆ ಬಿದ್ದಳು. ಮತ್ತು ತನ್ನ ಕಣ್ಣೀರಿನಿಂದ ಅವರ ಪಾದಗಳನ್ನು ತೊಳೆದು, ತನ್ನ ಉದ್ದವಾದ ಮತ್ತು ಸುಂದರವಾದ ಕೂದಲುಗಳಿಂದ ಅವುಗಳನ್ನು ಒರಸಿ ಬಹಳ ದುಃಖದಿಂದ ಅಲ್ಲೇ ಕೂತಿದ್ದಳು. ಕಡೆಗೆ ತಾನು ತಂದ ಪರಿಮಳ ತೈಲವನ್ನು ಅವರ ಪಾದದ ಮೇಲೆ ಸುರುವಿದಳು.

ಆಗ ಸಿಮೋನ್ ಫರಿಜೇಯನು ಮರಿಯಮ್ಮನು ಮಾಡಿದೆಲ್ಲವನ್ನು ಕಂಡು ತನ್ನ ಮನಸ್ಸಿನಲ್ಲಿ ಅಂದದ್ದೇನಂದರೆ, "ಇವರು ನಿಜವಾದ ದೀರ್ಘದರ್ಶಿಯಾಗಿದ್ದರೆ ತನ್ನನ್ನು ಮುಟ್ಟಿದ ಸ್ತ್ರೀ

ಯು ಯಾರು ಮತ್ತು ಎಂಥವಳೆಂದು ಅರಿಯುತ್ತಿದ್ದರು ಎಂದು ನೆನಸುತ್ತಿದ್ದನು.

ಜೇಸುನಾಥರು ಫರಿಜೇಯನ ಆಲೋಚನೆಗಳನ್ನು ತಿಳಿಕೊಂಡು "ಸಿಮೋನನೇ ನಾನು ನಿನಗೆ ಒಂದು ಪ್ರಶ್ನೆಯನ್ನು ಕೇಳುತ್ತೇನೆ" ಎಂದರು.

ಆಗ ಸಿಮೋನನು "ಗುರುವೇ ಹೇಳಿರಿ" ಎಂದನು.

ಆಗ ಜೇಸುನಾಥರು "ಒಬ್ಬ ಮನುಷ್ಯನಿಗೆ ಇಬ್ಬರು ಸಾಲಗಾರರಿದ್ದರು, ಅವರಲ್ಲಿ ಒಬ್ಬನು ಅವನಿಗೆ ಇನ್ನೂರು ಚಿನ್ನದ ನಾಣ್ಯಗಳನ್ನು ಕೊಡಬೇಕಾಗಿತ್ತು; ಮತ್ತೊಬ್ಬನು ಐವತ್ತು ಕೊಡಬೇಕಾಗಿತ್ತು; ಇವರಿಬ್ಬರಿಗೆ ತಮ್ಮ ಸಾಲವನ್ನು ತೀರುಸುವದಕ್ಕೆ ಆಗಲಿಲ್ಲ. ಆದ್ದರಿಂದ ಯಜಮಾನನು ಅವರನ್ನು ಮಾಫುಮಾಡಿದನು ಈ ಇಬ್ಬರು ಸಾಲಗಾರರಲ್ಲಿ ಯಾವನು ಇವನನ್ನು ಅಧಿಕವಾಗಿ ಸ್ನೇಹಿಸುವನೆಂಬದಾಗಿ ನೆನಸುತ್ತೀ ಎಂದು ಕೇಳಿದರು.

ಅದಕ್ಕೆ ಸಿಮೋನನು "ಯಾರಿಗೆ ಅಧಿಕವಾಗಿ ಮನ್ನಿಸಿದನೋ ಅವನೇ" ಎಂದು ಹೇಳಲು, ಕರ್ತರು "ನೀನು ಹೇಳಿದ್ದು ಸರಿಯೇ; ಎಂದರು.

ಮರಿಯ ಮಗ್ದಲೇನಮ್ಮನ ಬಳಿಗೆ ತಿರುಗಿ, ಜೇಸುನಾಥರ್ರು ಹೇಳಿದ್ದೇನಂದರೆ– "ನೀನು ಈ ಹೆಂಗಸನ್ನು ನೋಡಿದಿಯಾ ? ನಾನು ನಿನ್ನ ಮನೆಯನ್ನು ಪ್ರವೇಶಿಸಿದಾಗ ನೀನು ನನ್ನ ಪಾದಗಳಿಗೆ ನೀರನ್ನು ಕೊಡಲಿಲ್ಲ. ಆದರೆ ಆಕೆಯು ತನ್ನ ಕಣ್ಣೀರಿನಿಂದ ನನ್ನ ಪಾದಗಳನ್ನು ತೊಳೆದು ತನ್ನ ತಲೆಕೂದಲುಗಳಿಂದ

ಅವುಗಳನ್ನು ಒರಸಿದಳು. ನೀನು ನನಗೆ ಮುದ್ದನ್ನು ಕೊಡಲಿಲ್ಲ. ಆದರೆ ಆಕೆಯು ಬಂದಾಗಿನಿಂದಲೂ ನನ್ನ ಪಾದಗಳನ್ನು ಮುದ್ದಿಕ್ಕುವದನ್ನು ನಿಲ್ಲಿಸಿಲ್ಲ. ನೀನು ನನ್ನ ತಲೆಗೆ ತೈಲವನ್ನು ಹಚ್ಚಲಿಲ್ಲ. ಆದರೆ ಆಕೆ ತನ್ನ ಪರಿಮಳ ತೈಲವನ್ನು ನನ್ನ ಪಾದಗಳ ಮೇಲೆ ಸುರಿಸಿದಳು. ಈ ಸ್ತ್ರೀಯು ನಮ್ಮನ್ನು ಅಧಿಕವಾಗಿ ಸ್ನೇಹಿಸಿದ್ದರಿಂದ ಈಕೆಗೆ ಅಧಿಕವಾದ ಪಾಪಗಳು ಕ್ಷಮಿಸಲ್ಪಟ್ಟವು. ಕಡಿಮೆಯಾಗಿ ಸ್ನೇಹಿಸುವವನಿಗೆ ಕಡಿಮೆ ಪಾಪಗಳು ಕ್ಷಮಿಸಲ್ಪಡುವವು" ಎಂದರು.

ಜೇಸುನಾಥರು ಮರಿಯಮಗ್ದಲೇನಮ್ಮಳನ್ನು ನೋಡಿ "ನಿನ್ನ ಪಾಪಗಳು ಕ್ಷಮಿಸಲ್ಪಟ್ಟವು. ನೀನು ಸಮಾಧಾನದಿಂದ ಹೋಗು, ಯಾಕಂದರೆ ನಿನ್ನ ವಿಶ್ವಾಸವು ನಿನ್ನನ್ನು ಕಾಪಾಡಿತು" ಎಂದರು.

ಆದರೆ ಅಲ್ಲಿದ್ದವರೆಲ್ಲ ತಮ್ಮೊಳಗೆ ತಾವು, ಈತನು ಯಾರು? ಪಾಪಗಳನ್ನು ಸಹ ಕ್ಷಮಿಸುವಂಥವನು ಎನ್ನಹತ್ತಿದರು.

## 66 (ಎ) ಜೇಸುನಾಥರು ಬಿರುಘಾಳಿಯನ್ನು ನಿಲ್ಲಿಸಿದ್ದು.

ಅಂದ್ರಿಯಪ್ಪನು ಮತ್ತು ಜ್ವಾನ್ನೀಸನು ಜೇಸುನಾಥರನ್ನು ಹಿಂಬಾಲಿಸಿದಂದಿನಿಂದ ಅನೇಕರು ಅವರನ್ನು ನಂಬಿ ಅಲ್ಲಿಗೆ ಬಂದರು. ಇವರು ಜೇಸುನಾಥರ ಶಿಷ್ಯರಾದರು.

ಜೇಸುನಾಥರು ತಮ್ಮ ಪ್ರಸಂಗವನ್ನು ಕೇಳಲಿಕ್ಕೆ ಬಂದ ಜನರಿಗಿಂತಲೂ ತಮ್ಮ ಶಿಷ್ಯರಿಗೆ ಅಧಿಕವಾಗಿ ಕಲಿಸಿದರು.

ಅನೇಕ ಸಾರಿ ಭವಿಷತ್ಕಾಲದಲ್ಲಿ ಜರುಗಲಿಕ್ಕಿರುವ ಸಂಗತಿಗಳನ್ನು ಸಹ ಅವರಿಗೆ ತಿಳಿಸಿದ್ದರು. ಮತ್ತು ತಮ್ಮಲ್ಲಿ ಅಧಿಕವಾದ ವಿಶ್ವಾಸವನ್ನಿಡಬೇಕೆಂದು ಹೇಳಿದ್ದರು.

ಒಂದು ದಿನ ಜೇಸುನಾಥರು ಒಂದು ಹಡಗವನ್ನೇರಿ ಜನರಿಗೆ ಪಸ್ರಂಗವನ್ನು ಮಾಡುತ್ತಿದ್ದರು ತಮ್ಮ ಪ್ರಸಂಗವು ತೀರಿದ ಬಳಿಕ ಆ ಹಡಗವನ್ನು ಸರೋವರದ ಇನ್ನೊಂದು ಕಡೆಗೆ ತೆಗೆದುಕೊಂಡು ಹೋಗಲು ತಮ್ಮ ಶಿಷ್ಯರಿಗೆ ತಿಳಿಸಿದರು. ಅವರು ಬಹಳ ಆಯಾಸಗೊಂಡದ್ದರಿಂದ ಅದರಲ್ಲಿ ಮಲಗಿ ನಿದೆ ಮಾಡುತ್ತಿದ್ದರು

ಆಗ ಒಂದು ತುಫಾನು ಎದ್ದಿತು. ಬಿರುಘಾಳಿಯು ಬೀಸಲಾಗಿ ಅಲೆಗಳು ಮನೆಗಳಷ್ಟು ಎತ್ತರ ಎದ್ದು ಹಡಗದಲ್ಲಿ ನೀರು ಹೊಕ್ಕಿತು.

ಆ ಹಡಗವು ಮುಳುಗಿ ಹೋಗುವದೆಂದು ಶಿಷ್ಯರು ಭಯಪಟ್ಟು, ಅವರಬಳಿಗೆ ಓಡಿ ಬಂದು, ಆಳಿದವರೇ ಮುಣುಗಿ ಹೋಗುತ್ತೇವೆ; ನಮ್ಮನ್ನು ರಕ್ಷಿಸಿರೆಂದು ಕೂಗಿ ಅವರನ್ನು ಎಬ್ಬಿಸಿದರು. ಜೇಸುನಾಥರು ಎಚ್ಚತ್ತು ನೋಡಿ, ಅಲ್ಪ ವಿಶ್ವಾಸಿಗಳೇ, ಯಾಕೆ ಭಯಪಡುತ್ತೀರಿ ? ನಾನು ನಿಮ್ಮೊಂದಿಗೆ ಇಲ್ಲವೋ ? ಎಂದು ಹೇಳಿ, ಎದ್ದು ನಿಂತು, ಘಾಳಿ ನಿಂತು ಸಮುದ್ರವು ಶಾಂತವಾಗಲಿ, ಅಂದಾಕ್ಷಣವೇ ಎಲ್ಲಾ ನಿಂತು ಶಾಂತವಾಯ್ತು. ಶಿಷ್ಯರು ಇದನ್ನು ನೋಡಿ, ಬಹು ಆಶ್ಚರ್ಯಪಟ್ಟು, ಇವರು ಯಾರು ? ಘಾಳಿಗೂ, ಸಮುದ್ರಕ್ಕೂ ಕಟ್ಟಳೆ ಮಾಡಿದರೆ ಅವು ಇವರಿಗೆ ವಿಧೇಯಿಸುತ್ತವೆ, ಅಂದುಕೊಳ್ಳುತ್ತಿದ್ದರು.

## 67 (ಬಿ) ಅದ್ಭುತವಾದ ಮೀನಗಳ ಬೇಟೆಯು

ಒಂದು ದಿನ ಜೇಸುನಾಥರು ಜನಸರೆಸ್ತ್ರ ಸರೋವರದ ಬಳಿಯಲ್ಲಿ ನಿಂತಿದ್ದರು. ಆಗ ಅಲ್ಲಿ ದಂಡೆಯ ಮೇಲೆ ಎರಡು ಡೋಣಿಗಳು ಇದ್ದವು. ಅವುಗಳಲ್ಲಿ ಒಂದು ಸಿಮೋನ್ ರಾಯಪ್ಪನವರದಾಗಿತ್ತು.

ಜೇಸುನಾಥರು ರಾಯಪ್ಪನ ದೋಣಿಯನ್ನು ಹತ್ತಿ; ಅದನ್ನು ಆಳವಾದ ನೀರಿದ್ದ ಕಡೆಗೆ ನಡೆಸಿಕೊಂಡು ಹೋಗಿ ಅಲ್ಲಿ ಆತನ ಬಲೆಯನ್ನು ಬೀಸಲು ಹೇಳಿದರು.

ಅದಕ್ಕೆ ರಾಯಪ್ಪನು "ಗುರುವೇ ರಾತ್ರಿಯೆಲ್ಲಾ ನಾವು ಬಲೆಗಳನ್ನು ಹಾಕಿ ಬೇಟೆಯಾಡಿದೆವು. ಆದರೆ ಒಂದಾದರೂ ಸಿಗಲಿಲ್ಲ ಆದರೆ ಈಗ ನೀವು ಹೇಳಿದ್ದರಿಂದ ನಿಮ್ಮ ಮಾತಿನಂತೆಯೇ ಬಲೆಯನ್ನು ಹಾಕುವೆನು" ಎಂದನು.

ರಾಯಪ್ಪನು ಮತ್ತು ಆತನ ಸಂಗಡಿಗರು ತಮ್ಮ ಬಲೆಯನ್ನು ಹಾಕಿದರು. ಆಗ ಅವರ ಬಲೆಯು ಹರಿದು ಹೋಗುವ ಹಾಗೆ ಅದರ ತುಂಬ ಮೀನಗಳನ್ನು ಹಿಡಿದರು. ಮತ್ತು ಇನ್ನೊಂದು ಹಡಗದಲ್ಲಿದ್ದವರನ್ನು ತಮಗೆ ಸಹಾಯ ಮಾಡಲು ಕರೆದರು. ಅವರು ಬಂದು ಎರಡು ಡೋಣಿಗಳನ್ನು ಮೀನಗಳಿಂದ ತುಂಬಿಸಲು ಅವು ಮುಳಗಿಹೋಗುವಹಾಗೆ ಇದ್ದವು;

ಈ ಆಶ್ಚರ್ಯಕರವಾದ ಸಂಗತಿಯನ್ನು ಕಂಡು ರಾಯಪ್ಪನು ಜೇಸುನಾಥರ ಪಾದದಲ್ಲಿ ಬಿದ್ದು ನೀವು ನನ್ನನ್ನು ಬಿಟ್ಟು ಅಗಲಿರಿ. ಯಾಕಂದರೆ ನಾನು ಒಬ್ಬ ಪಾಪಿಯಾಗಿದ್ದೇನೆ" ಎಂದರು ಅದಕ್ಕೆ ಜೇಸುನಾಥರು "ನೀನು ಅಂಜಬೇಡ ಇನ್ನು ಮೇಲೆ ನೀನು ಮನುಷ್ಯರನ್ನು ಹಿಡಿಯುವಿ" ಎಂದರು ಹೀಗೆ

ಕರ್ತರು ಭವಿಷತ್ಕಾಲದಲ್ಲಿ ರಾಯಪ್ಪನವರು ಅನೇಕ ಜನರನ್ನು ಮನತಿರುಗಿಸಿ ತಿರು ಸಭೆಗೆ ತಲೆಯಾಗುವರೆಂದು ತಿಳಿಸಿದರು.

## 68 ಜೇಸುನಾಥರು ಜಯಿರುಸನ ಮಗಳನ್ನು ಜೀವದಿಂದ ಎಬ್ಬಿಸಿದ್ದು.

ಕಫೌರ್ನೌಮಿನಲ್ಲಿ ಸಿಸಗೋಗಿನ ತಲೆಯುವನಾಗಿದ್ದ ಜಯಿರುಸನೆಂಬವನು ಒಬ್ಬನು ಇದ್ದನು. ಅವನಿಗೆ ಒಬ್ಬ ಸಣ್ಣ ಮಗಳಿದ್ದಳು. ಒಂದು ದಿನ ಆಕೆಯು ವ್ಯಾಧಿಯಲ್ಲಿ ಬಿದ್ದು ಮರಣಹೊಂದಲು ಸಿದ್ಧಳಾಗಿದ್ದಳು.

ಜಯಿರುಸನಿಗೆ ತನ್ನ ಮಗಳನ್ನು ಕಳಕೊಳ್ಳುವನೆಂಬ ಆಲೋಚನೆಯಿತ್ತು. ಆದ್ದರಿಂದ ಆತನು ಜೇಸುನಾಥರನ್ನು ಕರೆದು ಆಕೆಗೆ ಗುಣಪಡಿಸಬೇಕೆಂದು ಕೇಳಿಕೊಳ್ಳಲು ಮನಸ್ಸು ಮಾಡಿದನು. ಯಾಕಂದರೆ ಜೇಸುನಾಥರು ಕಫೌರ್ನೌಮಿನಲ್ಲಿ ಅನೇಕ ಅದ್ಭುತಗಳನ್ನು ಮಾಡಿದ್ದರು. ಮತ್ತು ಅವರು ಇತರ ಮನುಷ್ಯರ ಮೇಲೆ ಕನಿಕರಪಟ್ಟ ಹಾಗೆ ತನ್ನ ಮೇಲೆ ಸಹ ಕನಿಕರಪಡುವರೆಂದು ಜಯಿರುಸನು ನಂಬಿದ್ದನು.

ಆದ್ದರಿಂದ ಜಯಿರುಸನು ಜೇಸುನಾಥರ ಬಳಿಗೆ ಬಂದು, ಅವರ ಪಾದಗಳ ಮೇಲೆ ಬಿದ್ದು, " ಆಳಿದವರೇ ನನ್ನ ಮಗಳು ಸಾಯುವ ಸ್ಥಿತಿಯಲ್ಲಿದ್ದಾಳೆ. ತಾವು ಬಂದು ಆಕೆಯ ಮೇಲೆ ತಮ್ಮ ಕೈಗಳನ್ನಿಡಿರಿ. ಆಕೆಯು ಜೀವಿಸುವಳು " ಎಂದು ಬೇಡಿಕೊಂಡನು.

ಆಗ ಜೇಸುನಾಥರು ತಮ್ಮ ಶಿಷ್ಯರೊಂದಿಗೆ ಜಯಿರುಸನ ಮನೆಗೆ ಹೋಗಲು ಹೊರಟರು. ಅವರೆಲ್ಲರೂ ನಡೆದು ಹೋಗು

ತ್ತಿರುವಾಗ ಹನ್ನೆರಡು ವರ್ಷಗಳಿಂದ ವ್ಯಾಧಿಷ್ಟಳಾಗಿದ್ದ ಒಬ್ಬ ಹೆಂಗಸು ಅವರ ಹಿಂದೆ ಬಂದಳು. ಈಕೆಯು ತನ್ನ ಮನಸ್ಸಿನಲ್ಲಿ ನೆನಸಿದ್ದೇನಂದರೆ " ನಾನು ಕರ್ತರ ವಸ್ತ್ರದ ಶೆರಗನ್ನು ಮಾತ್ರ ಮುಟ್ಟಿದರೆ, ಸ್ವಸ್ಥಪಡುವೆನೆ " ನೆಂದುಕೊಂಡಳು.

ಹೀಗೆ ನೆನಸಿ ಈಕೆಯು ಜೇಸುನಾಥರ ವಸ್ತ್ರವನ್ನೇ ಮುಟ್ಟಿದಾಕ್ಷಣವೇ ತಮ್ಮನ್ನು ಯಾರೋ ಮುಟ್ಟಿದರೆಂದು ಕೂಡಲೇ ಅವರಿಗೆ ತಿಳಿಯಿತು ಆಗ ಅವರು ತಮ್ಮ ತಲೆಯನ್ನು ತಿರುಗಿಸಿ ಆ ಹೆಂಗಸನ್ನು ನೋಡಿ " ನಿನ್ನ ವಿಶ್ವಾಸವು ನಿನ್ನನ್ನು ಗುಣಪಡಿಸಿತು " ಎನ್ನಲಾಗಿ ಕೂಡಲೇ ಆಕೆಗೆ ಗುಣವಾಯ್ತು.

ಜೇಸುನಾಥರು ಆ ಹೆಂಗಸಿನ ಬಳಿಯಲ್ಲಿ ಮಾತಾಡುತ್ತಿರುವಾಗ ಕೆಲವು ಸೇವಕರು ಬಂದು ಜಯಿರೂಸನನ್ನು ನೋಡಿ " ನಿಮ್ಮ ಮಗಳು ತೀರಿ ಹೋದಳು. ಜೇಸುನಾಥರನ್ನು ಅಷ್ಟು ದೂರ ನಡೆದು ಬರುವ ಹಾಗೆ ತೊಂದರೆ ಮಾಡಬೇಡಿರಿ. " ಎಂದರು.

ಆದರೆ ಜೇಸುನಾಥರು ಜಯಿರೂಸನನ್ನು ನೋಡಿ " ನೀನು ಭಯಪಡದೆ ವಿಶ್ವಾಸದಿಂದ ಇರು. " ಎಂದರು. ಕೂಡಲೇ ಜೇಸುನಾಥರೂ ಅವರನ್ನು ಹಿಂಬಾಲಿಸಿದವರೂ ಜಯಿರೂಸನ ಮನೆಗೆ ಬಂದು ಸೇರಿದರು. ಅಲ್ಲಿ ಎಲ್ಲವೂ ಬಹಳ ಗಡಿಬಿಡಿಯಾಗಿತ್ತು. ಆ ಹುಡುಗಿ ಸತ್ತದ್ದರಿಂದ ಅಲ್ಲಿ ಅನೇಕರು ಅಳುತ್ತಿದ್ದರು.

ಜೇಸುನಾಥರು ಅವರನ್ನು ನೋಡಿ, " ನೀವು ಯಾತಕ್ಕೆ ಅತ್ತು ಪ್ರಲಾಪಿಸಿ, ಗುಬಾರು ಮಾಡುತ್ತೀರಿ ? ಈ ಹುಡು

ಗಿಯು ಸಾಯಲಿಲ್ಲ. ನಿದ್ರಿಸುತ್ತಾಳೆ ಎಂದು ಹೇಳಲು ಅಲ್ಲಿದ್ದ ವರು ಇದನ್ನು ಕೇಳಿ ಪರಿಹಾಸ್ಯ ಮಾಡುತ್ತಿದ್ದರು.

ಜೇಸುನಾಥರು ಎಲ್ಲ ಜನಗುಂಪುಗಳನ್ನು ದೂರಕಳಿಸು ವಂತೆ ಜಯುರೂಸನಿಗೆ ಆಜ್ಞಾಪಿಸಿದರು. ಮತ್ತು ಸತ್ತ ಹುಡು ಗಿಯ ಬಳಿಗೆ ಹೋಗಿ, ಆಕೆಯ ಕೈಗಳನ್ನು ಹಿಡಿದು, "ಮಗಳೇ ನಿನಗೆ ಕಟ್ಟಳೆಯನ್ನು ಮಾಡುತ್ತೇವೆ ಏಳು ಎಂದು ಹೇಳಲು ಆ ಕ್ಷಣವೇ, ಅವಳು ಎದ್ದು ನಡೆಯಲಾರಂಭಿಸಿದಳು.

ಇಲ್ಲಿ ನಮಗೆ ಜೇಸುನಾಥರ ಮಹಾಶಕ್ತಿಯು ಕಾಣಿಸು ತ್ತದೆ. ನಮಗೆ ಸಹ ಘಟ್ಟಿ ವಿಶ್ವಾಸವಿದ್ದರೆ ಜೇಸುನಾಥರು ಆ ಹೆಂಗಸಿನ ಮೇಲೆಯೂ ಜಯಿರೂಸನ ಮೇಲೆಯೂ ಕನಿಕರ ಪಟ್ಟಂತೆ ನಮ್ಮ ಮೇಲೆ ಸಹ ಕನಿಕರ ಪಡಬಹುದು.

## 69 ಜೇಸುನಾಥರು ಐದು ರೊಟ್ಟಿಗಳನ್ನು ಐದು ಸಾವಿರ ಜನರಿಗೆ ಹಂಚಿದ್ದು

ಜೇಸುನಾಥರು ಎಲ್ಲಿಗೆ ಹೋದರೂ ಅನೇಕ ಜನರು ಅವ ರನ್ನು ಹಿಂಬಾಲಿಸುತ್ತಿದ್ದರು. ಒಂದು ಸಾರೆ ಅವರು ಒಂದು ಪರ್ವತವನ್ನು ಹತ್ತಿ ಹೋದರು ಅಲ್ಲಿಗೆ ಅನೇಕರು ಅವರ ಹಿಂವೆ ಬಂದದನ್ನು ಕಂಡು, ಇವರೆಲ್ಲರೂ ಊಟಮಾಡುವದಕ್ಕಾಗಿ ಎಲ್ಲಿಂದ ನಾವು ರೊಟ್ಟಿಗಳನ್ನು ಕೊಳ್ಳಬಹುದೆಂದು ಜೇಸುನಾ ಥರು ಅಪೋಸ್ತಲರನ್ನು ಕೇಳಿದರು.

ಅದಕ್ಕೆ ಅಪೋಸ್ತಲರು ಇವರೆಲ್ಲರಿಗೆ ಎರಡು ನೂರು ಪೆನ್ನಿಗಳ ರೊಟ್ಟಿಗಳಾದರೂ ಸಾಲುವದಿಲ್ಲ. ಆದರೆ ಇಲ್ಲಿ ಒಬ್ಬ ಹುಡುಗನ ಬಳಿಯಲ್ಲಿ ಐದು ರೊಟ್ಟಿಗಳೂ ಎರಡು ಮೀನಗಳೂ

ಮಾತ್ರ ಇರುತ್ತವೆ. ಆದರೆ ಇಷ್ಟು ದೊಡ್ಡ ಸಮೂಹಕ್ಕೆ ಅವು ಸಾಲುವದಿಲ್ಲ ವೆಂದರು.

ಆಗ ಜೇಸುನಾಥರು ಎಲ್ಲ ಜನರನ್ನು ಹುಲ್ಲಿನ ಮೇಲೆ ಸಾಲಾಗಿ ಕೂಡ್ರಲು ಹೇಳಿದರು. ಇವರು ಸುಮಾರು ಐದುಸಾವಿರ ಮಂದಿ ಇದ್ದರು. ಜೇಸುನಾಥರು ಈ ಐದು ರೊಟ್ಟಿಗಳನ್ನು ಎರಡು ಮೀನಗಳನ್ನು ಕೈಯಲ್ಲಿ ತೆಗೆದುಕೊಂಡು ಸರ್ವೇಶ್ವರನಿಗೆ ಸ್ತೋತ್ರ ಹೇಳಿ ಅವುಗಳನ್ನು ಆಶೀರ್ವದಿಸಿ ಮುರಿದು ತಮ್ಮ ಶಿಷ್ಯರ ಕೈಯಲ್ಲಿ ಕೊಟ್ಟು ಜನರಿಗೆ ಹಂಚುವಹಾಗೆ ಹೇಳಿದರು.

ಎಲ್ಲರೂ ತೃಪ್ತಿಯಾಗಿ ಭುಜಿಸಿದ ಬಳಿಕ ಜೇಸುನಾಥರು ತಮ್ಮ ಶಿಷ್ಯರನ್ನು ನೋಡಿ, ಮಿಕ್ಕಿದ ತುಂಡುಗಳು ನಷ್ಟವಾಗಿ ಹೋಗದೆ ಹಾಗೆ, ಅವುಗಳನ್ನು ಕೂಡಿಸಿ ಇಡಿರೆಂದು ಹೇಳಿದರು. ಹಾಗೆಯೇ ಅವರು ಹನ್ನೆರಡು ಪುಟ್ಟಿಗಳನ್ನು ತುಂಬಿಸಿದರು.

ಜನರು ಇದನ್ನು ಕಂಡು ಬಹಳ ವಿಸ್ಮಯ ಪಟ್ಟು ಅಂದದ್ದೇನಂದರೆ, "ಇವರು ನಿಜವಾಗಿ ಲೋಕರಕ್ಷಕರಾಗಿದ್ದಾರೆಂದು ನಂಬಿದರು. ಮತ್ತು ಅವರನ್ನು ತಮ್ಮ ರಾಜನನ್ನಾಗಿ ಮಾಡಬೇಕೆಂದಿದ್ದರು. ಆದರೆ ಜೇಸುನಾಥರು ಅವರನ್ನು ಕಳುಹಿಸಿಬಿಟ್ಟರು. ಮತ್ತು ರಾತ್ರಿ ಸಮಯದಲ್ಲಿ ತಮ್ಮ ಸಿಷ್ಯರ ಸಂಗಡ ಕಫೌರ್‌ನಮ್ ಊರಿಗೆ ಹೊರಟು ಹೋದರು.

ಇನ್ನೊಂದು ಸಾರೆ ಜೇಸುನಾಥರು ಈ ರೊಟ್ಟಿಯ ಅದ್ಭುತವನ್ನು ಮಾಡಿದರು. ಒಂದು ಸಾರೆ ಸುಮಾರು ನಾಲ್ಕುಸಾವಿರ ಜನರ ಗುಂಪು ಅವರನ್ನು ಹಿಂಬಾಲಿಸಿತ್ತು. ಆ ಜನರಿಗೆ ಭುಜಿ

ಸಲು ಅವರ ಹತ್ತಿರ ಏನೂ ಇದ್ದಿಲ್ಲ. ಅವರ ಶಿಷ್ಯರ ಹತ್ತಿರ ಏಳು ರೊಟ್ಟಿಗಳು ಮಾತ್ರ ವಿದ್ದವು.

ಜೇಸುನಾಥರು ಆ ರೊಟ್ಟಿಗಳನ್ನು ಕೈಯಲ್ಲಿ ತೆಗೆದು ಕೊಂಡು, ದೇವರಿಗೆ ಮೇಲಿರಿತ ಸ್ತೋತ್ರವನ್ನು ಹೇಳಿ ಅವುಗಳನ್ನು ತುಂಡುಗಳಾಗಿ ಮುರಿದು ಜನರಿಗೆ ಹಂಚಿಕೊಡಲು ತಮ್ಮ ಶಿಷ್ಯರುಗಳಿಗೆ ಆಜ್ಞಾಪಿಸಿದರು. ಎಲ್ಲರೂ ತೃಪ್ತಿಯಾಗಿ ಊಟ ಮಾಡಿದ ಬಳಿಕ ಉಳಿದ ತುಂಡುಗಳನ್ನು ಏಳು ಪುಟ್ಟಿಗಳ ತುಂಬ ಎತ್ತಿದರು.

ಜೇಸುನಾಥರು ಈ ಲೋಕದ ರೊಟ್ಟಿಗಳನ್ನು ಹೆಚ್ಚಾಗಿ ಮಾರ್ಪಡಿಸಿ ಅದ್ಭುತವನ್ನು ಮಾಡಿದ್ದರಿಂದ ಅವರ ಶಕ್ತಿಯನ್ನು ನಮಗೆ ತೋರಿಸಿದರು. ತರುವಾಯ ಆ ಶಕ್ತಿಯನ್ನೇ ದಿವ್ಯ ಸತ್ಪ್ರಸಾದದ ಮೂಲಕ ತೋರಿಸಿದರು. ಹ್ಯಾಗಂದರೆ ತಮ್ಮ ದಿವ್ಯ ಶರೀರವನ್ನೇ ಅನೇಕ ತುಂಡುಗಳಾಗಿ ಭಾಗಿಸಿದರೂ ಒಂದೊಂದರಲ್ಲಿಯೂ ಪೂರ್ಣವಾಗಿರುತ್ತಾರೆ. ಜೇಸುನಾಥರು ಪರ್ವತದ ಮೇಲೆ ಹಂಚಿದ ರೊಟ್ಟಿಗಳಂತೆ ನಮಗೆ ಸಹ ಜೇಸುನಾಥರು ತಾವೇ ಸ್ವತಃ ತಮ್ಮ ಶರೀರವನ್ನು ಹಂಚಿ ಕೊಡುತ್ತಾರೆ. ನಾವು ಜೇಸುನಾಥರ ಶರೀರವನ್ನು ಭುಜಿಸಿದರೆ ನಮಗ ಶಕ್ತಿ ಬರುವದು.

## ೭೦ ದಿವ್ಯ ಸತ್ಪ್ರಸಾದವನ್ನು ಕುರಿತು ಜೇಸುನಾಥರು ಮಾಡಿದ ಪ್ರಸಂಗವು.

ಐದು ರೊಟ್ಟಿಗಳನ್ನು ಐದು ಸಾವಿರ ಜನರಿಗೆ ಹಂಚಿ ಕೊಟ್ಟ ಅದ್ಭುತದ ಮರುದಿನ ಕರ್ತರು ಪರ್ವತದ ಮೇಲೆ ಇಲ್ಲ

ದಿರುವದನ್ನು ಕಂಡು, ಜನರು ಅವರನ್ನು ಹುಡುಕುತ್ತ ಕಫೌ ರ್ನಾವುಗೆ ಹೋದರು. ಜೇಸುನಾಥರು ಅವರನ್ನು ನೋಡಿ ಅಂದದ್ದೇನಂದರೆ " ನೀವು ರೊಟ್ಟಿಯನ್ನು ತಿಂದು ತೃಪ್ತಿಹೊಂದಿ ದ್ದರಿಂದ ನನ್ನನ್ನು ಹುಡುಕುತ್ತೀರಿ. ಆದರೆ ನಾಶನವಾಗಿ ಹೋ ಗುವ ರೊಟ್ಟಿಯ ಸಲುವಾಗಿ ದುಡಿಯಬೇಡಿರಿ. ನಿತ್ಯಕಾಲವೂ ಬಾಳುವ ರೊಟ್ಟಿಗಾಗಿ ಕಷ್ಟಪಡಿರಿ. ಅದನ್ನು ಮನುಮಗನು ನಿಮಗೆ ಕೊಡುವನು " ಎಂದರು.

ಅದಕ್ಕೆ ಜನರು ಜೇಸುನಾಥರನ್ನು ನೋಡಿ, " ಕರ್ತರೇ ದೇವರ ಚಿತ್ತವನ್ನು ನೆರವೇರಿಸುವ ಹಾಗೆ ನಾವು ಏನು ಮಾಡ ಬೇಕು " ಅಂದರು. ಆಗ ಜೇಸುನಾಥರು ತಿರುಗಿ ಹೇಳಿದ್ದೇ ನಂದರೆ " ಸರ್ವೇಶ್ವರನು ಕಳಿಸಿದವರಲ್ಲಿ ವಿಶ್ವಾಸವನ್ನಿಡಿರಿ. ನನ್ನ ತಂದೆಯು ನಿಮಗೆ ಪರಲೋಕದಿಂದ ನಿತ್ಯಕಾಲದ ರೊಟ್ಟಿ ಯನ್ನು ಕೊಡುವರು. ಅದು ಲೋಕಕ್ಕೆ ಜೀವವನ್ನು ಕೊಡುವದು.

ಇದನ್ನು ಕೇಳಿ ಜನರು " ಕರ್ತರೇ ನಮಗೆ ಯಾವಾ ಗಲೂ ಈ ನಿತ್ಯಜೀವವನ್ನು ಕೊಡುವ ರೊಟ್ಟಿಯನ್ನೇ ಕೊಡಿರಿ " ಎಂದರು.

ಅದಕ್ಕೆ ಜೇಸುನಾಥರು ಪ್ರತ್ಯುತ್ತರವಾಗಿ, " ನಾವೇ ಜೀವದ ಅಪ್ಪವಾಗಿದ್ದೇವೆ. ಯಾರು ನಮ್ಮ ಬಳಿಗೆ ಬರುವರೋ ಅವರು ಎಂದಿಗೂ ಹಸಿಯುವದಿಲ್ಲ. ನಮ್ಮಲ್ಲಿ ವಿಶ್ವಾಸವಿಟ್ಟವನು ಎಂದಿಗೂ ದಾಹಗೊಳ್ಳುವದಿಲ್ಲ. ನಿಜವಾಗಿ ನಿಜವಾಗಿ ನಿಮಗೆ ಹೇಳುತ್ತೇವೆ. ನಮ್ಮಲ್ಲಿ ವಿಶ್ವಾಸವಿಡುವವನು ನಿತ್ಯ ಜೀವನ ವನ್ನು ಹೊಂದುವನು. ಪರಲೋಕದಿಂದ ಇಳಿದು ಬಂದ ನಿತ್ಯ ಜೀವದ ಅಪ್ಪವು ನಾವೇ. ಇವನ್ನು ಭುಜಿಸುವವನು ನಿತ್ಯಕಾಲ

ಜೀವಿಸುವನು. ಈ ಅಪ್ಪವು ಯಾವದೆಂದರೆ, ಲೋಕದ ಜೀವಕ್ಕಾಗಿ ನಾವು ಕೊಡುವ ನಮ್ಮ ಶರೀರವೇ ಅಂದರು."

ಜೂದರು ಇದನ್ನು ಕೇಳಿ; ಈತನು ನಮಗೆ ತನ್ನ ಮಾಂಸವನ್ನು ತಿನ್ನಲಿಕ್ಕೆ ಕೊಡುವದು ಹ್ಯಾಗೆ ? ಎಂದು ಒಬ್ಬರ ಸಂಗಡಲೊಬ್ಬರು ತರ್ಕ ಮಾಡಲಾರಂಭಿಸಿದರು.

ಆಗ ಜೇಸುನಾಥರು ಅವರಿಗೆ ಹೇಳಿದ್ದೇನಂದರೆ ನೀವು ಮನುಮಗನ ಶರೀರವನ್ನು ಭುಜಿಸದೆಯೂ ಅವರ ರಕ್ತವನ್ನು ಪಾನಮಾಡದೆಯೂ ಹೋದರೆ, ನಿಮ್ಮಲ್ಲಿ ಜೀವವಿರಲಾರದು. ನಮ್ಮ ಶರಿರವು ನಿಜವಾದ ಮಾಂಸವಾಗಿದೆ ನಮ್ಮ ರಕ್ತವು ನಿಜವಾದ ಪಾನವಾಗಿದೆ. ನಮ್ಮ ಮಾಂಸವನ್ನು ಭುಜಿಸಿ ನಮ್ಮ ರಕ್ತವನ್ನು ಪಾನಮಾಡುವವನು ನಮ್ಮೊಳಿರುವನು. ನಾವು ಅವನೊಳಿರುವೆವು. ನಾವು ಪರಲೋಕದಿಂದ ಇಳಿದ ಅಪ್ಪವಾದ್ದರಿಂದ ಇದನ್ನು ಭುಜಿಸುವವನು ನಿತ್ಯಕಾಲ ಜೀವಿಸುವನು. ಈ ವಾಕ್ಯಗಳಲ್ಲಿ ಜೇಸುನಾಥರು ದಿವ್ಯ ಪತ್ರುಸಾದವನ್ನು ಕುರಿತು ತಿಳಿಸಿದರು. ಇದು ಕಡೇ ರಾಭೋಜನದಲ್ಲಿ ಪೂರ್ತಿಯಾಯಿತು.

ಈ ಮಾತುಗಳನ್ನು ಕೇಳಿ ಅವರ ಶಿಷ್ಯರಲ್ಲಿ ಅನೇಕರು ಅವರಲ್ಲಿ ವಿಶ್ವಾಸವಿಡದೆ ಈ ಮಾತು ಕಠಿಣವಾಗಿದೆ ಇದನ್ನು ಯಾರು ಕೇಳಬಹುದು. ಎಂದು ಜೇಸುನಾಥರನ್ನು ಬಿಟ್ಟು ಹೊರಟು ಹೋದರು.

ರಕ್ಷಕರು ತಮ್ಮ ಹನ್ನೆರಡು ಮಂದಿ ಪ್ರಧಾನ ಶಿಷ್ಯರನ್ನು ನೋಡಿ, ನೀವು ಸಹ ನಮ್ಮನ್ನು ಬಿಟ್ಟು ಹೋಗ ಮನಸ್ಸಾಗಿ

ದ್ದೀರೋ ಎಂದು ಕೇಳಲು ಸಿಮೋನೆಂಬವರು ಪ್ರತ್ಯುತ್ತರವಾಗಿ "ಆಳಿದವರೇ, ನಿತ್ಯ ಜೀವದ ವಾರ್ತೆಗಳು ನಿಮ್ಮಲ್ಲಿರುತ್ತವೆ. ನಾವು ಯಾರ ಬಳಿಗೆ ಹೋಗುವೆವು. ಮತ್ತು ದೇವಕುಮಾರನಾದ ಕ್ರೀಸ್ತುನಾಥರು ನೀವೇ ಎಂದು ನಾವು ಬಲ್ಲೆವು. ಇದು ನಮಗೆ ಸಾದೃಷ್ಟವಾಗಿ ತಿಳಿಯುತ್ತದೆ'' ಎಂದು ಹೇಳಿದರು.

## 71 ಜೇಸುನಾಥರು ಪರಲೋಕದ ಬೀಗದ ಕೈಗಳನ್ನು ರಾಯಪ್ಪನವರಿಗೆ ಕೊಟ್ಟದ್ದು

ಜೇಸುನಾಥರು ಮತ್ತು ಅವರ ಶಿಷ್ಯರು ಸೆಜಾರಿಯಾ ಫಿಲಿಪ್ಪಿಯೆಂಬ ಪಟ್ಟಣದಲ್ಲಿದ್ದರು. ಆಗ ಜೇಸುನಾಥರು ತಮ್ಮ ಶಿಷ್ಯರನ್ನು ನೋಡಿ ಜನರು ನನ್ನನ್ನು ಯಾರೆಂದು ಹೇಳುತ್ತಾರೆ ಎಂದು ಕೇಳಲು ಅದಕ್ಕೆ ಅವರಲ್ಲಿ ಕೆಲವರು ಹೇಳಿದ್ದೇನೆಂದರೆ " ಕೆಲವರು ಎಲಿಯಾಸನೆಂತಲೂ, ಸ್ವಲ್ಪ ಮಂದಿ ಜರೇಮಿಯಾಸನೆಂತಲೂ ಮತ್ತೆ ಕೆಲವರು ಒಬ್ಬ ದೀರ್ಘದರ್ಶಿಯೆಂತಲೂ ಅನ್ನುತ್ತಾರೆಂದರು.

ಆಗ ಜೇಸುನಾಥರು ನನ್ನನ್ನು ಕುರಿತು ನೀವು ಯಾರೆಂದು ತಿಳಿಯುತ್ತೀರಿ ? ಎಂದರು.

ಅದಕ್ಕೆ ಸಿಮೋನನು ತನ್ನ .ಜೊತೆಗಾರರೆಲ್ಲರ ಸಲುವಾಗಿ ಹೇಳಿದ್ದೇನಂದರೆ "ನೀವು ನಿಜವಾದ ದೇವರ ಕುಮಾರನಾದ ಕ್ರಿಸ್ತುನಾಥರು" ಎಂದು ಹೇಳಿದನು.

ಆಗ ಜೇಸುನಾಥರು ರಾಯಪ್ಪನನ್ನು ನೋಡಿ, ನೀನು ಆಶೀರ್ವದಿಸಲ್ಪಟ್ಟವನು ನಿನ್ನ ಶರೀರವು ನಿನಗೆ ಇದನ್ನು ತಿಳಿಸಲಿಲ್ಲ. ಆದರೆ ಪರಲೋಕದಲ್ಲಿರುವ ನನ್ನ ತಂದೆಯು ನಿನಗೆ ಇದ

ನ್ನು ಕಲಿಸಿರುತ್ತಾರೆ. ಈಗ ನಾವು ನಿಜವಾಗಿ ಹೇಳುತ್ತೇವೆ. ನೀನು ಕಲ್ಲಾಗಿರುತ್ತೀ. ನಾನು ಈ ಕಲ್ಲಿನ ಮೇಲೆ ನನ್ನ ತಿರುಸಭೆಯನ್ನು ಕಟ್ಟುತ್ತೇನೆ. ನರಕದ ಬಾಗಿಲುಗಳು ಇದನ್ನು ಗೆಡೆಯುಲಾರವು. ನಾವು ನಿನಗೆ ಪರಲೋಕ ರಾಜ್ಯದ ಬೀಗದ ಕೈಗಳನ್ನು ನಿನಗೆ ಕೊಡುತ್ತೇವೆ. ನೀನು ಈ ಲೋಕದಲ್ಲಿ ಬಿಗಿಸಿದ್ದು ಪರಲೋಕದಲ್ಲಿ ಸಹ ಬಿಗಿಸಲ್ಪಡುವವು. ಈ ಲೋಕದಲ್ಲಿ ಬಿಚ್ಚಿದ್ದು ಪರಲೋಕದಲ್ಲಿ ಸಹ ಬಿಚ್ಚಲ್ಪಡುವವು" ಎಂದರು.

ಈ ವಾಕ್ಯಗಳಿಂದ ಜೇಸುನಾಥರು ರಾಯಪ್ಪನವರನ್ನು ತಿರುಸಭೆಯ ತಲೆಯಾಗಿ ಮಾಡುವರೆಂದು ಮಾತು ಕೊಟ್ಟರು. ಮತ್ತು ಬೀಗದ ಕೈಗಳು ಯಾವಾಗಲೂ ಅಧಿಕಾರದ ಗುರ್ತಾಗಿರುತ್ತವೆ. ಜೇಸುನಾಥರು "ನಾನು ನಿನಗೆ ಪರಲೋಕದ ಬೀಗದ ಕೈಗಳನ್ನು ಕೊಡುತ್ತೇನೆಂದು ಹೇಳಿದ್ದು, ನಿನ್ನನ್ನು ತಿರುಸಭೆಗೆ ತಲೆಯಾಗಿ ಮಾಡುತ್ತೇನೆ ಎಂಬದಕ್ಕೆ ಅರ್ಥವಾಗಿದೆ.

ರಾಯಪ್ಪರು ಸತ್ಯ ತಿರುಸಭೆಯ ಮೊದಲನೇ ಪಾಪುಸ್ವಾಮಿಯವರಾಗಿದ್ದರು. ಜೇಸುನಾಥರು ಸ್ಥಾಪಿಸಿದ ಸತ್ಯ ಕಥೊಲಿಕ್ ತಿರುಸಭೆಯ ತಲೆಯಾಗಿದ್ದರು. ಈಗ ಆಳುತ್ತಿರುವ ಎಲ್ಲಾ ಪಾಪುಸ್ವಾಮಿಗಳಿಗೆ ಮೊದಲನೇ ಪಾಪು ಸ್ವಾಮಿಗಳಾಗಿದ್ದರು. ಪಾಪುಸ್ವಾಮಿಯವರನ್ನು ಅವಿಧೇಯಿಸುವವನು ಜೇಸುನಾಥರನ್ನು ಅವಿಧೇಯಿಸುತ್ತಾನೆ. ಪಾಪುಸ್ವಾಮಿಯವರ ಮಾತನ್ನು ತಿರಸ್ಕರಿಸುವವನು ಜೇಸುನಾಥರು ಸ್ಥಾಪಿಸಿದ ಸತ್ಯ ತಿರುಸಭೆಗೆ ಒಳಗಾದವನಲ್ಲ. ಯಾಕಂದರೆ ಜೇಸುನಾಥರೇ ಪಾಪುಸ್ವಾಮಿಯವರನ್ನು ಸತ್ಯ ತಿರುಸಭೆಗೆ ತಲೆಯಾಗಿ ನೇಮಿಸಿರುತ್ತಾರೆ.

ಜೇಸುನಾಥರು ಅಪ್ರೋಸ್ಥಲೆಲ್ಲರಲ್ಲಿ ರಾಯಪ್ಪನನ್ನು ಹಿರಿಯವನಾಗಿ ನೇಮಿಸಿದ ಮೇಲೆ ತಾವು ಅನುಭವಿಸಲಿಕ್ಕಿರುವ ಭಾದೆಗಳನ್ನು ಮತ್ತು ತಮ್ಮ ಮರಣವನ್ನು ಅವರಿಗೆ ತಿಳಿಸಿದರು. ಅದಲ್ಲದೆ ತಾವು ಮರಣ ಹೊಂದಿದ ಮೂರನೇ ದಿವಸ ತಿರುಗಿ ಪುನರುಥ್ಥಾನವಾಗಿ ಏಳುವರೆಂದೂ ತಿಳಿಸಿದರು. ಆ ಮೇಲೆ ಅವರಿಗೆ ಹೇಳಿದ್ದೇನಂದರೆ, ಒಬ್ಬ ಮನುಷ್ಯನು ಈ ಇಡೀ ಲೋಕವನ್ನೆಲ್ಲ ಜಯಿಸಿದರು ತನ್ನ ಆತ್ಮವನ್ನು ಮಾತ್ರ ಕಳಕೊಂಡರೆ ಆತನಿಗೆ ಏನು ಲಾಭ ? ಎಂದರು.

## ೭೨ ಜೇಸುನಾಥರು ಮೂರು ರೂಪ ಧರಿಸಿದ ವರ್ತಮಾನ

ಒಂದು ದಿನ ಜೇಸುನಾಥರು ರಾಯಪ್ಪನನ್ನು ಜ್ವಾನ್ನೇಸನನ್ನು, ಜಾಕೋಬನನ್ನು ತಮ್ಮ ಸಂಗಡ ಕರೆದುಕೊಂಡು ಪರ್ವತದ ಮೇಲೆ ಜಪಮಾಡುವದಕ್ಕೆ ಹೋದರು. ಜೇಸುನಾಥರು ಜಪ ಮಾಡುತ್ತಿದ್ದಾಗ ಅವರ ಮುಖವು ಬದಲಾಯಿಸುತ್ತಿದ್ದದನ್ನು ಅಪ್ರೋಸ್ತಲರು ಕಂಡರು. ಅವರ ಮುಖವು ಸೂರ್ಯನ ಹಾಗೆ ಪ್ರಕಾಶಿಸುತ್ತಿತ್ತು. ಅವರ ಬಟ್ಟೆಗಳೂ ಸೂರ್ಯನಂತೆ ಬೆಳ್ಳಗೆ ಮಿಂಚುತ್ತಿದ್ದವು. ಮತ್ತು ಇಬ್ಬರು ಮನುಷ್ಯರು ಜೇಸುನಾಥರ ಸಂಗಡ ಮಾತಾಡುತ್ತಿದ್ದುದನ್ನು ಅವರು ನೋಡಿದರು. ಅವರಿಬ್ಬರು ಮೋಯಿಸನು ಮತ್ತು ಎಲಿಯಾಸರಾಗಿದ್ದರು. ಇವರಿಬ್ಬರು ಸಹ ಜೇಸುನಾಥರಂತೆ ಪ್ರಕಾಶವುಳ್ಳವರಾಗಿದ್ದರು.

ಜೇಸುನಾಥರು ಧರಿಸಿದ ಮೂರು ರೂಪವನ್ನು ಕಂಡು ಅಪ್ರೋಸ್ತಲರು ಬಹಳ ಆಶ್ಚರ್ಯಪಟ್ಟರು. ಆಗ ರಾಯಪ್ಪ

ನವರು ಕರ್ತರನ್ನು ಕಂಡು "ಗುರುವೇ ಇಲ್ಲಿ ನಾವು ಮೂರು ಗುಡಾರಗಳನ್ನು ಕಟ್ಟೋಣ. ಒಂದು ನಿಮಗೂ ಮತ್ತೆರಡು ಎಲಿಯಾಸನಿಗೂ ಮೋಯಿಸನಿಗೂ" ಎಂದರು.

ಹೀಗೆ ರಾಯಪ್ಪನು ಮಾತಾಡುತ್ತಿರುವಾಗ ಒಂದು ಪ್ರಕಾಶವಾದ ಮೋಡವು ಕವಿದು ಅವರನ್ನು ಮುಚ್ಚಿತು. ಆ ಮೋಡದಿಂದ ಒಂದು ಶಬ್ದವು ಕೇಳಲ್ಪಟ್ಟು ಹೇಳಿದ್ದೇನಂದರೆ, "ಇವರೇ ನಮ್ಮ ಪ್ರಿಯವಾದ ಮಗನು. ಈತನ ಮಾತಿಗೆ ಕಿವಿಕೊಡಿರಿ" ಅಂದಿತು ಇದನ್ನು ಕೇಳಿ ಅಪೋಸ್ತಲರು ಬಹಳ ಭಯಪಟ್ಟು ಕೆಳಗೆ ಬಿದ್ದರು. ಆದರೆ ಜೇಸುನಾಥರು ಅವರನ್ನು ಮುಟ್ಟಿ, ಏಳಿರಿ, ಅಂಜಬೇಡಿರಿ ಎಂದರು.

ಅಪೋಸ್ತಲರು ಎದ್ದು ನೋಡಿದಾಗ ಅಲ್ಲಿ ಜೇಸುನಾಥರ ಹೊರತು ಯಾರೂ ಇದ್ದಿಲ್ಲ. ಎಲಿಯಾಸನೂ, ಮೋಯಿಸನೂ ಅದೃಶ್ಯವಾಗಿದ್ದರು. ಜೇಸುನಾಥರು ತಿರುಗಿ ಮೊದಲಿದ್ದ ಹಾಗೆ ಕಾಣಿಸಿಕೊಂಡರು ಇವರು ಪರ್ವತವನ್ನು ಇಳಿದು ಕೆಳಗೆ ಬರುವಾಗ ಜೇಸುನಾಥರು ತಮ್ಮ ಅಪೋಸ್ತರನ್ನು ನೋಡಿ "ನೀವು ಈಗ ಕಂಡದನ್ನು, ನಾನು ಸತ್ತು ಮೂರನೇ ದಿವಸ ತಿರುಗಿ ಏಳುವವರೆಗೆ ಯಾರಿಗೂ ಹೇಳಬಾರದೆಂದು ಹೇಳಿದರು.

**೯೩ ಜೇಸುನಾಥರು ಒಬ್ಬ ಪಾಪಿಷ್ಟಳನ್ನು ಮನ್ನಿಸಿದ್ದು.**

ಒಂದು ದಿನ ಪರಿಜೇಯರು ಮತ್ತು ವೇದಶಾಸ್ತ್ರಿಗಳು ಒಬ್ಬ ಪಾಪಿಷ್ಟಳನ್ನು ಜೇಸುನಾಥರ ಬಳಿಗೆ ಕರೆದುಕೊಂಡು ಬಂದು ಹೇಳಿದ್ದೇನಂದರೆ, ಗುರುವೇ ಈ ಹೆಂಗಸು ಬಹಳ ಅಕ್ರಮವಾದ ಪಾಪಗಳನ್ನು ಮಾಡಿದ್ದಾಳೆ. ಇಂಥವರನ್ನು ಕಲ್ಲಿನಿಂದ ಹೊಡೆದು ಕೊಲ್ಲಬೇಕೆಂದು ವೇದಾಗಮದಲ್ಲಿ ಬರೆದಿದೆ. ಇದಕ್ಕೆ ತಾವೇನು ಹೇಳುವಿರಿ ? ಎಂದರು.

ಆ ಹೆಂಗಸು ತನ್ನ ಪಾಪಗಳನ್ನು ನೋಡಿ ನಾಚಿಕೆಪಟ್ಟು ತನ್ನ ಪಾಪಗಳಿಗಾಗಿ ಎಷ್ಟು ದುಃಖವಾಗಿದ್ದಳೆಂಬದನ್ನು ಜೇಸು ನಾಥರು ನೋಡಿದರು. ಆ ಸ್ತ್ರೀಯು ನಾಚಿಕೆಯಿಂದಲೂ, ದುಃಖದಿಂದಲೂ ತನ್ನ ತಲೆಯನ್ನು ಸಹ ಎತ್ತಲಾರದೆ ಹೋದಳು. ಅವಳನ್ನು ಆ ಜನರು ಜೇಸುನಾಥರ ಮುಂದೆ ಎಳೆದುಕೊಂಡು ಬರುವಾಗ ಆಕೆ ಬಹು ದುಃಖದೊಂದಿಗೆ ತನ್ನ ಕೈಗಳಿಂದ ಮುಖವನ್ನು ಮುಚ್ಚಿಕೊಂಡಳು.

ಆದರೆ ಜೇಸುನಾಥರು ಫರಿಜೇಯರ ಮಾತಿಗೆ ಉತ್ತರ ಕೊಡಲಿಲ್ಲ. ಕೆಳಗೆ ಬಗ್ಗಿಕೊಂಡು ಉಸುಗಿನಲ್ಲಿ ತಮ್ಮ ಬೆರಳುಗಳಿಂದ ಬರೆಯಲಾರಂಭಿಸಿದರು ಅವರು ಆ ಹೆಂಗಸನ್ನು ನೋಡಿ. ಬಹಳ ವ್ಯಸನಪಟ್ಟರು. ಆದರೆ ಪರಿಜೇಯರು ಹೇಳಿದ್ದು ಸಹ ವೇದಾಗಮದಂತೆ ಸರಿಯಾಗಿತ್ತು ಆದಕಾರಣ ಅವರು ಉತ್ತರ ಹೇಳಬೇಕೆಂದು ಜೇಸುನಾಥರನ್ನು ಪೀಡಿಸಿದರು.

ಆಗ ಜೇಸುನಾಥರು ತಲೆಯನ್ನು ಮೇಲಕ್ಕೆತ್ತಿ "ನಿಮ್ಮಲ್ಲಿ ಯಾರು ಒಂದು ಪಾಪವನ್ನು ಸಹ ಕಟ್ಟಿಕೊಳ್ಳದೆ ಇರುವನೋ ಅಂಥವನು ಮೊದಲನೇ ಕಲ್ಲನ್ನು ಆಕೆಯಮೇಲೆ ಎಸೆಯಲಿ"ಎಂದು ಹೇಳಿ, ತಿರುಗಿ ತಲೆಯನ್ನು ಬಗ್ಗಿಸಿ ಬರೆಯಲಾರಂಭಿಸಿದರು.

ಜೇಸುನಾಥರ ಉತ್ತರವನ್ನು ಕೇಳಿ ಫರಿಜೇಯರು ಮತ್ತು ವೇದ ಶಾಸ್ತ್ರಿಗಳು ತಮ್ಮ ಪಾಪಗಳನ್ನು ನೆನಪು ಮಾಡಿಕೊಳ್ಳಹತ್ತಿದರು. ಅವರಲ್ಲಿ ಒಬ್ಬನು ಸಹ ತನ್ನಲ್ಲಿ ಪಾಪವಿಲ್ಲವೆಂದು ಹೇಳಲಾರದೆ ಹೋದನು. ಅವರೆಲ್ಲರೂ ತಮ್ಮ ತಮ್ಮ ಪಾಪಗಳನ್ನು ಕಂಡು ನಾಚಿಕೆ ಪಟ್ಟು ಒಂದು ಶಬ್ದವನ್ನಾದರೂ

ಹೇಳದೆಯೂ ಸ್ವಲ್ಪ ಸಪ್ಪಳವನ್ನಾದರು ಮಾಡದೆಯೂ ಒಬ್ಬರ ಹಿಂದೆ ಒಬ್ಬರು ಮೆಲ್ಲಗೆ ಹೊರಟು ಹೋದರು. ಆ ಹೆಂಗಸು ಮಾತ್ರ ಒಬ್ಬಳೇ ಅಲ್ಲಿ ನಿಂತಿದ್ದಳು.

ಸ್ವಲ್ಪ ಹೊತ್ತಾದ ನಂತರ ಜೇಸುನಾಥರು ಬರೆಯುವ ದನ್ನು ಬಿಟ್ಟು ತಲೆಯನ್ನೆತ್ತಿ ಮೇಲಕ್ಕೆ ನೋಡಿದರು. ಆಕೆಯು ಇನ್ನೂ ಅಲ್ಲಿಯೇ ನಿಂತು ಅಳುತ್ತಿದ್ದಳು. ಆಗ ಅವರು ಆಕೆ ಯನ್ನು ದಯದಿಂದ ನೋಡಿ, ಮೆಲ್ಲಗೆ ಕೇಳಿದ್ದೇನಂದರೆ, " ಸ್ತ್ರೀಯೆ ನಿನ್ನನ್ನು ಅಪರಾಧಿಯಾಗಿ ತಂದ ಉಳಿದ ಎಲ್ಲ ಜನರೂ ಎಲ್ಲಿ ಇದ್ದಾರೆ? ಅವರಲ್ಲಿ ಯಾರೂ ನಿನ್ನ ಮೇಲೆ ಕಲ್ಲನ್ನು ಒಗೆಯಲಿಲ್ಲವೇನು? ಎಂದರು.

ಆ ಸ್ತ್ರೀಯು ಜೇಸುನಾಥರ ದಯದ ವಾಕ್ಯಗಳನ್ನು ಕೇಳಿ, " ಆಳಿದವರೇ ಒಬ್ಬನಾದರೂ ಏನೂ ಮಾಡಲಿಲ್ಲ " ಎಂದಳು.

ಆಗ ಜೇಸುನಾಥರು " ನಾನು ಸಹ ನಿನ್ನನ್ನು ಶಿಕ್ಷಿಸುವ ದಿಲ್ಲ. ಹೋಗು ತಿರುಗಿ ಪಾಪವನ್ನು ಮಾಡಬೇಡ ಎಂದರು.

ಈ ಪ್ರಕಾರವಾಗಿ ಜೇಸುನಾಥರು ದುಷ್ಟ ಪಾಪಿಷ್ಟರನ್ನು ಮನ್ನಿಸಿದರು. ಪಾಪಿಷ್ಟರು ಎಂಥಾ ಅಕ್ರಮವಾದ ಪಾಪಗಳನ್ನು ಕಟ್ಟಿಕೊಂಡಿದ್ದರು ಸಹ ತಮ್ಮ ಪಾಪಗಳಿಗಾಗಿ ದುಃಖಪಡುತ್ತಿ ದ್ದರೆ ಅಂಥವರನ್ನು ಜೇಸುನಾಥರು ಮನ್ನಿಸುತ್ತಿದ್ದರು. ಆದ್ದ ರಿಂದ ಫರಿಜೇಯರು ಅವರಲ್ಲಿ ತಪ್ಪನ್ನು ಹಿಡಿಯಲು ಯತ್ನಿಸು ತ್ತಿದ್ದರು. ಅದೇ ಪ್ರಕಾರ ಸತ್ಯ ತಿರುಸಭೆಯ ವಿರೋಧಿಗಳು ಸಹ ಪಾಪ ಸಂಕೀರ್ತನೆಯನ್ನು ವಿರೋಧಿಸುತ್ತಾರೆ. ಜೇಸು ನಾಥರು ಪಾಪಗಳನ್ನು ಮನ್ನಿಸುವದಕ್ಕಾಗಿ ಕಲಿಸಿದ್ದದನ್ನು ಅವರು ನಂಬುದದಿಲ್ಲ.

## 74 ಮರಿಯಃ ಮತ್ತು ಮಾರ್ತಮ್ಮರನ್ನು ಕುರಿತು.

ಜೆರೂಸಲೇಮ್ ಪಟ್ಟಣದ ಸಮೀಪದಲ್ಲಿರುತ್ತಿದ್ದ ಬೆಥಾನಿಯಾ ಎಂಬ ಗ್ರಾಮದಲ್ಲಿ ಮಾರ್ತ ಮತ್ತು ಮರಿಯಳೆಂಬ ಇಬ್ಬರು ಅಕ್ಕತಂಗಿಯರು ತಮ್ಮ ಅಣ್ಣನಾದ ಲಾಜರುನೆಂಬವನೊಂದಿಗೆ ಜೀವಿಸುತ್ತಿದ್ದರು. ಇವರು ಜೇಸುನಾಥರ ಸ್ನೇಹಿತರಾಗಿದ್ದರು.

ಒಂದು ದಿನ ಜೇಸುನಾಥರು ವಿಶ್ರಾಂತಿ ತೆಗೆದುಕೊಳ್ಳಲು ಅವರ ಮನೆಗೆ ಹೋಗಿ ಕುಳಿತುಕೊಂಡರು. ಮರಿಯಮ್ಮನು ಜೇಸುನಾಥರ ಬಳಿಯಲ್ಲಿ ಕುಳಿತು ಅವರ ಭೋದನೆಯನ್ನು ಕೇಳುತ್ತಿದ್ದಳು. ಮಾರ್ತಮ್ಮನು ತನ್ನ ಮನೆಯ ಕೆಲಸವನ್ನು ಮಾಡಲಿಕ್ಕೆ ಹೋದಳು. ಮರಿಯಮ್ಮನು ಮನೆಯ ಕೆಲಸವನ್ನು ಮಾಡದೆ ಜೇಸುನಾಥರ ಬಳಿಯಲ್ಲಿ ಕುಳಿತಿರುವದನ್ನು ಮಾರ್ತಮ್ಮನು ನೋಡಿ, ಜೇಸುನಾಥರ ಬಳಿಗೆ ಬಂದು "ಕರ್ತರೇ ಮರಿಯಮ್ಮನು ಎಲ್ಲ ಕೆಲಸವನ್ನು ನಾನೊಬ್ಬಳೇ ಮಾಡುವದಕ್ಕೆ ಬಿಡುವದು ನ್ಯಾಯವೇನು ? ನನಗೆ ಸಹಾಯ ಮಾಡುವ ಹಾಗೆ ಆಕೆಗೆ ಹೇಳಿರಿ" ಎಂದಳು.

ಅದಕ್ಕೆ ಜೇಸುನಾಥರು ಮಾರ್ತಮ್ಮನನ್ನು ನೋಡಿ, "ಮಾರ್ತಾ, ಮಾರ್ತಾ, ನೀನು ಅನೇಕ ಕೆಲಸಗಳಿಂದ ತೊಂದರೆಯಲ್ಲಿರುತ್ತೀ. ಆದರೆ ಒಂದು ಕೆಲಸವು ಮಾತ್ರ ಮುಖ್ಯವಾದದ್ದು. ಮರಿಯಮ್ಮನು ಉತ್ತಮವಾದ ಭಾಗವನ್ನು ಆರಿಸಿಕೊಂಡಳು. ಅದು ಆಕೆಯಿಂದ ಎಂದಿಗೂ ತೆಗೆಯಲ್ಪಡಲಾರದು" ಎಂದಳು.

ಜೇಸುನಾಥರು ಅನೇಕ ಸಾರೆ ಜನರಿಗೆ ಹಣವನ್ನು ಈ ಲೋಕದ ವಸ್ತುಗಳನ್ನು ಕುರಿತು ಚಿಂತೆ ಮಾಡಬಾರದೆಂದು ಕಲಿಸಿದರು. "ಇನ್ನು ಯಾವ ಮನುಷ್ಯನಾಗಲಿ ಇಬ್ಬರು ಸೇವಕರಿಗೆ ಸೇವೆ ಮಾಡಲಾರನು. ಅವರಲ್ಲಿ ಆತನು ಒಬ್ಬನಿಗೆ ಹಗೆಯಾಗಿ, ಮತ್ತೊಬ್ಬನನ್ನು ಪ್ರೀತಿಸುವನು ಇಲ್ಲವೇ ಒಬ್ಬನಿಗೆ ಸೇವೆ ಮಾಡಿ ಮತ್ತೊಬ್ಬನನ್ನು ತಿರಸ್ಕರಿಸುವನು. ನೀವು ಏನು ಭುಜಿಸಬೇಕು. ಏನು ಧರಿಸಬೇಕೆಂಬದನ್ನು ಕುರಿತು ಚಿಂತಿಸಬೇಡಿರಿ. ಅಗೋ ಆ ಆಕಾಶದ ಪಕ್ಷಿಗಳನ್ನು ನೋಡಿರಿ. ಅವು ಬಿತ್ತುವದಿಲ್ಲ. ಕೊಯ್ಯುವದಿಲ್ಲ. ಅಥವಾ ಕಣಜಗಳಲ್ಲಿ ಕಾಳುಗಳನ್ನು ಸೇರಿಸಿಡುವದಿಲ್ಲ. ಆದಾಗ್ಯೂ ನಿಮ್ಮ ಪರಲೋಕ ಪಿತನು ಅವುಗಳನ್ನು ಸಾಕಿಕೊಂಡು ಬರುತ್ತಾರೆ. ನೀವು ಆ ಪಕ್ಷಿಗಳಿಗಿಂತ ಬಹು ಮೇಲಾದವರಲ್ಲವೋ ? ಮತ್ತು ಯಾಕೆ ನೀವು ಬಟ್ಟೆಗಾಗಿ ಚಿಂತಿಸುತ್ತೀರಿ ? ಹೊಲದಲ್ಲಿ ಬೆಳೆಯುವ ಲೀಲಿ ಪುಷ್ಪವನ್ನು ನೋಡಿರಿ. ಅವು ಕೆಲಸ ಮಾಡುವದಿಲ್ಲ; ನೇಯುವದು ಇಲ್ಲ. ಆದಾಗ್ಯೂ ಸಲೋಮೋನ್ ರಾಯನು ಮೊದಲಾಗಿ ತನ್ನ ಸರ್ವ ಮಹಿಮೆಯೊಂದಿಗೆ ಹೊರಗೆ ಹೊರಡುವಾಗ ಈ ಪುಷ್ಪಗಳಲ್ಲಿ ಒಂದರ ಹಾಗೆ ಚಂನವಾಗಿರಲಿಲ್ಲ. ಈಗ ಇದ್ದು ನಾಳೆ ಹಾಳಾಗಿ ಒಣಗಿ ಹೋಗುವ ಹುಲ್ಲಿಗೆ ಕರ್ತರು ಇಷ್ಟು ಚಂದವನ್ನು ಕೊಟ್ಟಿರುವಾಗ, ಅಲ್ಪ ವಿಶ್ವಾಸಿಗಳೇ; ಅವರು ನಿಮಗೆ ಏನೂ ಮಾಡದಿರುವರೋ ? ಆದ ಕಾರಣ ಯಾವದನ್ನು ಕುರಿತು ಚಿಂತೆ ಮಾಡಬೇಡಿರಿ. ಮೊದಲು ಸರ್ವೇಶ್ವರನ ರಾಜ್ಯವನ್ನು ಅವರ ನೀತಿಯನ್ನು ಹುಡುಕಿರಿ. ಆಗ ಅವುಗಳೆಲ್ಲವೂ ನಿಮಗೆ ಕೊಡಲ್ಪಡುವವು " ಎಂದರು.

ತಿರುಗಿ ಜೇಸುನಾಥರು ಹೇಳಿದ್ದೇನಂದರೆ, ಭೂಲೋಕದಲ್ಲಿ ಆಸ್ತಿಯನ್ನು ಸಂಪಾದಿಸಿ ಮಾಡುಗಬೇಡಿರಿ. ಇಲ್ಲಿ ಅದಕ್ಕೆ ಕಿಲುಬೂ, ನುಸಿಯು ಹಿಡಿಯುವದು; ಕಳ್ಳರು ಸುಲುಕೊಳ್ಳುವರು. ಆದರೆ ಪರಲೋಕದಲ್ಲಿ ಬೊಕ್ಕಸವನ್ನು ಸೇರಿಸಿ ಇಡಿರಿ. ಅಲ್ಲಿ ಕಿಲುಬು ನುಸಿಯು ಹಿಡಿಯದು, ಕಳ್ಳರು ಕದ್ದುಕೊಳ್ಳರು. ನಿಮ್ಮ ಬೊಕ್ಕಸ ಎಲ್ಲಿರುವದೋ ಅಲ್ಲಿಯೇ ನಿಮ್ಮ ಹೃದಯವು ಇರುವದು. ”

ಈ ವಾಕ್ಯಗಳಿಂದ ಜೇಸುನಾಥರು ನಾವು ಈ ಲೋಕದ ವಸ್ತುಗಳ ಸಲುವಾಗಿ ಚಿಂತೆ ಮಾಡಬಾರದೆಂದು ಕಲಿಸಲಿಲ್ಲ. ಆದರೆ ಮೊಟ್ಟ ಮೊದಲು ಯಾವಾಗಲೂ ಆತ್ಮವನ್ನು ಕುರಿತು ಜಾಗ್ರತೆಯಾಗಿರಬೇಕೆಂದು ತಿಳಿಸಿದರು.

## 75 ಮೃತವಾದ ಲಾಜರನು ಜೀವದಿಂದ ಎಬ್ಬಿಸಲ್ಪಟ್ಟ ವರ್ತಮಾನ.

ಮಾರ್ತಾ ಮತ್ತು ಮರಿಯಮ್ಮನವರ ಅಣ್ಣನಾದ ಲಾಜರನು ವ್ಯಾಧಿಯಲ್ಲಿ ಬಿದ್ದಿದ್ದನು ಆದ್ದರಿಂದ ಅವನ ಸಹೋದರಿಯರು ಜೇಸುನಾಥರಿಗೆ ಹೇಳಿ ಕಳುಹಿಸಿದ್ದರು. ಆಗ ಜೇಸುನಾಥರು ಬಹಳ ದೂರದಲ್ಲಿದ್ದ ಗ್ರಾಮದಲ್ಲಿ ಬೋಧಿಸುತ್ತಿದ್ದರು. ಎರಡು ದಿವಸಗಳಾದ ನಂತರ ಜೇಸುನಾಥರು ತಮ್ಮ ಶಿಷ್ಯರನ್ನು ನೋಡಿ “ ಬೆಥಾನ್ಯಾವೆಂಬ ಗ್ರಾಮಕ್ಕೆ ಹೋಗೋಣ ಅಲ್ಲಿ ಲಾಜರನು ನಿದ್ರಿಸುತ್ತಾನೆ ಅವನನ್ನು ಎಬ್ಬಿಸಹೋಗುತ್ತೇವೆ. ” ಅಂದರು.

ಜೇಸುನಾಥರು ಬೇಥಾನ್ಯಾಕ್ಕೆ ಬರುವದಕ್ಕಿಂತ ಮುಂಚೆ ಲಾಜರನು ಸತ್ತುಹೋಗಿ ಅಡಕಮಾಡಲ್ಪಟ್ಟು ನಾಲ್ಕು ದಿವಸಗಳಾಗಿದ್ದವು. ಮಾರ್ತಮ್ಮನು ಜೇಸುನಾಥರು ಬರುವದನ್ನು ಕೇಳಿ, ಅವರ ಎದುರಿಗೆ ಹೋಗಿ, ಅತ್ತು "ಆಳಿದವರೇ ನೀವು ಇಲ್ಲಿ ಇದ್ದಿದ್ದರೆ ನನ್ನ ಸಹೋದರನು ಸಾಯುತ್ತಿದ್ದಿಲ್ಲ. ಆದರೆ ಈಗಲೂ ನೀವು ಸರ್ವೇಶ್ವರನಿಂದ ಕೇಳುವದನ್ನೆಲ್ಲ ಅವರು ನಿಮಗೆ ಕೊಡುವರೆಂದು ನನಗೆ ತಿಳಿಯುವದು" ಅಂದಳು.

ಅದಕ್ಕೆ ಜೇಸುನಾಥರು, "ಲಾಜರನು ಪುನಃ ಏಳುವನು" ಅಂದರು.

ಅದಕ್ಕವಳು "ಕಡೇ ದಿನದಲ್ಲಿ ಅವನು ಜೀವದಿಂದ ಏಳುವನೆಂದು ನನಗೆ ಗೊತ್ತಿದೆ" ಎಂದಳು.

ಆಗ ಜೇಸುನಾಥರು "ನಾನೇ ಜೀವವು ಉತ್ಥಾನವೂ ಆಗಿದ್ದೇನೆ; ನನ್ನಲ್ಲಿ ವಿಶ್ವಾಸಿಸುವವನು ಸತ್ತು ಹೋಗಿದ್ದರೂ ಬದುಕುವನು. [illegible] ವಿಶ್ವಾಸವನ್ನಿಟ್ಟು ಜೀವಿಸುವರೋ ಅವರು ಎಂದಿಗೂ ಸಾಯುವದಿಲ್ಲ. ಇದನ್ನು ನೀನು ವಿಶ್ವಸಿಸುತ್ತಿಯೋ? ಎಂದು ಕೇಳಿದರು. ಅದಕ್ಕೆ ಮಾರ್ತಮ್ಮನು "ಹೌದು ಆಳಿದವರೇ ತಾವು ದೇವಕುಮಾರನಾದ ಜೇಸುಕ್ರಿಸ್ತನಾಥರೆಂದು ನಾನು ವಿಶ್ವಾಸಿಸುತ್ತೇನೆ" ಎಂದಳು.

ಮಾರ್ತಮ್ಮನು ಹೋಗಿ ತನ್ನ ತಂಗಿಯಾದ ಮರಿಯಮ್ಮನನ್ನು ಕರೆದಳು. ಆಕೆಯು ಜೇಸುನಾಥರ ಪಾದದಲ್ಲಿ ಬಿದ್ದು "ಆಳಿದವರೇ ನೀವು ಇಲ್ಲಿ ಇರುತ್ತಿದ್ದರೆ ನನ್ನ ಅಣ್ಣನು ಸಾಯುತ್ತಿದ್ದಿಲ್ಲ" ಎಂದು ಅತ್ತಳು. ಮರಿಯಮ್ಮನ ಸಂಗಡ

ಅನೇಕ ಮಂದಿ ಸ್ನೇಹಿತರು ಬಂದಿದ್ದರು. ಜೇಸುನಾಥರು ಲಾಜರನನ್ನು ಎಲ್ಲಿ ಅಡಕ ಮಾಡಿದ್ದೀರಿ ಎಂದು ಕೇಳಲು, ಅವರು ನಾಲ್ಕು ದಿವಸಗಳ ಮುಂಚೆ ಅಡಕ ಮಾಡಲ್ಪಟ್ಟ ಸಮಾಧಿಯ ಬಳಿಗೆ ಹೋದರು. ಆ ಸಮಾಧಿಯು ಒಂದು ದೊಡ್ಡ ಬಂಡೆಯಲ್ಲಿ ಅಗಿಯಲ್ಪಟ್ಟಿತ್ತು. ಆದರೆ ಮೇಲೆ ಒಂದು ಕಲ್ಲನ್ನು ಹೊರಳಿಸಿಟ್ಟಿದ್ದರು.

ಜೇಸುನಾಥರು ಮೇಲೆ ಹೊರಳಿಸಿಟ್ಟ ಬಂಡೆಯನ್ನು ಎತ್ತಿರೆಂದು ಹೇಳಿ, ತಮ್ಮ ಕಣ್ಣುಗಳನ್ನು ಮೇಲಕ್ಕೆತ್ತಿ ಹೇಳಿದ್ದೇನಂದರೆ, "ನನ್ನ ಪಿತನೇ, ನೀವು ನನ್ನ ಬಿನ್ನಹವನ್ನು ಕೇಳಿದ ನಿಮಿತ್ತ ನಿಮಗೆ ಮೇಲರಿತ ಸ್ತೋತ್ರವನ್ನು ಮಾಡುತ್ತೇನೆ. ನೀವು ಯಾವಾಗಲೂ ನನ್ನ ಮನವಿಯನ್ನು ಆಲೈಸುತ್ತೀರೆಂದು ನಾನು ಬಲ್ಲೆನು. ಆದರೆ ನನ್ನನ್ನು ಕಳುಹಿಸಿದವರು ನೀವೇ ಎಂದು ನನ್ನ ಸುತ್ತಲಿರುವವರು ಅರಿಯುವಹಾಗೆ ಇದನ್ನು ಹೇಳಿದೆನೆಂದರು. ತರುವಾಯ ಲಾಜರನೇ ಹೊರಗೆ ಬಾ ಎಂದು ಗಟ್ಟಿಯಾದ ಧ್ವನಿಯಿಂದ ಕೂಗಿದರು ಆ ಕ್ಷಣವೇ ಸತ್ತವನು ಸಮಾಧಿಯನ್ನು ಬಿಟ್ಟು ಹೊರಗೆ ಬಂದನು. ಅವನ ಕೈಕಾಲುಗಳು ಬಟ್ಟೆಗಳಿಂದ ಕಟ್ಟಲ್ಪಟ್ಟಿದ್ದವು. ಆದ್ದರಿಂದ ಜೇಸುನಾಥರು ಅಲ್ಲಿದ್ದವರಿಗೆ "ಅವನ ಕಟ್ಟುಗಳನ್ನು ಬಿಚ್ಚಿ ಅವನನ್ನು ಹೋಗ ಬಿಡಿರಿ" ದರು.

ಈ ಅದ್ಭುತದಿಂದ ಅನೇಕರು ಜೇಸುನಾಥರನ್ನು ವಿಶ್ವಾಸಿಸಿದರು. ಆದರೆ ಫರಿಜೇಯರು ಅವರನ್ನು ಬಹಳವಾಗಿ ವಿರೋಧಿಸಹತ್ತಿದ್ದರು. ಗುರು ಪ್ರಸಾಧಿಗಳು ಆಲೋಚನೆಯ ಸಭೆಯನ್ನು ಸೇರಿಸಿ, ಅವರನ್ನು ಕೊಲೆಮಾಡಲು ಆಲೋಚಿಸಿದರು.

## 76 ಜೇಸುನಾಥರು ಚಿಕ್ಕ ಮಕ್ಕಳನ್ನು ಆಶೀರ್ವದಿಸಿದ್ದು

ಜೇಸುನಾಥರು ಚಿಕ್ಕ ಮಕ್ಕಳನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಅವರಿಗೆ ಎಷ್ಟು ಕೆಲಸವಿದ್ದರೂ ಚಿಕ್ಕ ಮಕ್ಕಳ ಸಲುವಾಗಿ ಸ್ವಲ್ಪ ಸಮಯವನ್ನು ತೆಗೆದುಕೊಳ್ಳುತ್ತಿದ್ದರು. ಒಂದು ಸಾರೆ ಅವರು ಬಹಳ ಹೊತ್ತಿನವರೆಗೆ ಬೋಧಿಸಿದ್ದರಿಂದ ಬಹಳ ಆಯಾಸ ಪಟ್ಟು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಲು ಕುಳಿತಿದ್ದರು. ಕೆಲವು ತಾಯಿಯರು ತಮ್ಮ ಕೂಸುಗಳನ್ನು ಎತ್ತಿಕೊಂಡು ಅಲ್ಲಿಗೆ ಬಂದು, ಜೇಸುನಾಥರು ಅವರ ತಲೆಗಳ ಮೇಲೆ ತಮ್ಮ ಕೈಗಳನ್ನಿಟ್ಟು ಅವರನ್ನು ಆಶೀರ್ವದಿಸುವ ಹಾಗೆ ಬೇಡಿಕೊಂಡರು. ಆಗ ಅವರ ಶಿಷ್ಯರು ಕೂಸುಗಳ ತಾಯಿಯರನ್ನು ಗದ್ದರಿಸಿ, "ನೀವು ನಿಮ್ಮ ಮಕ್ಕಳನ್ನು ಕರಕೊಂಡು ಹೋಗಿರಿ. ಯಾಕಂದರೆ ಗುರುವಾದವರು ಬಹಳ ಆಯಾಸಗೊಂಡಿದ್ದಾರೆ. ಅವರಿಗೆ ತೊಂದರೆ ಕೊಡಬೇಡಿರಿ, ಎಂದರು.

ಜೇಸುನಾಥರು ಮಕ್ಕಳನ್ನು ನೋಡಿದ್ದರು. ಮತ್ತು ಅವರು ಹೇಗೆ ತಿರುಗಿ ಕಳುಹಿಸಲ್ಪಟ್ಟರೆಂದು ಕೇಳಿದ್ದರು. ಅದ್ದರಿಂದ ತಮ್ಮ ಶಿಷ್ಯರನ್ನು ನೋಡಿ, "ಚಿಕ್ಕ ಮಕ್ಕಳನ್ನು ನನ್ನ ಬಳಿಗೆ ಬರ ಬಿಡಿರಿ. ಅವರನ್ನು ಆತಂಕ ಪಡಿಸಬೇಡಿರಿ. ಯಾಕಂದರೆ ಪರಲೋಕ ರಾಜ್ಯವು ಇಂಥವರದಾಗಿದೆ. ನೀವು ಈ ಚಿಕ್ಕ ಮಕ್ಕಳ ಹಾಗೆ ನಿಷ್ಕಪಟವುಳ್ಳವರಾಗುವವರೆಗೆ ಪರಲೋಕ ರಾಜ್ಯವನ್ನು ಸೇರಲಾರಿರೆಂದು ನಾನು ನಿಮಗೆ ಹೇಳುತ್ತೇನೆ" ಎಂದರು. ತರುವಾಯ ಕೂಸುಗಳ ತಾಯಿಗಳನ್ನು ಕರೆದು ಆ ಚಿಕ್ಕ ಮಕ್ಕಳನ್ನು ತಮ್ಮ ಕೈಯಲ್ಲಿ ಎತ್ತಿಕೊಂಡು, ಅವುಗಳ ತಲೆಯ ಮೇಲೆ ತಮ್ಮ ಹಸ್ತವನ್ನಿಟ್ಟು ಆಶೀರ್ವದಿಸಿದರು.

ಜೇಸುನಾಥರು ಅನೇಕ ಸಾರಿ ತಮ್ಮನ್ನು ಹಿಂಬಾಲಿಸಿದ ವರಿಗೆ ಚಿಕ್ಕ ಮಕ್ಕಳನ್ನು ತೋರಿಸಿ ಅವರಿಗೆ ಸರಿಸಮಾನರಾಗ ಬೇಕೆಂದು ತಿಳಿಸಿದ್ದರು. ಒಮ್ಮೆ ಕೆಲವು ಶಿಷ್ಯರು ಕರ್ತರನ್ನು ನೋಡಿ "ಗುರುವೇ ಮೋಕ್ಷದಲ್ಲಿ ಯಾರು ಹೆಚ್ಚಿನವರಾಗಿರುವ ರೆಂದು ಕೇಳಲು, ಅವರು ಒಬ್ಬ ಸಣ್ಣ ಮಗುವನ್ನು ಕರೆದು, ಆ ಮಗುವನ್ನು ಅವರ ಮಧ್ಯದಲ್ಲಿ ನಿಲ್ಲಿಸಿ ಹೇಳಿದ್ದೇನಂದರೆ, ನೀವು ಈ ಸಣ್ಣ ಮಗುವಿಗೆ ಸಮಾನರು ಆಗುವವರೆಗೆ ಮೋಕ್ಷರಾಜ್ಯ ವನ್ನು ಪ್ರವೇಶಿಸಲಾರಿರೆಂದು ನಾವು ನಿಮಗೆ ಹೇಳುತ್ತೇವೆ. ಯಾರು ಈ ಮಗುವಿನ ಹಾಗೆ ದೀನತನಾಗಿರುವನೋ ಅವನೇ ಮೋಕ್ಷರಾಜ್ಯದಲ್ಲಿ ಹೆಚ್ಚಿನವನಾಗಿರುವನು. ಮತ್ತು ಯಾರು ನನ್ನ ಹೆಸರಿನಲ್ಲಿ ಒಬ್ಬ ಮಗುವನ್ನು ಸ್ವೀಕರಿಸುವನೋ ಅವನು ನನ್ನನ್ನು ಸ್ವಿಕರಿಸುವನು. ಆದರ ಚಿಕ್ಕ ಮಕ್ಕಳಿಗೆ ದುರ್ಮಾತ್ಮಕೆ ಯನ್ನು ಕೊಡುವವನು, ಶಿಕ್ಷೆಗೆ ಒಳಗಾಗುವನು. ಅಂಥವನ ಕೊರಳಿಗೆ ಬೀಸುವ ಕಲ್ಲನ್ನು ಕಟ್ಟಿ ಸಮುದ್ರದ ಪಾತಾಳದಲ್ಲಿ ನೂಕಿ ಬಿಡುವದು ಉತ್ತಮ. ಆದ್ದರಿಂದ ಮಕ್ಕಳನ್ನು ತಿರಸ್ಕರಿ ಸಬೇಡಿರೆಂದರು.

ಈ ಚರಿತ್ರೆಯಿಂದ ನಾವು ಅನೇಕ ಮುಖ್ಯವಾದ ಸಂಗತಿ ಯನ್ನು ತಿಳಕೊಳ್ಳುವೆವು. ನಾವು ಎಷ್ಟು ಪ್ರಾಯುದವರಾದಾಗ್ಯೂ ಜೇಸುನಾಥರು ತಿಳಿಸಿದ ಹಾಗೆ ಸಣ್ಣ ಮಕ್ಕಳಂತೆ ನಮ್ಮ ಹೃದ ಯಗಳು ಪರಿಶುದ್ಧವಾಗಿದ್ದು ನಮ್ಮ ವಿಶ್ವಾಸ, ನಂಬಿಕೆಯನ್ನು ದೇವರ ಮೇಲೆ ಇಡಬೇಕು. ಮತ್ತು ಜೇಸುನಾಥರು ಚಿಕ್ಕ ಮಕ್ಕ ಳನ್ನು ಪ್ರೇಮಿಸಿದ ಹಾಗೆ ನಾವು ಸಹ ಅವರನ್ನು ಪ್ರೇಮಿಸ ಬೇಕು.

## ೭೭ ಒಳ್ಳೇ ಗೊಲ್ಲನಾದ ಜೇಸುನಾಥರು

ದೇವರು ಜನರ ಮೇಲೆ ಎಷ್ಟು ಪ್ರೇಮವನ್ನು ತೋರಿಸು ತ್ತಾರೆಂದು ಜೇಸುನಾಥರು ಅನೇಕ ಸಾರಿ ಜನರಿಗೆ ತಿಳಿಸಿದ್ದರು. ಒಮ್ಮೆ ಅವರು ಹೇಳಿದ್ದೇನಂದರೆ "ನಾನು ಒಳ್ಳೇ ಗೊಲ್ಲನಾಗಿದ್ದೇನೆ. ಒಳ್ಳೇ ಗೊಲ್ಲನು ತನ್ನ ಕುರಿಗಳಿಗಾಗಿ ತನ್ನ ಪ್ರಾಣವನ್ನು ಕೊಡುವನು. ಕೂಲಿಯಾಳು ತೋಳ ಬರುವದನ್ನು ಕಂಡು ಕುರಿಗಳನ್ನು ಬಿಟ್ಟು ಬಿಡುವನು. ಆಗ ತೋಳವು ಕುರಿಗಳನ್ನು ಹಿಡಿದು ಕೊಂದು ಅವುಗಳನ್ನು ಚದರಿಸುವವು. ಆದರೆ ನಾನು ಒಳ್ಳೇ ಗೊಲ್ಲನು. ನಾನು ನನ್ನ ಕುರಿಗಳನ್ನು ಬಲ್ಲೆನು. ನನ್ನ ಕುರಿಗಳು ನನ್ನನ್ನು ಬಲ್ಲವು. ನಾನು ನನ್ನ ಕುರಿಗಳ ಸಲುವಾಗಿ ನನ್ನ ಪ್ರಾಣವನ್ನು ಒಪ್ಪಿಸುತ್ತೇನೆ. ಮತ್ತು ನನಗೆ ಈ ಕುರಿಗಳಲ್ಲದೆ ಬೇರೆ ಕುರಿಗಳು ಸಹ ಇವೆ. ಅವುಗಳನ್ನು ಸಹ ನಾನು ಇಲ್ಲಿಗೆ ತರಬೇಕು. ಅವು ನನ್ನ ಶಬ್ದವನ್ನು ಕೇಳುವವು. ಆಗ ಒಂದೇ ಮಂದೆಯೂ ಒಬ್ಬನೇ ಗೊಲ್ಲನು ಇರುವನು.

ಈ ವಾಕ್ಯಗಳಲ್ಲಿ ಜೇಸುನಾಥರು ಸತ್ಯ ಕಥೋಲಿಕ್ ತಿರುಸಭೆಗೆ ಹೊರಗೆ ಇರುವ ಅಜ್ಞಾನಿಗಳನ್ನು ಕುರಿತು ಹೇಳಿದರು. ಇವರೆಲ್ಲರೂ ಜೇಸುನಾಥರು ಸ್ಥಾಪಿಸಿದ ಒಂದೇ ಮತದಲ್ಲಿ ಸೇರಬೇಕೆಂದು ಇಚ್ಛಿಸಿದರು- ಮತ್ತು ಹೇಳಿದ್ದೇನಂದರೆ ಈ ಇಡೀ ಲೋಕದ ಜನರೆಲ್ಲರೂ ಕಥೋಲಿಕರಾಗಿ ಅರ್ಚಶಿಷ್ಟರಾಯಪ್ಪರ ಸ್ಥಾನದಲ್ಲಿರುವ ಪ. ಪ್ರಸ್ವಾಮಿಯವರ ಅಧಿಕಾರದಲ್ಲಿರಬೇಕೆಂದು ಹೇಳಿದರು ಯಾರು ಕಥೋಲಿಕ್ ಮತವನ್ನು ಪ್ರಸಿದ್ಧಿಗೊಳಿಸುತ್ತಾರೋ ಅವರು ದೇವರ ಚಿತ್ತವನ್ನು ನೆರವೇರಿಸುತ್ತಾರೆ.

ಜೇಸುನಾಥರು ಇನ್ನು ತಿಳಿಸಿದ್ದೇನಂದರೆ, ದೇವರು ಪಾಪಾತ್ಮರ ಸಲುವಾಗಿ ಎದುರು ನೋಡುತ್ತಾರೆ. ಮತ್ತು ಅವರು ತಮ್ಮ ಪಾಪಗಳಿಗಾಗಿ ದುಃಖಪಡುವದನ್ನು ಕಂಡು ಸಂತೋಷಿಸುತ್ತಾರೆ. ಜೇಸುನಾಥರು ಸುಂಕದವರೊಡನೆಯೂ ಪಾಪಾತ್ಮರೊಡನೆಯೂ ಹೋದದ್ದಕ್ಕಾಗಿ ಫರಿಜೇಯರು ಅವರ ಮೇಲೆ ಗುಣಗುಟ್ಟಿ ಈ ಮನುಷ್ಯನು ಪಾಪಾತ್ಮರ ಸಂಗಡ ಭುಂಜಿಸುತ್ತಾನೆಂದರು. ಆದರೆ ಜೇಸುನಾಥರು ಅವರಿಗೆ ತಿಳಿಸಿದ್ದೇನಂದರೆ "ಸೌಖ್ಯವಾಗಿರುವವರಿಗೆ ವೈದ್ಯನು ಅವಸರವಿಲ್ಲ. ಆದರೆ ವ್ಯಾಧಿಗ್ರಸ್ಥನಿಗೆ ಅವಸರವಾಗಿರುತ್ತಾನೆ. ನಾನು ಪುಣ್ಯಾತ್ಮರನ್ನು ಕರೆಯಲು ಬರಲಿಲ್ಲ. ಆದರೆ ಪಾಪಾತ್ಮರು ತಪಸ್ಸು ಮಾಡುವ ಹಾಗೆ ಹೇಳಲು ಬಂದೆನು" ಅಂದರು.

ಜೇಸುನಾಥರು ಫರಿಜೇಯರನ್ನು ನೋಡಿ, "ನಿಮ್ಮಲ್ಲಿ ಯಾವನೊಬ್ಬನಿಗೆ ನೂರು ಕುರಿಗಳಿದ್ದು ಅವುಗಳಲ್ಲಿ ಒಂದು ಕಳೆದು ಹೋದರೆ ಏನು ಮಾಡುವನು ? ಉಳಿದ ತೊಂಭತ್ತೊಂಬತ್ತು ಕುರಿಗಳನ್ನು ಬಿಟ್ಟು ಕಳೆದು ಹೋದ ಕುರಿಯನ್ನು ಹುಡುಕಲು ಹೋಗುವನಲ್ಲವೋ ? ಅದು ಸಿಕ್ಕಾಗ ಸಂತೋಷದಿಂದ ಅದನ್ನು ತನ್ನ ಭುಜಗಳಮೇಲೆ ಎತ್ತಿಕೊಂಡು ಬರುವನಲ್ಲವೋ? ಮನೆಗೆ ಬಂದು ತನ್ನ ಸ್ನೇಹಿತರನ್ನು ಕರೆದು ಎಲ್ಲರೂ ಸಂತೋಷಿಸಿರಿ ಯಾಕಂದರೆ ಕಳೆದು ಹೋದ ನನ್ನ ಕುರಿಯು ತಿರುಗಿ ಸಿಕ್ಕಿತೆಂದು ಹೇಳುವನು." ಅದಕ್ಕಾಗಿ ನಾನು ಸಹ ನಿಮಗೆ ನಿಶ್ಚಯವಾಗಿ ಹೇಳುತ್ತೇನೆ. ಇದೇ ಪ್ರಕಾರ ಮೋಕ್ಷದಲ್ಲಿ ಸಹ ತಪಸ್ಸು ಮಾಡಲು ಅವಸರವಿಲ್ಲದ ತೊಂಬತ್ತೊಂಬತ್ತು ಮಂದಿ ಪುಣ್ಯಾತ್ಮರಿಗಿಂತಲೂ, ಒಬ್ಬ ಪಾಪಾತ್ಮನು ತನ್ನ ಪಾಪಗಳಿಗಾಗಿ ದುಃಖಪಡುವದನ್ನು ಕಂಡು ಸಂತೋಷಿಸುವರು.

## ೭೩ ಗೋಧಿವೆಯ ಮಧ್ಯದಲ್ಲಿ ಕಳೇಬಿತ್ತಿದ ಸಾಮ್ಯ.

ಜೇಸುನಾಥರು ಸತ್ಯ ತಿರುಸಭೆಯನ್ನು ಕುರಿತು ಅನೇಕ ಸಾಮ್ಯಗಳನ್ನು ಹೇಳಿದ್ದರು. ಒಂದು ಸಾರೆ ಹೇಳಿದ್ದೇನಂದರೆ "ಮೋಕ್ಷರಾಜ್ಯವು ತನ್ನ ಹೊಲದಲ್ಲಿ ಒಳ್ಳೇ ಗೋಧಿವೆಯನ್ನು ಬಿತ್ತ ಹೋದ ಮನುಷ್ಯನಿಗೆ ಸಮಾನವಾಗಿದೆ. ಅವನ ಸೇವಕರು ನಿದ್ದೆ ಮಾಡುತ್ತಿರುವಾಗ ಅವನ ವೈರಿ ಬಂದು ಗೋಧಿವೆಯ ಮಧ್ಯದಲ್ಲಿ ಕಳೆಯನ್ನು ಬಿತ್ತಿ ಹೋದನು ಗೋಧಿವೆಯು ಬೆಳೆಯುತ್ತಿರುವಲ್ಲಿ ಕಳೆಯುಸಹ ಬೆಳೆಯಿತು. ಆಗ ಸೇವಕರು ಯಜಮಾನನ ಬಳಿಗೆ ಬಂದು, "ಅಯ್ಯಾ ನೀವು ನಿಮ್ಮ ಹೊಲದಲ್ಲಿ ಒಳ್ಳೇ ಬೀಜ ಬಿತ್ತಲಿಲ್ಲವೋ ? ಹಾಗಾದರೆ ಕಳೆ ಎಲ್ಲಿಂದ ಬಂತು ? ಅಂದರು. ಅದಕ್ಕವನು, "ನನ್ನ ವೈರಿಯು ಅದನ್ನು ಮಾಡಿದ್ದಾನೆ ಅಂದನು. ಸೇವಕರು ನಾವು ಹೋಗಿ ಅದನ್ನು ಕಿತ್ತು ಹಾಕಬೇಕೋ" ಎಂದು ಕೇಳಲಾಗಿ, ಈಗ ಬೇಡಿರಿ ಯಾಕಂದರೆ ಕಳೇ ಕೀಳುವಲ್ಲಿ ಗೋಧಿವೆಯನ್ನು ಸಹ ಕೆಲವುಸರ್ತಿ ಕೀಳಬಹುದು. ಕೊಯ್ಯುವ ಕಾಲದ ವರೆಗೂ ಎರಡು ಕೂಡ ಬೆಳೆಯಲಿ. ಸುಗ್ಗಿಯ ಕಾಲದಲ್ಲಿ ಕಳೆಯನ್ನು ಕೊಯ್ದು ಕಟ್ಟುಗಳಾಗಿ ಕಟ್ಟಿ ಬೆಂಕಿಯೊಳಗೆ ಹಾಕಬೇಕು ಗೋಧಿವೆಯನ್ನು ಕೊಯ್ದು ಕಣಜದಲ್ಲಿ ಸೇರಿಸಬೇಕು. ಎಂದು ಕೊಯ್ಯಲು ಕೊಯ್ಯುವವರಿಗೆ ಹೇಳುವೆನೆಂದನು" ಎಂದು ವಚನಿಸಿದರು.

ಶಿಷ್ಯರು ಈ ಸಾಮ್ಯದ ಅರ್ಥವೇನೆಂದು ಜೇಸುನಾಥರನ್ನು ಕೇಳಿದರು. ಆಗ ಅವರು ಹೇಳತೊಡಗಿದರು; ಒಳ್ಳೇ ಬೀಜವನ್ನು ಬಿತ್ತಿದವನು ಮನುಷ್ಯಕುಮಾರನು ಹೊಲವು ಈ ಭೂಲೋಕವೇ ಸರಿ ಒಳ್ಳೇ ಬೀಜಗಳು ಮೋಕ್ಷರಾಜ್ಯಕ್ಕೆ ಹೋಗ

ಬೇಕಾದ ಸರ್ವೇಶ್ವರನ ಮಕ್ಕಳು. ಕಳೆಯು ಪಿಶಾಚಿಯ ಮಕ್ಕಳು. ಅದನ್ನು ಬಿತ್ತಿದ ವೈರಿಯು ಪಿಶಾಚಿಯಾಗಿರುತ್ತಾನೆ. ಕೊಯ್ಯುವ ಕಾಲವು ಲೋಕಾಂತ್ಯವು. ಕೊಯ್ಯುವಂತವರು ದೇವದೂತರು. ಕಳೆಯನ್ನು ಕೊಯ್ದು ಅಗ್ನಿಯಲ್ಲಿ ಹಾಕುವ ಮೇರೆಗೆ ದುಷ್ಟರಿಗೆ ಲೋಕಾಂತ್ಯದಲ್ಲಿ ಸಂಭವಿಸುವದು. ಅಲ್ಲಿ ಅಳುವಿಕೆಯೂ, ಗೋಳಾಟವೂ, ಹಲ್ಲುಕಡಿತವೂ ಉಂಟಾಗಿರುವದು. ಆದರೆ ನೀತಿವಂತರು ಭೂಲೋಕದಲ್ಲಿ ಸೂರ್ಯನು ಪ್ರಕಾಶಿಸುವ ಮೇರೆಗೆ ತಮ್ಮ ಪರಮ ತಂದೆಯ ರಾಜ್ಯದಲ್ಲಿ ಪ್ರಜ್ವಲಿಸುವರೆಂದು ವಚನಿಸಿದರು.

ಈ ಪ್ರಕಾರವಾಗಿ ಜೇಸುನಾಥರು ತಿಳಿಸಿದ್ದೇನಂದರೆ ತಮ್ಮ ಕಥೋಲಿಕ್ ತಿರುಸಭೆಯಲ್ಲಿ ಸಹ ಕೆಟ್ಟವರು ಒಳ್ಳೇಯವರ ಸಂಗಡ ಕೂಡಿ ಲೋಕಾಂತ್ಯದವರೆಗೆ ಇರುವರು. ನಮ್ಮ ಸತ್ಯ ತಿರುಸಭೆಯು ಈ ಲೋಕದಲ್ಲೆಲ್ಲಾ ವಿಸ್ತರಿಸಿ ಎಲ್ಲಾ ಜನಾಂಗಗಳಿಗೂ ಒಂದೇ ಮನೆಯಾಗುವದು ಮತ್ತು ಹೇಳಿದ್ದೇನಂದರೆ "ಮೋಕ್ಷರಾಜ್ಯವು ಒಂದು ಸಾಸಿವೆಯ ಬೀಜಕ್ಕೆ ಸಮಾನವಾಗಿದೆ. ಅದನ್ನ ಒಬ್ಬ ಮನುಷ್ಯನು ತನ್ನ ಹೊಲದಲ್ಲಿ ಬಿತ್ತಿದನು. ಅದು ಬೆಳೆದು ದೊಡ್ಡ ಗಿಡವಾಯಿತು. ಆಕಾಶದ ಪಕ್ಷಿಗಳು ಅವರ ದಪ್ಪವಾದ ಕೊಂಬೆಗಳಲ್ಲಿ ನಿವಾಶಿಸುತ್ತವೆ" ಅಂದರು.

ನಮ್ಮ ಕಥೋಲಿಕ್ ತಿರುಸಭೆಯ ಮತಭೇದಕರು ಈ ದೊಡ್ಡ ಗಿಡದಿಂದ ಮುರಿದು ಹೋದ ಕೊಂಬೆಗಳಾಗಿರುತ್ತಾರೆ. ಇವು ತಮ್ಮ ಫಲಗಳನ್ನು ಭರಿಸಲಾರವು. ಉಳಿದ ಮತಭೇದಗಳು ಸತ್ತಹಾಗೆ ಇವುಸಹ ಸಾಯುವವು ಆದರೆ ನಮ್ಮ ತಾಯಿಯಾದ ತಿರುಸಭೆಯು ಯಾವಾಗಲೂ ನಿಲ್ಲುವದು. ಇದು

ಭೂಲೋಕದ ಎಲ್ಲಾ ಕಡೆಗಳಲ್ಲಿಯೂ ಹಬ್ಬುವದು ಆಗ ಲೋಕದ ಎಲ್ಲಾ ಜನಾಂಗಗಳು ಇದಕ್ಕೆ ಸೇರುವದು.

## 79 ಕೆಟ್ಟ ಸೇವಕನ ಸಾಮ್ಯ.

ಜೇಸುನಾಥರು ಮನ್ನಣೆಯನ್ನು ದಯವನ್ನು ಕುರಿತು ಕಲಿಸಿದರು. ಒಂದು ದಿನ ರಾಯಪ್ಪನವರು ಜೇಸುನಾಥರನ್ನು ನೋಡಿ " ಆಳಿದವರೇ ನನ್ನ ಸಹೋದರನು ನನಗೆ ವಿರೋಧ ವಾಗಿ ತಪ್ಪುಮಾಡಿದಾಗ ನಾನು ಅವನನ್ನು ಎಷ್ಟುಸಾರೆ ಕ್ಷಮಿಸ ಬೇಕು ಏಳು ಸರ್ತಿಯೋ ? ಎಂದನು.

ಅದಕ್ಕೆ ಜೇಸುನಾಥರು ಪ್ರತ್ಯುತ್ತರವಾಗಿ " ಏಳುಸಾರಿ ಯಲ್ಲ. ಏಳು ಎಪ್ಪತ್ತುಸಾರೆ " ಅಂದರೆ ಯಾವಾಗಲೂ ನಮ್ಮ ವೈರಿಗಳನ್ನು ಕ್ಷಮಿಸಬೇಕು. ಎಂದು ಇದರ ಅರ್ಥ.

ಜೇಸುನಾಥರು ತಿರುಗಿ ಈ ಸಾಮ್ಯವನ್ನು ಹೇಳಿದರು. ಏನಂದರೆ ಮೋಕ್ಷರಾಜ್ಯವು ಒಬ್ಬ ಅರಸನಿಗೆ ಸಮಾನವಾಗಿದೆ. ಅವನು ತನ್ನ ಸೇವಕರಿಂದ ಲೆಖ್ಖವನ್ನು ತೆಗೆದುಕೊಳ್ಳ ಮನಸ್ಸಾ ಗಿದ್ದು, ಅವರವರ ಲೆಖ್ಖವನ್ನು ಕೇಳಲು ಪ್ರಾರಂಭಿಸುವಾಗ, ಅವನಿಗೆ ಒಬ್ಬ ಸೇವಕನು ಹತ್ತು ಸಾವಿರತಲೆಂತು ಕೊಡಬೇಕಾ ಗಿತ್ತು. ಆದರೆ ಸಾಲ ತೀರಿಸಲು ಅವನ ಹತ್ತರ ಹಣವಿರಲಿಲ್ಲ. ಆದ್ದರಿಂದ ಅವನನ್ನು, ಅವನ ಹೆಂಡತಿಯನ್ನು ಮಕ್ಕಳನ್ನು ಮತ್ತು ಅವನಿಗಿದ್ದ ಸಾಮಾನುಗಳನ್ನೆಲ್ಲ ಮಾರಿ ಸಾಲ ತೀರಿಸ ಬೇಕೆಂದು ಯಜಮಾನನು ಕಟ್ಟಳೆ ಮಾಡಿದನು. ಅರಸನ ಕಟ್ಟಳೆಯನ್ನು ಕೇಳಿ ಸೇವಕನು ಅವನ ಪಾದದಲ್ಲಿ ಬಿದ್ದು; ಆಳಿ ದವರೇ ಸ್ವಲ್ಪ ನಿದಾನಿಸಿರಿ ನಾನು ನಿಮ್ಮ ಹಣವನ್ನೆಲ್ಲ ಸಲ್ಲಿಸು ತ್ತೇನೆ. ಎಂದು ಬಹಳವಾಗಿ ಬೇಡಿಕೊಂಡನು.

ಆಗ ಅರಸನಿಗೆ ಅವನ ಮೇಲೆ ದಯಹುಟ್ಟಿ ಅವನ ಸಾಲ
ವನ್ನು ಮನ್ನಿಸಿ ಅವನನ್ನು ಕಳುಹಿಸಿಬಿಟ್ಟನು ಆದರೆ ಆ ಮನು
ಷ್ಯನು ಹೊರಟು ಹೋಗುತ್ತಿರುವಾಗ ತನ್ನ ಜತೆ ಸೇವಕನೊ
ಬ್ಬನು ಎದುರಾಗಿ ಬಂದನು. ಈತನು ಮೊದಲನೇ ಸೇವಕನಿಗೆ
ನೂರು ಬೆಳ್ಳಿ ನಾಣ್ಯಗಳನ್ನು ಕೊಡಬೇಕಾಗಿತ್ತು. ಆದ್ದರಿಂದ
ಅವನ ಕುತ್ತಿಗೆಯನ್ನು ಹಿಡಿದು ಹಿಸುಕಿ ನೀನು ನನಗೆ ಕೊಡ
ಬೇಕಾದ ಹಣವನ್ನೆಲ್ಲ ಈಗ ಕೊಟ್ಟು ತೀರಬೇಕು ಎಂದನು.
ಆಗ ಅವನು ಮೊದಲನೇ ಸೇವಕನ ಕಾಲಿಗೆ ಬಿದ್ದು ಸ್ವಲ್ಪ
ತಾಳಿರಿ ನಾನು ನಿಮಗೆ ಎಲ್ಲವನ್ನು ಕೊಟ್ಟು ಸಾಲವನ್ನು ತೀರಿ
ಸುತ್ತೇನೆ ಎಂದನು. ಅದಕ್ಕೆ ಅವನು ಒಪ್ಪಿಕೊಳ್ಳದೆ ತನ್ನ ಸಾಲ
ವನ್ನು ತೀರಿಸುವವರೆಗೆ ಅವನನ್ನು ಸೆರೆಮನೆಯಲ್ಲಿ ಹಾಕುವ
ಹಾಗೆ ಮಾಡಿದನು. ಇದನ್ನು ಕಂಡ ಉಳಿದ ಸೇವಕರು ಇವನ
ಮೇಲೆ ಕನಿಕರಪಟ್ಟು ತಮ್ಮ ಯಜಮಾನನಿಗೆ ನಡೆದ ಎಲ್ಲ
ಸಂಗತಿಯನ್ನು ಬಂದು ತಿಳಿಸಿದರು, ಯಜಮಾನನು ಮೊದಲನೇ
ಸೇವಕನನ್ನು ಕರೆಯಿಸಿ, ಕೆಟ್ಟಸೇವಕನೇ, ನೀನು ನನ್ನನ್ನು
ಬೇಡಿಕೊಂಡ ನಿಮಿತ್ತ ನಾನು ನಿನ್ನ ಸಾಲವನ್ನೆಲ್ಲ ಮನ್ನಿಸಿದೆನು,
ನಾನು ನಿನಗೆ ದಯ ತೋರಿಸಿದಹಾಗೆ ನೀನು ಸಹ ನಿನ್ನ ಸಾಲ
ಗಾರನಮೇಲೆ ದಯವಾಗಿರಬೇಡವೋ ? ಎಂದು ಹೇಳಿದನು,

ಅರಸನು ತನ್ನ ಮೊದಲನೇ ಸೇವಕನ ಮೇಲೆ ಬಹಳ
ಕೋಪಗೊಂಡು ಅವನು ತನ್ನ ಸಾಲವನ್ನೆಲ್ಲ ತೀರಿಸುವ ತನಕ
ಅವನನ್ನು ಬಾಧೆ ಪಡಿಸಬೇಕೆಂದು ತನ್ನ ಸೇವಕರಿಗೆ ಕಟ್ಟಳೆ
ಮಾಡಿದನು.

ಹಾಗೆಯೇ ಪರಲೋಕದಲ್ಲಿರುವ ನಮ್ಮ ತಂದೆಯು ಸಹ, ನೀವು ನಿಮ್ಮ ಸಹೋದರರ ತಪ್ಪುಗಳನ್ನು ಕ್ಷಮಿಸದೆ ಹೋದರೆ ನಿಮಗೂ ಇದರಂತೆ ಮಾಡುವರೆಂದು ಜೇಸುನಾಥರು ಪಾಲಿಸಿದರು.

## ೪೦ ಒಳ್ಳೇ ಸಮಾರ್ಯಸ್ತನು

ಜೇಸುನಾಥರು ಸಿನಗೋಗಿನಲ್ಲಿ ಬೋಧಿಸುತ್ತಿರುವಾಗ, ಒಬ್ಬ ಯೌವನಸ್ತನು ಅವರನ್ನು ಶೋಧಿಸಬೇಕೆಂದು ಕೇಳಿದ್ದೇನಂದರೆ "ಗುರುವೇ ನಾನು ನಿತ್ಯ ಜೀವವನ್ನು ಪಡೆಯಲು ಏನು ಮಾಡಬೇಕು" ಎಂದನು.

ಅದಕ್ಕೆ ಕರ್ತರು; ವೇದ ಪುಸ್ತಕದಲ್ಲಿ ಏನೆಂದು ಬರೆದಿದೆ ಎಂದು ಕೇಳಿದರು.

ಆಗ ಆ ಯೌವನಸ್ತನು "ನಿನ್ನ ಕರ್ತರಾದ ಸರ್ವೇಶ್ವರನನ್ನು ನಿನ್ನ ಪೂರ್ಣ ಹೃದಯದೊಂದಿಗೂ, ಪೂರ್ಣ ಬುದ್ಧಿಯೊಂದಿಗೂ, ಪೂರ್ಣ ಬಲದೊಂದಿಗೂ ಸ್ನೇಹಿಸುವಿಯಾಗಲಿ ಮತ್ತು ನಿನ್ನ ಪರನನ್ನು ಸಹ ನಿನ್ನ ಹಾಗೆಯೇ ಸ್ನೇಹಿಸುವಿಯಾಗಲಿ ಎಂದು ಬರೆದಿದೆ ಎಂದು ಪ್ರತ್ಯುತ್ತರವನ್ನು ಕೊಟ್ಟನು.

ಆದಕ್ಕೆ ಜೇಸುನಾಥರು ಪ್ರತ್ಯುತ್ತರವಾಗಿ ನೀನು ಸರಿಯಾದದನ್ನೇ ಹೇಳಿದಿ. ನೀನು ಹೋಗಿ ಹಾಗೇ ಜೀವಿಸುವಿಯಾಗಲಿ" ಎಂದರು.

ಆದರೆ ಆ ಯೌವನಸ್ತನು "ನನ್ನ ಪರನು ಯಾರು? ಎಂದು ಕೇಳಲು ಜೇಸುನಾಥರು ಅವನಿಗೆ ಒಂದು ಸಾಮ್ಯವನ್ನು ಹೇಳಿದರು, ಯಾವದೆಂದರೆ "ಒಬ್ಬ ಮನುಷ್ಯನು ಜೆರೂಸಲೇಮಿನಿಂದ

ಜೆರಿಕೋ ಪಟ್ಟಣಕ್ಕೆ ಪ್ರಯಾಣವಾಗಿ ಹೋಗುತ್ತಿದ್ದನು. ಅವನು ದಾರಿಯಲ್ಲಿ ಕಳ್ಳರ ಕೈಗೆ ಸಿಕ್ಕನು. ಅವರು ಅವನ ಸ್ವತ್ತುಗಳನ್ನೆಲ್ಲವನ್ನು ಕಿತ್ತುಕೊಂಡು, ಅವನನ್ನು ಹೊಡೆದು, ಕೊನೆ ಪ್ರಾಣದಿಂದ ಬಿಟ್ಟು ಬಿಟ್ಟು ಹೋದರು. ಆ ಸಮಯದಲ್ಲಿ ದೈವಾಧೀನದಿಂದ ಒಬ್ಬ ಜೂದ ಗುರುವು ಪ್ರಯಾಣ ಮಾಡುತ್ತ ಆ ಮಾರ್ಗವಾಗಿಯೇ ಬಂದನು. ಆ ಮನುಷ್ಯನನ್ನು ನೋಡಿದರೂ ನಿಲ್ಲದೆ ನೋಡದಹಾಗೆ ಹೊರಟು ಹೋದನು.

ತರುವಾಯ ಒಬ್ಬ ಲೇವಿತನು ಅದೇ ಮಾರ್ಗದಲ್ಲಿ ಬಂದು ಆ ಮನುಷ್ಯನನ್ನು ನೋಡಿದಾಗ್ಯೂ ನಿಲ್ಲದೆ ಸುಮ್ಮನೇ ಹೋಗಿ ಬಿಟ್ಟನು. ಕಡೆಯಲ್ಲಿ ಒಬ್ಬ ಸಮಾರ್ಯಸ್ತನು ಆ ಮಾರ್ಗದಲ್ಲಿ ಪ್ರಯಾಣನಾಗಿ ಹೋಗುತ್ತಿದ್ದನು. ಅವನು ಘಾಯಪಟ್ಟು ಬಿದ್ದಿದ್ದ ಆ ಮನುಷ್ಯನನ್ನು ಕಂಡು ಮನಕರಗಿ, ಅವನ ಹತ್ತರ ಬಂದನು. ಅವನ ಘಾಯಗಳಿಗೆ ಎಣ್ಣೆಯನ್ನು ದ್ರಾಕ್ಷೆಯ ರಸವನ್ನು ಹೊಯ್ದು ಕಟ್ಟಿದನು. ತರುವಾಯ ಅವನನ್ನು ತನ್ನ ಮೃಗದಮೇಲೆ ಕೂಡ್ರಿಸಿಕೊಂಡು ಒಂದು ಛತ್ರಕ್ಕೆ ಕರಕೊಂಡು ಹೋಗಿಬಿಟ್ಟನು. ಮರುದಿವಸ ಆ ಸಮಾರ್ಯಸ್ತನು ತನ್ನ ಚೀಲದಿಂದ ಸ್ವಲ್ಪ ಹಣವನ್ನು ತೆಗೆದು ಛತ್ರದವನಿಗೆ ಕೊಟ್ಟು ಈ ಘಾಯಪಟ್ಟ ಮನುಷ್ಯನನ್ನು ಜಾಗ್ರತೆಯಾಗಿ ಪರಾಮರಿಸು; ನೀನು ಹೆಚ್ಚಾಗಿ ಏನಾದರು ಖರ್ಚುಮಾಡಿದರೆ, ನಾನು ತಿರುಗಿ ಬರುವಾಗ ನಿನಗೆ ತೀರಿಸುತ್ತೇನೆ ಎಂದನು.

ಜೇಸುನಾಥರು ಇದನ್ನು ಹೇಳಿ ಮುಗಿಸಿದಮೇಲೆ "ಕಳ್ಳರ ಕೈಗೆ ಸಿಕ್ಕಿಬಿದ್ದವನಿಗೆ ಈ ಮೂವರಲ್ಲಿ ಪರನು ಯಾರು? ಎಂದು ಕೇಳಲು, ಯೌವನಸ್ತನು ''ಅವನಿಗೆ ಪರಸ್ನೇಹ ತೋರಿಸಿದವನೇ

ಎಂದು ನುಡಿದನು. ಆಗ ಕರ್ತರು "ನೀನು ಹೇಳಿದ್ದು ಸರಿಯೇ. ನೀನು ಸಹ ಹೋಗಿ ಅವರಂತೆಯೇ ಮಾಡು ಎಂದರು.

ಈ ಪ್ರಕಾರವಾಗಿ ಜೇಸುನಾಥರು ಪ್ರತಿ ಒಬ್ಬರಿಗೆ ನೆರೆಯವನು ಅವಸರವಾಗಿರುತ್ತಾನೆ. ನಮ್ಮ ಕೈಯಿಂದಾದಷ್ಟು ಮಟ್ಟಿಗೆ ನಾವು ನೆರೆಯವರಿಗೆ ಸಹಾಯಮಾಡಬೇಕು. ನಾವು ಇತರರ ಕಷ್ಟದಲ್ಲಿ ಪಾಲ್ಗೊಳ್ಳದಿದ್ದರೆ ನಾವು ಜೇಸುನಾಥರ ಬೋಧನೆಯನ್ನು ಅನುಸರಿಸುವದಿಲ್ಲ.

## ೩೩ ದುಂದುಗಾರ ಮಗನನ್ನು ಕುರಿತು.

ಜೇಸುನಾಥರು ಬೋಧಿಸಿದ್ದೇನಂದರೆ, ಒಬ್ಬ ಪಾಪಾತ್ಮನು ಮನತಿರುಗಿದ್ದನ್ನು ಕಂಡು ದೇವರು ಬಹಳ ಸಂತೋಷಿಸುತ್ತಾರೆಂದು ಹೇಳಿದರು. ಇದನ್ನು ಕೇಳಿದ ಫರಿಜೇಯರು ಜೇಸುನಾಥರಮೇಲೆ ಗುಣಗುಟ್ಟುತ್ತಿದ್ದರು. ಮತ್ತು ಈ ಮನುಷ್ಯನು ಪಾಪಾತ್ಮರ ಸಂಗಡಲೂ, ಸುಂಕದವರ ಸಂಗಡಲೂ ಸೇರಿ ಊಟ ಮಾಡುತ್ತಾನೆನ್ನುತ್ತಿದ್ದರು.

ಆದ್ದರಿಂದ ಜೇಸುನಾಥರು ಈ ಸಾಮ್ಯವನ್ನು ಹೇಳಿದರು. ಏನಂದರೆ ಒಬ್ಬ ಮನುಷ್ಯನಿಗೆ ಇಬ್ಬರು ಕುಮಾರರಿದ್ದರು. ಕಿರಿಯವನು ತಂದೆಯನ್ನು ನೋಡಿ; ತಂದೆಯೇ ಆಸ್ತಿಯಲ್ಲಿ ನನಗೆ ಬರಬೇಕಾದ ಭಾಗವನ್ನು ಹಂಚಿಕೊಡಿರೆಂದು ಕೇಳಿ ಆತನನ್ನು ಪೀಡಿಸಿದನು. ಆಗ ಆತನ ತಂದೆಯು ತನ್ನ ಆಸ್ತಿಯನ್ನು ಹಂಚಿಕೊಟ್ಟನು.

ಚಿಕ್ಕವನು ತನ್ನ ಆಸ್ತಿಯನ್ನೆಲ್ಲ ತೆಗೆದುಕೊಂಡು ದೂರ ದೇಶಕ್ಕೆ ಹೋದನು. ಅಲ್ಲಿ ಎಲ್ಲವನ್ನು ದುಂದುತನದಲ್ಲಿ ಹಾಳು

ಮಾಡುತ್ತಾ ತನ್ನ ಆಸ್ತಿಯನ್ನೆಲ್ಲ ಕಳಕೊಂಡನು. ಕೆಲವು ದಿವಸಗಳೊಳಗಾಗಿ ಅವನ ಹತ್ತಿರ ಒಂದು ಪೈ ಸಹ ಉಳಿಯದೆ ಹೋಯಿತು. ಆ ಸಮಯದಲ್ಲಿಯೇ ಅವನಿದ್ದ ಸೀಮೆಯಲ್ಲಿ ಅಘೋರವಾದ ಕ್ಷಾಮವು ಬಂದದ್ದರಿಂದ ಅವನು ಮಹಾ ಕಠಿಣ ನಿರ್ಭಾಗ್ಯದಲ್ಲಿ ಬಿದ್ದನು. ಕಡೆಗೆ ಒಬ್ಬ ಮನುಷ್ಯನ ಬಳಿಯಲ್ಲಿ ಹಂದಿಗಳನ್ನು ಮೇಯಿಸುವ ಕೆಲಸವನ್ನು ಮಾಡಹತ್ತಿದನು. ಅವನಿಗೆ ಸರಿಯಾದ ಊಟ ಸಿಗುತ್ತಿದ್ದಿಲ್ಲ. ಆದ್ದಕಾರಣ ತನ್ನ ಹಸಿವೆ ತೀರುವವರೆಗೆ ಹಂದಿಗಳು ತಿನ್ನುವ ತೌಡನ್ನು ಸಹ ಅವನಿಗೆ ಯಾರೂ ಕೊಡುತ್ತಿದ್ದಿಲ್ಲ.

ಒಂದು ದಿನ ಅವನು ತನ್ನ ನಿರ್ಭಾಗ್ಯವಾದ ಜೀವನವನ್ನು ನೆನಸಿ ಅಂದದ್ದೇನಂದರೆ, "ಅಯ್ಯೋ ನನ್ನ ತಂದೆಯ ಮನೆಯಲ್ಲಿ ಎಷ್ಟೋ ಮಂದಿ ಸೇವಕರಿಗೆ ಹೊಟ್ಟೆತುಂಬ ಊಟ ಸಿಕ್ಕುತ್ತದೆ. ಆದರೆ ನಾನು ಇಲ್ಲಿ ಹಸಿವೆಯಿಂದ ಸಾಯುತ್ತೇನೆ. ಆದ್ದರಿಂದ ನಾನು ತಿರುಗಿ ನನ್ನ ತಂದೆಯ ಮನೆಗೆ ಹೋಗುವೆನು. ತಂದೆಯೇ ನಾನು ದೇವರಿಗೂ ನಿಮಗೂ ದ್ರೋಹವನ್ನು ಮಾಡಿದ್ದೇನೆ; ಇನ್ನು ಮೇಲೆ ನಾನು ನಿಮ್ಮ ಮಗನೆಂದು ಕರೆಯಲ್ಪಡಲು ಪಾತ್ರನಲ್ಲ ನಿಮ್ಮ ಸೇವಕರಲ್ಲಿ ಒಬ್ಬನಹಾಗೆ ನನ್ನನ್ನೂ ನಡಿಸಿದರೆ ಸಾಕೆಂದು ಹೇಳುವೆನೆಂ"ದು ದೃಢಪ್ರತಿಜ್ಞೆಯನ್ನು ಮಾಡಿ ಎದ್ದು ತನ್ನ ತಂದೆಯ ಬಳಿಗೆ ಹೋಗಲು ಹೊರಟನು.

ಅವನು ತನ್ನ ಮನೆಗೆ ದೂರದಲ್ಲಿ ಬರುತ್ತಿರುವಾಗಲೇ ಅವನ ತಂದೆಯು ತನ್ನ ಮಗನು ಬರುವದನ್ನು ಕಂಡು ಅವನು ತೊಟ್ಟಿದಂಥಾ ಹರಕು ಬಟ್ಟೆಗಳನ್ನು ನೋಡಿ ಬಹಳ ವ್ಯಸನಪಟ್ಟನು: ಮತ್ತು ಕಳಕೊಂಡಂಥಾ ಮಗನು ತಿರುಗಿ ಬಂದ

ನೆಂದು ಸಂತೋಷಾನಂದದಲ್ಲಿ ಮುಳುಗಿದನು. ಮತ್ತು ಅವನನ್ನು ಭೆಟ್ಟಿಯಾಗಲು ಓಡಿದನು. ಮಗನನ್ನು ಅಪ್ಪಿಕೊಂಡು ಮುದ್ದಿಟ್ಟನು. ಆಗ ಮಗನು ತಂದೆಯ ಪಾದದಲ್ಲಿ ಬಿದ್ದು "ತಂದೆಯೇ ನಾನು ನಿಮಗೂ ದೇವರಿಗೂ ವಿರೋಧವಾಗಿ ಪಾಪವನ್ನು ಕಟ್ಟಿಕೊಂಡಿರುವೆನು. ನಾನು ನಿಮ್ಮ ಮಗನೆಂದು ಕರೆಯಲ್ಪಡಲು ಪಾತ್ರನಲ್ಲ" ಎಂದನು.

ಆದರೆ ಆತನ ತಂದೆಯು ಸೇವಕರನ್ನು ಕರೆದು "ನೀವು ಲಗು ಹೋಗಿ ನನ್ನ ಮಗನಿಗೆ ಮಹಾ ಅಂದವಾದ ವಸ್ತ್ರಗಳನ್ನು ತಂದು ಉಡಿಸಿ, ಅವನ ಬೆರಳಿಗೆ ಉಂಗುರವನ್ನು ಕಾಲಿಗೆ ಪಾದರಕ್ಷೆಯನ್ನು ತೊಡಿಸಿರಿ; ಕೊಬ್ಬಿದ ಕರುವನ್ನು ಕೊಯ್ಯಿರಿ. ದೊಡ್ಡ ಔತನವನ್ನು ಮಾಡಿ ಸಂತೋಷಪಡೋಣ ಯಾಕಂದರೆ ಇಗೋ ಸತ್ತುಹೋಗಿದ್ದ ನನ್ನ ಮಗನು ತಿರುಗಿ ಬದುಕಿ ಬಂದನು. ಕಾಣದೆ ಹೋಗಿದ್ದವನು ಪುನಹ ದೊರಕಿದನು" ಎಂದು ಹೇಳಿ ಅಧಿಕ ಸಂತೋಷಪಟ್ಟು ದೊಡ್ಡ ಔತನವನ್ನು ಮಾಡಿದನು.

## ೭೨ ಕೆಟ್ಟ ಐಶ್ವರ್ಯವಂತನು ಲಾಜರನು

ಜೇಸುನಾಥರು ಒಂದು ದಿನ ವಚನಿಸಿದ್ದೇನಂದರೆ, ಈ ಲೋಕದ ಆಸ್ತಿ ಪಾಸ್ತಿಯನ್ನು ಹುಡುಕಿ ಅದರಿಂದ ಮಾತ್ರ ಸುಖ ಸಂತೋಷವನ್ನು ಹುಡುಕುವವರಿಗೆ ಮರುಲೋಕದಲ್ಲಿ ಮಹಾ ಕಠಿಣವಾದ ಶಿಕ್ಷೆಯು ದೊರಕುವದೆಂದು ಹೇಳುತ್ತ ಈ ಸಾಮ್ಯವನ್ನು ತಿಳಿಸಿದರು.

"ಡೈವಸನೆಂಬ ಒಬ್ಬ ಐಶ್ವರ್ಯವಂತನಿದ್ದನು. ಇವನು ಬಹಳ ಆಸ್ತಿವಂತನಾಗಿದ್ದನು. ಯಾವಾಗಲೂ ಉದ ಬಣ್ಣದ ಚಂದ

ವಾದ ಬಟ್ಟೆಗಳನ್ನು ಧರಿಸುತ್ತಿದ್ದನು. ಪ್ರತಿ ದಿವಸವೂ ದೊಡ್ಡ ಔತನ ಮಾಡುತ್ತಲೂ, ಚನ್ನಾಗಿ ಭುಜಿಸುತ್ತಲೂ ಇರುತ್ತಿದ್ದನು. ಆಗ ಅಲ್ಲಿಯೇ ಲಾಜರನೆಂಬ ಒಬ್ಬ ಬಡ ಭಿಕ್ಷಕನಿದ್ದನು. ಇವನು ಆ ಐಶ್ವರ್ಯವಂತನ ಬಾಗಿಲದ ಬಳಿಯಲ್ಲಿ ಬಿದ್ದುಕೊಂಡಿದ್ದು ಅವನ ಮೇಜಿನ ಮೇಲಿಂದ ಕೆಳಗೆ ಬೀಳುವಂಥಾ ಎಂಜಲದ ತುಕ್ಕಡಿಗಳನ್ನು ತಿನ್ನುವದಕ್ಕಾಗಿ ಆಶೆಯಿಂದ ಇದ್ದರೂ ಅವನ್ನು ಇವನಿಗೆ ಕೊಡುವವರು ಯಾರು ಇದ್ದಿಲ್ಲ. ನಾಯಿಗಳು ಮಾತ್ರ ಇವನ ಹುಣ್ಣುಗಳನ್ನು ನೆಕ್ಕುವದಕ್ಕಾಗಿ ಬರುತ್ತಿದ್ದವು.

ಒಂದು ದಿನ ಈ ಬಡ ಬಿಕ್ಷಕನಾದ ಲಾಜರನು ಸತ್ತು ಹೋದನು. ಆಗ ದೇವದೂತರು ಬಂದು ಇವನನ್ನು ಎತ್ತಿಕೊಂಡು ಹೋಗಿ ಅಬ್ರಹಾಮನ ಉಡಿಯಲ್ಲಿ ಮಲಗಿಸಿದರು. ಅದೇ ಸಮಯದಲ್ಲಿ ಈ ದ್ರವ್ಯ ಸಂಪನ್ನನು ಸಹ ಮರಣ ಹೊಂದಿ ನರಕದಲ್ಲಿ ಶಿಕ್ಷೆ ಹೊಂದಲು ಕಳುಹಿಸಲ್ಪಟ್ಟನು. ಆಗ ಈ ಧನವಂತನು ಅಲ್ಲಿಂದ ತನ್ನ ಕಣ್ಣುಗಳನ್ನು ಮೇಲಕ್ಕೆತ್ತಿ, ಬಹುದೂರದಲ್ಲಿ ಲಾಜರನು ಅಬ್ರಹಾಮನ ಉಡಿಯಲ್ಲಿ ವಿಶ್ರಮಿಸುವದನ್ನು ಕಂಡು; ತಂದೆಯಾದ ಅಬ್ರಹಾಮನೇ ನನ್ನ ಮೇಲೆ ದಯವಾಗಿದ್ದು ಲಾಜರನನ್ನು ಕಳುಹಿಸಿರಿ. ಅವನು ತನ್ನ ಬೆರಳನ್ನು ನೀರಿನಲ್ಲಿ ಅದ್ದಿ ನನ್ನ ನಾಲಿಗೆಯನ್ನು ತಣ್ಣಗೆ ಮಾಡಲಿ. ಯಾಕಂದರೆ ನಾನು ಈ ಅಗ್ನಿಯಲ್ಲಿ ನಿಷ್ಠೂರವಾಗಿ ಭಾದಿಸಲ್ಪಡುತ್ತೇನೆ ಎಂದು ದೊಡ್ಡ ಶಬ್ದವಾಗಿ ಕೂಗಿ ಹೇಳಿದನು.

ಅದಕ್ಕೆ ಅಬ್ರಹಾಮನು; ಮಗನೇ ನೀನು ಭೂಲೋಕದಲ್ಲಿರುವಾಗ ಸುಖ ಸಂಪತ್ತನ್ನು ಅನುಭವಿಸಿದೆಂದೂ, ಲಾಜರನು ಕಷ್ಟ ತಾಪತ್ರಯಗಳನ್ನು ಪಟ್ಟನೆಂದೂ ನೆನಸಿಕೋ, ಈಗ

ಇವನು ಉಪಶಮನ ಹೊಂದುತ್ತಾನೆ. ನೀನು ಕಷ್ಟವನ್ನು ಅನು ಭವಿಸುತ್ತೀ. ಇದಲ್ಲದೆ ನಿನಗೂ ನಮಗೂ ಬ್ರಹ್ಮಾಂಡವಾದ ಪಾತಾಳವಿದೆ. ಆದ್ದರಿಂದ ಇಲ್ಲಿರುವವರು ನೀನಿರುವ ಸ್ಥಳಕ್ಕೆ ಹೋಗಲೂ, ಅಲ್ಲಿ ಇರುವವರು ಇಲ್ಲಿಗೆ ಬರಲೂ ಕೂಡದು, ಅಂದನು.

ಅದಕ್ಕೆ ಆ ಸಾಹುಕಾರನು "ಹಾಗಾದರೆ ಲಾಜರನನ್ನು ನನ್ನ ತಂದೆಯ ಮನೆಗೆ ಆದರೂ ಕಳುಹಿಸಿರಿ. ಯಾಕಂದರೆ ನನ್ನ ಐದು ಮಂದಿ ಸಹೋದರರು ನನ್ನ ಹಾಗೆ ನಡೆದು ಈ ನರ ಕಾಗ್ನಿಯಲ್ಲಿ ಬೀಳುವಹಾಗೆ ಇದ್ದಾರೆ. ಅವರು ಸಹ ಇಲ್ಲಿಗೆ ಬಾರದ ಹಾಗೆ ಅವರನ್ನು ಎಚ್ಚರಿಸುವದಕ್ಕಾಗಿ ಕಳಿಸಿರಿ" ಎಂ ದನು.

ಆಗ ಅಬ್ರಹಾಮನು ಪ್ರತ್ಯುತ್ತರವಾಗಿ ಅವರಿಗೆ ಮೋ ಯಿಸನು ದೀರ್ಘ ದರ್ಶಿಗಳೂ ಇದ್ದಾರೆ. ಅವರ ಮಾತನ್ನು ಕೇಳಿ ಅವರು ಒಳ್ಳೇ ಮಾರ್ಗದಲ್ಲಿ ನಡೆಯಬಹುದೆಂದನು. ಅದ ನ್ನು ಕೇಳಿ ಐಶ್ವರ್ಯವಂತನು ದೀರ್ಘದರ್ಶಿಗಳ ಮಾತಿಗೆ ಅವ ರು ಕಿವಿಕೊಡರು. ಸತ್ತವನೊಬ್ಬನು ಎದ್ದು ಹೋಗಿ ಹೇಳಿದರೆ ಇಂಥವನ ಮಾತನ್ನು ನಂಬಿ ತಪಸ್ಸು ಮಾಡುವರೆಂಧೇಳಿದನು.

ಆಗ ಅಬ್ರಹಾಮನು; ಮೋಯಿಸನು ದೀರ್ಘದರ್ಶಿಗಳೂ ಹೇಳಿದ ಬುದ್ಧಿ ಮತಿಗಳನ್ನು ಅವರು ಕೇಳದಿದ್ದರೆ ಸತ್ತುಹೋದ ವರು ಅವರ ಬಳಿಗೆ ಹೋಗಿ ಹೇಳಿದರೂ ನಂಬರೆಂಬದಾಗಿ ಹೇಳಿ ದನು.

ಅದೇ ರೀತಿಯಲ್ಲಿ ಅನೇಕರು ಸತ್ಯ ವೇದವನ್ನು ಸ್ವೀಕರಿಸ ಲು ತಿರಸ್ಕರಿಸುತ್ತಾರೆ. ನಿಜವಾದ ದೇವರನ್ನು ಕುರಿತು ಬೋಧಿ

ಸುವ ಒಂದೇ ಕತೋಲಿಕ್ ವೇದವೆಂದು ಅವರಿಗೆ ಗೊತ್ತಿದ್ದರು ಸ್ವಂತ ಮನಸ್ಸಿನಿಂದ ಪಾಪವನ್ನು ಕಟ್ಟಿಕೊಳ್ಳುತ್ತಾರೆ.

## ೩೬ ಫರಿಜೇಯನು ಸುಂಕದವನು ಜಪಮಾಡಿದನ್ನು ಕುರಿತು.

ಜೇಸುನಾಥರು ವಚನಿಸಿದ್ದೇನಂದರೆ ಸರ್ವೇಶ್ವರನು ದೀನತೆಯುಳ್ಳವರನ್ನು ಹೆಚ್ಚಾಗಿ ಪ್ರೀತಿಸುತ್ತಾರೆಂದು ತಿಳಿಸಿದರು. ಅದಕ್ಕಾಗಿ ಈ ಕೆಳಗಿನ ಸಾಮ್ಯವನ್ನು ಹೇಳಿದರು. " ಇಬ್ಬರು ಮನುಷ್ಯರು ಜಪಮಾಡುವದಕ್ಕಾಗಿ ದೇವಾಲಯಕ್ಕೆ ಹೋದರು. ಅವರಲ್ಲಿ ಒಬ್ಬನು ಫರಿಜೇಯನು; ಮತ್ತೊಬ್ಬನು ಸುಂಕದವನು. ಫರಿಜೇಯನು ಪೀಠದ ಮುಂದೆ ಹೋಗಿ ನಿಂತು ಬೇಡಿಕೊಂಡದ್ದೇನಂದರೆ, " ಆಳಿದವರೇ ಅನ್ಯಾಯಸ್ಥರ ಹಾಗೂ ಈ ಸುಂಕದವನ ಹಾಗೂ ನಾನಲ್ಲದ ಕಾರಣ ನಿಮಗೆ ಮೇಲರಿತ ಸ್ತೋತ್ರವನ್ನು ಮಾಡುತ್ತೇನೆ. ನಾನು ವಾರದಲ್ಲಿ ಎರಡು ದಿವಸ ಒಂಥೊತ್ತಾಗಿರುತ್ತೇನೆ. ನನ್ನ ಸಂಪಾದನೆಯಿಂದ ದೇವಾಲಯಕ್ಕೆ ಸಹಾಯಮಾಡುತ್ತೇನೆ, ಅಂದರು. ಆದರೆ ಸುಂಕದವನು ಬಹುದೂರದಲ್ಲಿ ನಿಂತು ಆಕಾಶವನ್ನು ಸಹ ತಲೆಯೆತ್ತಿ ನೋಡಲಾರದೆ ತನ್ನ ಎದೆಯನ್ನು ಬಡಕೊಂಡು; ಸ್ವಾಮಿ ಪಾಪಿಯಾಗಿರುವ ನನ್ನ ಮೇಲೆ ದಯವಾಗಿರ್ರಿ ಎಂದು ಬೇಡಿಕೊಂಡನು

ಜೇಸುನಾಥರು ಹೇಳಿದ್ದೇನಂದರೆ, ನಾವು ನಿಮಗೆ ಹೇಳುತ್ತೇವೆ; ಫರಿಜೇಯನಿಗಿಂತಲೂ ಸುಂಕದವನೇ ನೀತಿವಂತನಾಗಿ ತನ್ನ ಮನೆಗೆ ತಿರುಗಿ ಹೋದನು. ಯಾಕಂದರೆ ತನ್ನನ್ನು ತಗ್ಗಿಸಿಕೊಳ್ಳುವವನು ಹೆಚ್ಚಿಸಲ್ಪಡುವನು. ತನ್ನನ್ನು ಹೆಚ್ಚಿಸಿಕೊಳ್ಳುವವನು ತಗ್ಗಿಸಲ್ಪಡುವನು ಅಂದರು.

ಈ ಪ್ರಕಾರವಾಗಿ ಜೇಸುನಾಥರು ನಾವು ಜಪಮಾಡು ವಾಗ ದೀನತೆಯಿಂದ ಬೇಡಿಕೊಳ್ಳಬೇಕೆಂದು ಕಲಿಸಿದರು. ಮತ್ತು ಸರ್ವೇಶ್ವರನು ಯಾರೆಂದೂ ನಾವು ಯಾರೆಂಬದನ್ನೂ ನೆನಪಿ ನಲ್ಲಿಟ್ಟುಕೊಳ್ಳಬೇಕು

ಶಿಷ್ಯರು ಒಂದು ದಿವಸ ಜೇಸುನಾಥರನ್ನು ನೋಡಿ; ಆಳಿದವರೇ ನಮಗೆ ಜಪಮಾಡಲು ಕಲಿಸಿರಿ. ಎಂದು ಕೇಳಲು ಜೇಸುನಾಥರು ಪ್ರತ್ಯುತ್ತರವಾಗಿ ಅವರಿಗೆ ಕಲಿಸಿದ್ದೇನಂದರೆ, ‘‘ಪರಲೋಕದಲ್ಲಿರುವ ನಮ್ಮ ತಂದೆಯೆ, ನಿಮ್ಮ ಹೆಸರಿಗೆ ಪೂಜೆ ಯಾಗಲಿ; ನಿಮ್ಮ ರಾಜ್ಯವು ಬರಲಿ, ನಿಮ್ಮ ಚಿತ್ತವು ಪರಲೋಕ ದಲ್ಲಿ ಆಗುವ ಹಾಗೆ ಭೂಲೋಕದಲ್ಲಿಯೂ ಆಗಲಿ; ದಿನಂಪ್ರತಿ ಯಾದ ನಮ್ಮ ಅನ್ನವನ್ನು ನಮಗೆ ಇಂದು ಕೊಡಿ; ನಮಗೆ ತಪ್ಪು ಮಾಡಿದವರಿಗೆ ನಾವು ತಾಳುವ ಹಾಗೆ ನಮ್ಮ ಪಾಪಗಳ ನಮಗೆ ತಾಳಿಕೊಳ್ಳಿ; ನಮ್ಮನ್ನು ಶೋಧನೆಯಲ್ಲಿ ಬೀಳಲಿಸದೆ, ಕೇಡಿನೊಳಗಿಂದ ನಮ್ಮನ್ನು ರಕ್ಷಿಸಿಕೊಳ್ಳಿ ಆಮೆನ್.

ಇನ್ನು ಜೇಸುನಾಥರು ಹೇಳಿದ್ದೇನಂದರೆ, ಕೇಳಿರಿ ನಿಮಗೆ ಕೊಡಲ್ಪಡುವದು. ಹುಡುಕಿರಿ ನಿಮಗೆ ದೊರಕುವದು, ತಟ್ಟಿರಿ ನಿಮಗೆ ತೆರೆಯಲ್ಪಡುವದು. ನಿಮ್ಮಲ್ಲಿ ಯಾರಾದರೂ ನಿಮ್ಮ ತಂದೆಯನ್ನು ನೋಡಿ ರೊಟ್ಟಿಯನ್ನು ಕೇಳಿದರೆ ನಿಮಗೆ ಕಲ್ಲನ್ನು ಕೊಡುವನೋ ? ಹಾಗಾದರೆ ನಿಮ್ಮ ಮಕ್ಕಳಿಗೆ ಒಳ್ಳೇಯದ ನ್ನೇ ಕೊಡಲು ನಿಮಗೆ ಗೊತ್ತಿರಲು ನಿಮ್ಮ ಪರಲೋಕ ಪಿತನ ನ್ನು ಕೇಳಿದರೆ ಅವರು ಎಷ್ಟೋ ಮೇಲಾದ ವರಪ್ರಸಾದಗಳ ನ್ನು ಕೊಡುವರಲ್ಲವೋ ! ಎಂದು ವಚನಿಸಿದರು.

ಇನ್ನೊಂದು ಸಾರೆ ಜೇಸುನಾಥರು ನುಡಿದಷ್ಟೇನಂದರೆ, ನೀವು ಎಲ್ಲರೂ ಕೂಡಿ ಪ್ರಾರ್ಥನೆಯನ್ನು ಮಾಡಿದರೆ ನನ್ನ ತಂದೆಯು ನೀವು ಹೇಳಿದ ಜಪವನ್ನು ತಪ್ಪದೆ ಕೇಳುವರು. ನೀವು ಇಬ್ಬರು ಮೂವರು ಕೂಡಿ ನನ್ನ ಹೆಸರಿನಲ್ಲಿ ಜಪಮಾಡಿದರೆ ನಾನು ನಿಮ್ಮ ಮಧ್ಯದಲ್ಲಿರುತ್ತೇನೆ. ನೀವು ನನ್ನ ಹೆಸರಿನಲ್ಲಿ ನನ್ನ ತಂದೆಯನ್ನು ಏನಾದರೂ ಕೇಳಿದರೆ ಅದು ತಪ್ಪದೇ ನಿಮಗೆ ಕೊಡಲ್ಪಡುವದು.

ಈ ಪ್ರಕಾರವಾಗಿ ನಾವು ಜಪದ ಬೆಲೆಯನ್ನು ಕಂಡುಕೊಳ್ಳಬೇಕು. ನಾವು ನಮ್ಮ ಜಪಗಳನ್ನು ಯಾವಾಗಲೂ ಬಿಟ್ಟು ಬಿಡಬಾರದು. ಮುಖ್ಯವಾಗಿ ಪ್ರಾತಃಕಾಲ ಮತ್ತು ಸಾಯಂಕಾಲದ ಜಪಗಳನ್ನು ಹೇಳಬೇಕು.

## 84 ಜೇಸುನಾಥರು ಜೆರೂಸಲೇಮ್ ನಗರದಲ್ಲಿ ಪ್ರವೇಶಿಸಿದನ್ನು ಕುರಿತು.

ಜೇಸುನಾಥರು ಜೆರೂಸಲೇಮ್ ಪಟ್ಟಣಕ್ಕೆ ಹೋಗುವದಕ್ಕಾಗಿ ತಯಾರು ಮಾಡುತ್ತಿದ್ದರು. ತಮ್ಮ ಶಿಷ್ಯರಲ್ಲಿ ಇಬ್ಬರನ್ನು ನೋಡಿ ನಿಮಗೆ ಎದುರಾಗಿರುವ ಗ್ರಾಮಕ್ಕೆ ಹೋಗಿರಿ. ಅಲ್ಲಿ ಒಂದು ಹೆಣ್ಣು ಕತ್ತೆಯನ್ನು ಅದರ ಮರಿಯನ್ನು ಕಾಣುವಿರಿ. ಅವುಗಳನ್ನು ನಿಮ್ಮಲ್ಲಿಗೆ ತೆಗೆದುಕೊಂಡು ಬರ್ರಿ. ಯಾರಾದರೂ ನಿಮ್ಮನ್ನು ನೋಡಿ "ಯಾತಕ್ಕೆ ಅವುಗಳನ್ನು ಒಯ್ಯುತ್ತೀರೆಂದು ಕೇಳಿದರೆ. ಇದು ನಮ್ಮ ಕರ್ತರಿಗೆ ಅವಸರವಾಗಿದೆ ಎಂದು ಹೇಳಿರಿ.

ಶಿಷ್ಯರು ಹಾಗೆಯೇ ಕತ್ತೆಯನ್ನು ಮರಿಯನ್ನು ಹಿಡಿದು ತಂದರು. ಅವುಗಳಮೇಲೆ ತಮ್ಮ ವಸ್ತ್ರಗಳನ್ನು ಬಿಚ್ಚಿಹಾಕಲಾಗಿ

ಜೇಸುನಾಥರು ಅವುಗಳಮೇಲೆ ಕೂದ್ರಲು ಹೇಳಿದರು. ಜೇಸು ನಾಥರು ಮರಿಯಮೇಲೆ ಕೂತು ಹೋಗುತ್ತಿರಲು, ಜನರು ನೆಲದಮೇಲೆ ವಸ್ತ್ರಗಳನ್ನು ಹಾಸುತ್ತಿದ್ದರು. ಯಾಕಂದರೆ ಜೇಸುನಾಥರು ಅವುಗಳಮೇಲೆ ದಾಟಿ ಹೋಗುವದಕ್ಕಾಗಿ ಹಾಸುತ್ತಿದ್ದರು. ಕೆಲವರು ಕೈಯಲ್ಲಿ ಗರಿಗಳನ್ನು ಮರದ ಕೊಂಬೆ ಯನ್ನು ಹಿಡಿದುಕೊಂಡು ಜೇಸುನಾಥರ ಹಿಂದೆಯೂ ಮುಂದೆ ಯೂ ಬಂದು, "ಅತಿ ಉನ್ನತವಾದವುಗಳಲ್ಲಿ ದಾವೀದರಾಯನ ಪುತ್ರನಿಗೆ ಶುಭವಾಗಲಿ, ಕರ್ತರ ನಾಮದಿಂದ ಬರುವ ಇಸ್ರಾ ಯೇಲರ ಅರಸನಿಗೆ ಸ್ತೋತ್ರವಾಗಲಿ ಎಂದು ಹೇಳುತ್ತಾ ಹೋ ದರು. ಅವರಲ್ಲಿ ಕೆಲವು ಮಂದಿ ಫರಿಜೇಯರು ಅದನ್ನು ಕಂಡು ಹೊಟ್ಟೆಕಿಚ್ಚುಪಟ್ಟು ಜೇಸುನಾಥರನ್ನು ನೋಡಿ "ಗುರುವೇ ನಿಮ್ಮ ಶಿಷ್ಯರನ್ನು ಸುಮ್ಮನಿರಹೇಳಿರಿ" ಎಂದರು. ಅದಕ್ಕವರು ಪ್ರತ್ಯುತ್ತರವಾಗಿ "ಇವರು ಸುಮ್ಮನಿದ್ದರೆ ಇವರ ಬದಲಾಗಿ ಕಲ್ಲುಗಳು ಕೂಗುವವು ಎಂದರು.

ಜೇಸುನಾಥರು ಜೆರೂಸಲೇಮ್ ಪಟ್ಟಣದ ಬಳಿಗೆ ಬಂದ ಕೂಡಲೇ ಅದನ್ನು ಕಂಡು, ಕಣ್ಣೀರು ಸುರಿಸಿ, ಅತ್ತು ಹೇಳಿದ್ದೇ ನಂದರೆ! ಅಯ್ಯೋ! ಓ! ಜೆರೂಸಲೇಮ್ ನೀನು ಈ ದಿನದ ಲ್ಲಾದರೂ ನಿನ್ನ ಸಮಾಧಾನಕ್ಕೆ ಬೇಕಾದವುಗಳನ್ನು ತಿಳಕೊಂ ಡರೆ ಒಳ್ಳೇದಾಗಿತ್ತು. ಆದರೆ ಈಗ ಅವು ನಿನ್ನ ಕಣ್ಣುಗಳಿಗೆ ಮರೆ ಯಾಗಿವೆ. ಒಂದು ದಿವಸ ಬರುವದು. ಆಗ ಶತ್ರುಗಳು ನಿನ್ನನ್ನು ಮುತ್ತಿಗೆಹಾಗಿ ನಿನ್ನಲ್ಲಿ ಕಲ್ಲಿನಮೇಲೆ ಕಲ್ಲಿರಬಿಡರು. ಯಾಕಂ ದರೆ ಕರ್ತರು ನಿನ್ನನ್ನು ಸಂಧಿಸಿದ ಕಾಲವನ್ನು ನೀನು ಅರಿತು ಕೊಳ್ಳದ್ದರಿಂದ ಹೀಗೆ ಸಂಭವಿಸುವದು ಎಂದರು.

ಜೇಸುನಾಥರ ಪ್ರವೇಶವನ್ನು ಜೆರೂಸಲೇಮ್ ನಗರದವರೆಲ್ಲರು ಕಳವಳಗೊಂಡು ಇವರು ಯಾರು ಎಂಬುದಾಗಿ ಒಬ್ಬರನ್ನೊಬ್ಬರು ವಿಚಾರಿಸಲು ಗಲೀಲೆಯಾ ದೇಶದ ಜೇಸುವೆಂಬ ದೀರ್ಘದರ್ಶಿಯೆಂದು ಹೇಳಿಕೊಂಡರು.

ಇದಲ್ಲದೆ ಜೇಸುನಾಥರು ದೇವಾಲಯದೊಳಗೆ ಹೋದಾಗ ಕುರುಡರನ್ನು ಕುಂಟರನ್ನು ಅವರಬಳಿಗೆ ಕರತಂದರು. ಇವರೆಲ್ಲರನ್ನು ಅವರು ಸ್ವಸ್ಥಪಡಿಸಿದರು. ಜೇಸುನಾಥರು ಮಾಡಿದ ಅದ್ಭುತಗಳನ್ನು ನೋಡಿ, ಫರಿಜೇಯರು ಇನ್ನು ಹೊಟ್ಟೆಕಿಚ್ಚುಪಡಲಾರಂಭಿಸಿದರು. ಮುಖ್ಯ ಆಚಾರಿಗಳು ವೇದಶಾಸ್ತ್ರರು ಮತ್ತು ಹಿರಿಯರು ಎಲ್ಲರೂ ಕೂಡಿ, ಕೈಪಾಸನ ರಾಜ್ಯ ಸಭೆಯಲ್ಲಿ ಒಂದು ಸಭೆಯನ್ನು ಕೂಡಿಸಿ ಹ್ಯಾಗಾದರೂ ಮಾಡಿ, ಜೇಸುನಾಥರನ್ನು ತಪ್ಪಿನಲ್ಲಿ ಸಿಕ್ಕಿಸಿ ಅವರನ್ನು ಕೊಲ್ಲುವ ಯೋಚನೆ ಮಾಡಿದರು. ಮತ್ತು ಅಪೋಸ್ತಲರಲ್ಲಿ ಒಬ್ಬನಾದ ಜೂದಾಸ್ ಇಸ್ಕಾರಿಯೋತ್ ಎಂಬವನಿಗೆ, ಜೇಸುನಾಥರನ್ನು ಹಿಡಿದುಕೊಟ್ಟರೆ ೩೦ ಬೆಳ್ಳಿ ಕಾಸುಗಳನ್ನು ಕೊಡುತ್ತೇವೆಂದು ಗೊತ್ತು ಮಾಡಿದರು.

ಆಗ ಜೇಸುನಾಥರು ತಮ್ಮ ಶಿಷ್ಯರಿಗೆ ತಾವು ಪಾಡುಪಡಬೇಕಾದ ಕಾಲವು ಸಮೀಪಿಸಿರುವದೆಂದು, ಮನುಷ್ಯಕುಮಾರನು ಮಹಿಮೆಹೊಂದುವ ಸಮಯವು ಸಮೀಪಿಸಿರುವದೆಂದು ಹೇಳುವಲ್ಲಿ ಒಂದು ಶಬ್ದವು ಮೋಕ್ಷದಿಂದ ಕೇಳಲ್ಪಟ್ಟದ್ದೇನಂದರೆ, ನಾನು ಮಹಿಮೆ ಹೊಂದಿದೆನು. ಇನ್ನು ಹೊಂದುವೆನು ಎಂದಿತು.

## ೮೫ ಜೇಸುನಾಥರು ಅಪೋಸ್ತಲರ ಪಾದಗಳನ್ನು ತೊಳೆದದ್ದು.

ಆ ಕಾಲದಲ್ಲಿ ಪಾಸ್ಕದ ಹಬ್ಬವು ಸಮೀಪಿಸಿತ್ತು. ಅಂದು ಬೃಹಸ್ಪತಿವಾರವಾಗಿತ್ತು. ಆ ದಿವಸ ಜೇಸುನಾಥರೂ ಅವರ ಶಿಷ್ಯರೂ ಔತಣ ಮಾಡುವದಕ್ಕಾಗಿ ಅವರ ಸ್ನೇಹಿತನೊಬ್ಬನು ಊಟವನ್ನು ಸಿದ್ಧಮಾಡಿದ್ದನು. ಅಲ್ಲಿ ಅವರು ವೇದ ನೇಮದ ಪ್ರಕಾರ ಪಾಸ್ಕದ ಭೋಜನವನ್ನು ಊಟ ಮಾಡಲು ಹೋಗಿದ್ದರು. ಜೇಸುನಾಥರು ಸಿಮೋನನನ್ನು ಜ್ವಾನ್ನೇಸನನ್ನು ಕಳುಹಿಸಿ ರಾತ್ರಿ ಭೋಜನವನ್ನು ತಯಾರು ಮಾಡಲು ಹೇಳಿದರು. ಅವರು ದ್ರಾಕ್ಷೆ ರಸವನ್ನು ಮತ್ತು ರೊಟ್ಟಿಯನ್ನು ಕೊಂಡುಕೊಂಡು ಪಾಸ್ಕದ ಕುರಿಯನ್ನು ತಯಾರು ಮಾಡಿ ಇವುಗಳನ್ನು ರಾತ್ರಿಯಲ್ಲಿ ಭುಜಿಸುವದಕ್ಕಾಗಿ ಆ ದೊಡ್ಡ ಕೋಣೆಗೆ ಒಯ್ದರು.

ಆ ರಾತ್ರಿ ಜೇಸುನಾಥರು ತಮ್ಮ ಅಪೋಸ್ತಲರ ಸಂಗಡ ಭುಜಿಸುವದಕ್ಕಾಗಿ ಕುಳಿತರು. ಅವರು ಆ ರಾತ್ರಿಯ ಸಲುವಾಗಿ ಬಹಳ ಕಾಯುತ್ತಿದ್ದರು. ಆಗ ಆ ರಾತ್ರಿ ಸಮೀಪಿಸಿದ್ದರಿಂದ ಬಹಳ ಸಂತೋಷ ಪಟ್ಟರು. ಯಾಕಂದರೆ ಅವರು ಮಾಡಬೇಕಾದ ಎಲ್ಲ ಕೆಲಸವು ಈ ಲೋಕದಲ್ಲಿ ನೆರವೇರಿದ್ದರಿಂದ ಬಹಳ ಸಂತೋಷಿಸಿದರು.

ಜೇಸುನಾಥರು ಅಪೋಸ್ತಲರನ್ನು ನೋಡಿ ಹೇಳಿದ್ದೇನಂದರೆ, ನಾವು ಪಾಡು ಪಡುವದಕ್ಕಿಂತ ಮುಂಚೆ ನಿಮ್ಮೊಂದಿಗೆ ಈ ಪಾಸ್ಕದ ಭೋಜನವನ್ನು ಭುಜಿಸಲು ಬಹಳ ಆಶೆಯಾಗಿದ್ದೇವೆ. ಎಂದು ಎಲ್ಲರೂ ಕೂಡಿ ರಾಭೋಜನವನ್ನು ಮಾಡಿದರು.

ರಾ ಭೋಜನವಾದ ಮೇಲೆ ಜೇಸುನಾಥರು ಒಂದು ಬಟ್ಟೆಯನ್ನು ನಡುವಿಗೆ ಕಟ್ಟಿಕೊಂಡು ಒಂದು ಪಾತ್ರೆಯಲ್ಲಿ ನೀರನ್ನು ತೆಗೆದುಕೊಂಡು, ಅಪೋಸ್ತಲರ ಪಾದಗಳನ್ನು ತೊಳೆಯಲು ಸಿದ್ಧರಾದರು ಅವರು ರಾಯಪ್ಪರ ಬಳಿಗೆ ಬಂದಾಗ, ರಾಯಪ್ಪರು ರಕ್ಷಕರನ್ನು ನೋಡಿ; ಸ್ವಾಮಿ ! ಇದೇನು ! ನೀವು ನನ್ನ ಪಾದಗಳನ್ನು ತೊಳೆಯುತ್ತೀರೋ ? ಎಂದು ಕೇಳಿದಲ್ಲಿ;

ಜೇಸುನಾಥರು; ನಾವು ಮಾಡುವದನ್ನು ಈಗ ನೀನು ಗ್ರಹಿಸಲಾರಿ. ತರುವಾಯ ನಿನಗೆ ತಿಳಿಯುವದು. ಅಂದರು.

ಅದಕ್ಕೆ ಸಿಮೋನ್ ಎಂಬವರು ಎಂದಿಗೂ ನನ್ನ ಪಾದಗಳನ್ನು ತೊಳೆಯಬಾರದೆಂದು ಹೇಳಿದರು. ಆಗ ಜೇಸುನಾಥರು "ನಾನು ನಿನ್ನನ್ನು ತೊಳೆಯುತಿದ್ದರೆ ನಮ್ಮ ಸಂಗಡ ನಿನಗೆ ಪಾಲು ದೊರೆಯದೆಂದು ಜೇಸುನಾಥರು ಪಾಲಿಸಿದರು. ಆಗ ಸಿಮೋನೆಂಬವರು "ಹಾಗಾದರೆ ನನ್ನ ಕಾಲುಗಳನ್ನು ಮಾತ್ರವಲ್ಲ. ನನ್ನ ಕೈಗಳನ್ನು ತಲೆಯನ್ನು ಸಹ ತೊಳೆಯಿರಿ ಎಂದರು.

ಹೀಗೆ ಜೇಸುನಾಥರು ತಮ್ಮ ಅಪೋಸ್ತಲರ ಕಾಲುಗಳನ್ನು ತೊಳೆದ ಬಳಿಕ ಅವರನ್ನು ನೋಡಿ, "ನಾವು ಈಗ ಮಾಡಿದುದನ್ನು ನೀವು ಕಂಡು ಹಿಡಿಯುತ್ತೀರೋ ? ನೀವು ನಮ್ಮನ್ನು ಗುರುವೆಂದು, ಕರ್ತರೆಂದೂ ಕರೆಯುತ್ತೀರಿ. ನಿಮ್ಮಗುರು ಕರ್ತರು ಆಗಿರುವ ನಾವು ನಿಮ್ಮ ಕಾಲುಗಳನ್ನು ತೊಳೆದರೆ ನೀವು ಸಹ ಒಬ್ಬೊಬ್ಬರು ಮತ್ತೊಬ್ಬರ ಕಾಲುಗಳನ್ನು ತೊಳೆಯ ಬೇಕಾಗಿದೆ. ಯಾಕಂದರೆ ನಾವು ನಿಮಗೆ ಮಾಡಿದ ಪ್ರಕಾರ ನೀವು ಸಹ ನಿಮ್ಮ ಪರರಿಗೆ ಮಾಡುವ ಹಾಗೆ ನಿಮಗೆ ಮಾತೃಕೆಯನ್ನು ತೋರಿಸಿದ್ದೇವೆ" ಅಂದರು.

ಜೇಸುನಾಥರು ತಮ್ಮ ಜೀವಿತ ಕಾಲದಲ್ಲೆಲ್ಲಾ ಬಿಟ್ಟು ಬಿಡದೆ ಸದಾ ನಮಗೆ ಮಾತೃಕೆಯನ್ನು ತೋರಿಸುತ್ತಿದ್ದರು. ನಾವು ಅವುಗಳನ್ನು ಹಿಂಬಾಲಿಸಬೇಕು. ಅವರು ಬರೇ ಮಾತಿನಿಂದಲ್ಲದೆ ಕ್ರಿಯೆಗಳಿಂದ ಸಹ ಮಾತೃಕೆಯನ್ನು ತೋರಿಸಿದ್ದಾರೆ. ಅವರು ತೋರಿಸಿದ ಪುಣ್ಯಗಳಲ್ಲಿ ಶ್ರೇಷ್ಟವಾದದ್ದು ದೀನತ್ವವು. ಅವರು ಅಪೋಸ್ತಲರ ಪಾದಗಳನ್ನು ತೊಳೆದದ್ದು ಇದೊಂದು ಮಾತೃಕೆಯಾಗಿದೆ. ಯಾಕಂದರೆ ಕರ್ತರಾದವರು ತಾವೇ ಹೀನವಾದ ಮನುಷ್ಯರ ಕಾಲುಗಳನ್ನು ತೊಳೆದರು

## ೩೯ ಜೇಸುನಾಥರು ದಿವ್ಯಸತ್ಪ್ರಸಾದವನ್ನು ಸ್ಥಾಪಿಸಿದ್ದು.

ಜೇಸುನಾಥರು ಸಾಯುತ್ತಿದ್ದ ಸಮಯವು ಬಂದಿತು. ಆಗ ಅವರು ಅಪ್ಪವನ್ನು ಕೈಯಲ್ಲಿ ತೆಗೆದುಕೊಂಡು ಅದನ್ನು ಆಶೀರ್ವದಿಸಿ ತಮ್ಮ ಅಪೋಸ್ತಲರಿಗೆ ಕೊಟ್ಟು, ಇದನ್ನು ತೆಗೆದು ಭುಜಿಸಿರಿ 'ಇದು ನಮ್ಮ ಶರೀರವು ಎಂದು ವಚನಿಸಿದರು. ತರುವಾಯ ದ್ರಾಕ್ಷೆ ರಸವುಳ್ಳ ಪಾತ್ರೆಯನ್ನು ಕೈಯಲ್ಲಿ ತೆಗೆದುಕೊಂಡು, ಅದನ್ನು ಆಶೀರ್ವದಿಸಿ, ಇವನ್ನು ಎಲ್ಲರೂ ಪಾನ ಮಾಡಿರಿ. ಯಾಕಂದರೆ ಇದು ಪಾಪ ಮನ್ನಣೆಯ ನಿಮಿತ್ತ ನಿಮಗಾಗಿಯೂ ಅನೇಕರಿಗಾಗಿಯೂ ಸುರಿಸಲ್ಪಡಲಿಕ್ಕಿರುವ ಹೊಸ ಒಡಂಬಡಿಕೆಯ ನಮ್ಮ ರಕ್ತವಾಗಿರುತ್ತದೆ. ನೀವು ಇದನ್ನು ಆಗಾಗ್ಗೆ ಮಾಡಿರಿ. ಯಾಕಂದರೆ ಇದನ್ನು ನೀವು ನನ್ನ ಜ್ಞಾಪಕಾರ್ಥವಾಗಿ ಮಾಡುವಿರಿ.

ಈ ಪ್ರಕಾರವಾಗಿ ನಮ್ಮ ಆಳಿದವರು ಮೊದಲನೇ ಪೂಜೆಯನ್ನು ಮಾಡಿದರು. ಶಿಲುಬೆಯ ಮೇಲೆ ಒಪ್ಪಿಸಿದ ಬಲಿಯ ಹಾಗೆಯೇ ತಮ್ಮ ಶರೀರವನ್ನು, ರಕ್ತವನ್ನು ಬಲಿಯಾಗಿ ಒಪ್ಪಿಸಿದರು.

ಈಗ ಗುರುಗಳು ತಿರು ಪೂಜೆಯಲ್ಲಿ ಜೇಸುನಾಥರ ತಿರು ಶರೀರವನ್ನು, ತಿರು ರಕ್ತವನ್ನು ಬಲಿಯಾಗಿ ಒಪ್ಪಿಸುತ್ತಾರೆ. ನಡು ಪೂಜೆಯಲ್ಲಿ ಗುರುಗಳು ಅಪ್ಪವನ್ನು ದ್ರಾಕ್ಷೆರಸವನ್ನು ಪಿತನಾದ ಸರ್ವೇಶ್ವರನಿಗೆ ಒಪ್ಪಿಸುವಾಗ ಅವು ಕೂಡಲೇ ಜೇಸುನಾಥರ ತಿರು ಶರೀರ ತಿರು ರಕ್ತವಾಗಿ ಮಾರ್ಪಡುತ್ತವೆ. ಯಾಕಂದರೆ ಜೇಸುನಾಥರು ತಾವೇ ಈ ವಾರ್ತೆಗಳನ್ನು ಉಚ್ಚರಿಸುತ್ತಾ ತಮ್ಮ ಅಪೋಸ್ತಲರಿಗೆ ಕೊಟ್ಟರು. ಆದ್ದರಿಂದ ಇವರ ಮೂಲಕವಾಗಿ ಸತ್ಯತಿರುಸಭೆಯು ಎಲ್ಲಾ ಗುರುಗಳಿಗೂ ಅಪ್ಪವನ್ನು, ದ್ರಾಕ್ಷೆಯ ರಸವನ್ನು ಅವರ ತಿರುಶರೀರ ಮತ್ತು ರಕ್ತವಾಗಿ ಮಾರ್ಪಡಿಸುವ ಅಧಿಕಾರವು ಬಂತು.

ಈ ಪ್ರಕಾರವಾಗಿ ಜೇಸುನಾಥರು ತಮ್ಮ ಅಪೋಸ್ತಲರಿಗೆ ಮೊದಲನೇ ಸತ್ಪ್ರಸಾದವನ್ನು ಕೊಟ್ಟರು.

ತಾವು ವಚನಿಸಿದ ಪ್ರಕಾರ ಪರಲೋಕದ ಅಪ್ಪವನ್ನು ಕೊಟ್ಟರು. ಅಪೋಸ್ತಲರು ಜೇಸುನಾಥರ ಸ್ವಂತ ಕೈಗಳಿಂದ ಪಡೆದಂಥಾದ್ದು ಅವರ ಸ್ವಂತ ಶರೀರ ಮತ್ತು ರಕ್ತವಾಗಿತ್ತು.

ಈಗ ನಾವು ಸಹ ಸತ್ಪ್ರಸಾದದಲ್ಲಿ ಆ ತಿರುಶರೀರ ಮತ್ತು ತಿರುರಕ್ತವನ್ನು ಸ್ವೀಕರಿಸುತ್ತೇವೆ. ಯಾಕಂದರೆ ಜೇಸುನಾಥರು ಬೋಧಿಸಿದ ಬೋಧನೆಯನ್ನೂ, ಅವರು ಮಾಡಿದ ಕೆಲಸವನ್ನು ಮುಂದರಿಸುವ ಹಾಗೆ ಅಪೋಸ್ಥಲರಿಗೆ ಅಪ್ಪಣೆ ಕೊಟ್ಟರು. ಈಗ ಅವರ ಸ್ಥಾನದಲ್ಲಿದ್ದ ಪಾಪು ಸ್ವಾಮಿಗಳು, ಮೇತ್ರಾಣಿಯವರು, ಗುರುಗಳು ಅವನ್ನು ನೆರವೇರಿಸುತ್ತಾ ಬರುತ್ತಾರೆ.

ಜೇಸುನಾಥರು ಅಪೋಸ್ತಲರನ್ನು ನೋಡಿ ಹೇಳಿದ್ದೇನಂದರೆ ನಿಮ್ಮಲ್ಲಿ ಒಬ್ಬನು ನಮ್ಮನ್ನು ಶತೃಗಳಿಗೆ ಒಪ್ಪಿಸಿ ಕೊಡು

ತ್ತಾನೆ ಎನ್ನಲು, ಎಲ್ಲರೂ ಬೆರಗಾಗಿ ಒಬ್ಬರನ್ನೊಬ್ಬರು ನೋಡ ಲಾರಂಭಿಸಿದರು. ಒಬ್ಬೊಬ್ಬರೂ "ನಾನೇನು ಕರ್ತರೇ, ನಾನೇನು ಕರ್ತರೇ" ಎಂದು ಕೇಳಿದರು. ಜೂಧಾಸ್ ಇಸ್ಕಾರಿಯೋತನು ಸಹ ನಾನೇನು ಕರ್ತರೇ ? ಎನ್ನಲು ನೀನೇ ಹೇಳುತ್ತೀಯಲ್ಲಾ ಎಂದರು. ಕೂಡಲೇ ಜೂದಾಸನು ಭೋಜನ ಪಂಕ್ತಿಯನ್ನು ಬಿಟ್ಟು ಆ ರಾತ್ರಿಯಲ್ಲಿಯೇ ಹೊರಟು ಹೋದನು. ಜೇಸುನಾಥರು ಅಪೋಸ್ತಲರನ್ನು ನೋಡು " ನೀವು ನಮ್ಮನ್ನು ತ್ಯಜಿಸುವಿರಿ. ಎಂದರು ಮತ್ತು ಪೇತ್ರನನ್ನು ನೋಡಿ, "ಈ ರಾತ್ರಿ ಬೆಳಗು ಮುಂಜಾನೆ ಹುಂಜ ಕೂಗುವದರೊಳಗೆ ನೀನು ನಮ್ಮನ್ನು ಅರಿಯೇ ಎಂದು ಮೂರು ಸಾರೆ ಪ್ರಮಾಣಮಾಡಿ ಬೊಂಕುವಿ ಅಂದರು. ಮತ್ತು ತಮ್ಮ ಅಪೋಸ್ತಲರಿಗೆ ಒಂದು ಹೊಸ ಕಟ್ಟಳೆಯನ್ನು ಕೊಟ್ಟರು. ಯಾವದೆಂದರೆ, ನಾವು ನಿಮ್ಮನ್ನು ಪ್ರೇಮಿಸಿದ ಹಾಗೆ ನೀವು ಒಬ್ಬರನ್ನೊಬ್ಬರು ಪ್ರೇಮಿಸಿರಿ. ಆಗ ನೀವು ನಮ್ಮ ಶಿಷ್ಯರೆಂದು ಎಲ್ಲರೂ ಕಂಡು ಹಿಡಿಯುವರು ಎಂದರು.

## ೮೭ ಜೇಸುನಾಥರು ವನದಲ್ಲಿ ಪಟ್ಟ ಮರಣಾವಸ್ತೆಯನ್ನು ಕುರಿತು

ರಾಭೋಜನದ ನಂತರ ಜೇಸುನಾಥರು ರಾಯಪ್ಪನನ್ನು ಜಾಕೋಬನನ್ನು ಜ್ವಾನ್ನೇಸನನ್ನು ಕರೆದುಕೊಂಡು ಜೆತ್ಸೆಮನಿ ಎಂಬ ವನದಲ್ಲಿದ್ದ ಒಲಿವ ಪರ್ವತದ ಮೇಲೆ ಕರೆದುಕೊಂಡು ಹೋದರು. ಅಲ್ಲಿ ಶಿಷ್ಯರನ್ನು ನೋಡಿ, "ನೀವು ಇಲ್ಲಿಯೇ ಇದ್ದು ನಮ್ಮ ಸಲುವಾಗಿ ಕಾಯುತ್ತಿರ್ರಿ" ಎಂದರು.

ತರುವಾಯ ತಾವು ಸ್ವಲ್ಪ ದೂರ ಹೋಗಿ ಅಲ್ಲಿ ಮೊಣ ಕಾಲೂರಿ ಜಪಮಾಡಲಾರಂಭಿಸಿದರು. ಮತ್ತು ನೆಲದ ಮೇಲೆ ಬೋರ್ಲ ಬಿದ್ದು ನನ್ನ ಪಿತನೇ ನಿಮಗೆ ಚಿತ್ತವಾದರೆ ಈ ಪಾತ್ರೆ ಯು ನನ್ನನ್ನು ಬಿಟ್ಟು ಅಗಲುವದಾಗಲಿ. ಆದರೆ ನನ್ನ ಚಿತ್ತವಲ್ಲ ನಿಮ್ಮ ಚಿತ್ತದಂತೆ ಆಗಲಿ ಎಂದು ಬೇಡಿಕೊಂಡರು.

ತರುವಾಯ ಎದ್ದು ತಮ್ಮ ಶಿಷ್ಯರ ಬಳಿಗೆ ಹೋಗಲು ಅವರು ನಿದ್ರೆ ಮಾಡುತ್ತಿದ್ದರು. ಆಗ ಪೇತ್ರನನ್ನು ನೋಡಿ "ಏನು ನೀನು ಒಂದು ತಾಸು ನಮ್ಮ ಸಂಗಡ ಎಚ್ಚತ್ತಿರಲಾರಿ ಯೋ ? ನೀವು ಶೋಧನೆಯೊಳಗೆ ಬೀಳದ ಹಾಗೆ ಎಚ್ಚತ್ತಿದ್ದು ಜಪ ಮಾಡಿರಿ. ಎಂದು ಹೇಳಿ ಜೇಸುನಾಥರು ಎರಡನೇ ಸಾರೆ ಜಪಮಾಡಲು ಹೊರಟರು. ಆಗ ಪಿತನನ್ನು ನೋಡಿ, ಪಿತನೇ ಈ ಪಾತ್ರೆಯು ನನ್ನನ್ನು ಬಿಟ್ಟು ಅಗಲದು. ನಾನು ಇದನ್ನು ಕುಡಿಯಬೇಕು. ಆದರೆ ನನ್ನ ಚಿತ್ತವಲ್ಲ. ತಮ್ಮ ಚಿತ್ತದ ಪ್ರಕಾ ರ ನಡೆಯಲಿ ! ಎಂದು, ತಿರುಗಿ ಎದ್ದು ಎರಡನೇ ಸಾರೆ ತಮ್ಮ ಶಿಷ್ಯರನ್ನು ನೋಡಲು ಹೋದಾಗ ಅವರು ಗಾಢ ನಿದ್ರೆಯಲ್ಲಿ ದ್ದುದನ್ನು ಕಂಡು, ತಿರುಗಿ ಜಪಮಾಡಲು ಹೋದರು. ಆಗ ಮೂರನೇ ಸಾರೆ ಸಹ ಅದೇ ಮಾತುಗಳನ್ನೇ ಹೇಳಿದರು. ಆಗ ಅವರು ಮರಣಾವಸ್ಥೆಯನ್ನು ಅನುಭವಿಸಿದರು. ಅವರ ಶರೀರ ದಿಂದ ರಕ್ತ ಬೆವರು ಬೊಟ್ಟು ಬೊಟ್ಟಾಗಿ ನೆಲದ ಮೇಲೆ ಸುರಿ ಯಿತು. ಆಗ ಒಬ್ಬ ದೇವದೂತನು ಪರಲೋಕದಿಂದ ಬಂದು ಅವರನ್ನು ಉಪಶಮಿಸಿದರು. ಮತ್ತೆ ಜೇಸುನಾಥರು ಮೂರನೇ ಸಾರೆ ಅಪೋಸ್ತಲರನ್ನು ನೋಡಲು ಎದ್ದು ಹೋದರು, ತಿರುಗಿ ಅವರು ನಿದ್ರಿಸುತ್ತಿರುವದನ್ನು ಕಂಡು; ಈಗ ವಿಶ್ರಮಿಸಿರಿ, ಇಗೋ ಮನುಮಗನು ಪಾಪಾತ್ಮರ ಕೈಯಲ್ಲಿ ಒಪ್ಪಿಸಲ್ಪಡುವ

ಸಮಯವಾಯ್ತು. ನಮ್ಮನ್ನು ತೋರಿಸಿ ಕೊಡುವಂಥವನು ಸಮೀಪವಲ್ಲಿದ್ದಾನೆ ಎಂದು ನುಡಿದರು.

ಜೇಸುನಾಥರು ಇನ್ನು ತಮ್ಮ ಶಿಷ್ಯರ ಸಂಗಡ ಮಾತಾಡುತ್ತಿರುವಾಗಲೇ ಕತ್ತಿ ದೊಣ್ಣೆ ದೀವಟಿಗೆಗಳನ್ನು ಹಿಡಿದುಕೊಂಡು ಬರುತ್ತಿದ್ದ ಜೂದರ ಸೇವಕರ ಸಂಗಡ ಜೂದಾಸನೂ ಅಲ್ಲಿಗೆ ಬಂದನು. ಅವನು ಅವರಿಗೆ ಹೇಳಿದ್ದೇನಂದರೆ, "ನಾನು ಯಾರನ್ನು ಅಪ್ಪಿಕೊಂಡು ಮುದ್ದುಕೊಡುತ್ತೇನೋ ಅವರೇ ನನ್ನ ಗುರುವು. ಅವರನ್ನು ಹಿಡಿದು ಕಟ್ಟಿರಿ" ಎಂದನು.

ಜೂದಾಸನು ಜೇಸುನಾಥರನ್ನು ಕಂಡಕೂಡಲೇ ಸಮೀಪಕ್ಕೆ ಹೋಗಿ "ಗುರುವೇ ನಿನಗೆ ಶುಭವಾಗಲಿ ಎಂದು ಹೇಳಿ ಅವರನ್ನು ಮುದ್ದಿಟ್ಟನು. ಅದಕ್ಕೆ ಜೇಸುನಾಥರು "ಸ್ನೇಹಿತನೇ ಯಾವ ಅಭಿಪ್ರಾಯದಿಂದ ಇಲ್ಲಿಗೆ ಬಂದಿ? ಜೂದಾಸನೇ ಮನುಮಗನನ್ನು ಮುದ್ದಿಟ್ಟು ತೋರಿಸಿಕೊಡುತ್ತಿಯೋ? ಅಂದರು.

ಜೇಸುನಾಥರು ಜನಗುಂಪನ್ನು ನೋಡಿ ಅವರೆದುರಾಗಿ "ಯಾರನ್ನು ಹುಡುಕುತ್ತೀರಿ" ಅಂದರು. ಅದಕ್ಕವರು ನಜರೇತ್ ಊರಿನ ಜೇಸುವನ್ನು ಹುಡುಕುತ್ತೇವೆ ಅನ್ನಲು, ಅವರು ನಾವೇ ಎಂದು ಹೇಳಿದಾಕ್ಷಣವೇ ಜನಗುಂಪೆಲ್ಲ ಹಿಮ್ಮುಖವಾಗಿ ಬಿದ್ದರು ಅವರೆಲ್ಲ ಏಳಿಕ ರಕ್ಷಕರು ತಿರುಗಿ ಅವರನ್ನು ನೋಡಿ ಯಾರನ್ನು ಹುಡುಕುತ್ತೀರೆಂದು ಕೇಳಲು, ಅವರು ನಜರೇತ್ ಊರಿನ ಜೇಸುವನ್ನು ಹುಡುಕುತ್ತೇವೆಂದು ತಿರುಗಿ ಹೇಳಿದರು. ನಾವೇ ಎಂಬದಾಗಿ ನಿಮಗೆ ಹೇಳಿದೆವೆಲ್ಲ ಎನ್ನಲು ಆ ಸಿಪಾಯಿಗಳು ಅವರನ್ನು ಹಿಡಿದು ಕಟ್ಟಿದರು.

## ೩೩ ರಾಯಪ್ಪರು ಜೇಸುನಾಥರನ್ನು ಬೊಂಕಿದ್ದು

ಸಿಪಾಯಿಗಳು ಜೇಸುನಾಥರನ್ನು ಹಿಡಿದುಕೊಂಡು ಹೋಗುವದನ್ನು ರಾಯಪ್ಪನವರು ನೋಡಿದರು. ಆಗ ತಮ್ಮ ಕತ್ತಿಯನ್ನು ಹಿರಿದು ಪ್ರಧಾನ ಯಾಜಕನ ಸೇವಕನಾದ ಮಲ್ಕುಸ್ ಎಂಬವನ ಕಿವಿಯನ್ನು ಕಡಿದರು. ಅದಕ್ಕೆ ಜೇಸು ನಾಥರು ಸಿಮೋನ್‌ನನ್ನು ಕಂಡು, ನಿನ್ನ ಕತ್ತಿಯನ್ನು ಒರೆಯಲ್ಲಿ ಹಾಕು. ಯಾಕಂದರೆ ಕತ್ತಿಯಿಂದ ಕಡಿಯುವಂಥವರೆಲ್ಲರು ಕತ್ತಿಯಿಂದಲೇ ಕೊಲ್ಲಲ್ಪಡುವರು. ನನ್ನ ಪಿತನಾದವರು ಕಳು ಹಿಸಿದ ಪಾತ್ರೆಯನ್ನು ನಾನು ಕುಡಿಯಬಾರದೋ ಎಂದು ಮಲ್ಕುಸನ ಕಿವಿಯನ್ನು ಸ್ವಸ್ಥಪಡಿಸಿದರು.

ತರುವಾಯ ಜೇಸುನಾಥರು ಪ್ರಥಮಾಚಾರಿಗಳನ್ನು ನೋಡಿ; "ನೀವು ಒಬ್ಬ ಕಳ್ಳನ ಹಾಗೆ ನಮ್ಮನ್ನು ಹಿಡಿಯಲು ಕತ್ತಿ ದೊಣ್ಣೆಗಳನ್ನು ಹಿಡಿದುಕೊಂಡು ಬಂದಿರಲ್ಲ. ನಾವು ಪ್ರತಿ ದಿವಸ ದೇವಾಲಯದಲ್ಲಿ ಬೋಧಿಸಿದೆವು. ಆಗ ನಮ್ಮನ್ನು ಯಾರೂ ಹಿಡಿಯಲಿಲ್ಲವೆ, " ಅಂದರು.

ಆ ಮೇಲೆ ಸಿಪಾಯಿಗಳು ಕರ್ತರನ್ನು ಹಿಡಿದು ಕಟ್ಟಿದರು. ಇದನ್ನು ಕಂಡು ಶಿಷ್ಯರು ಭಯಪಟ್ಟು ಓಡಿದರು. ಆದರೆ ರಾಯಪ್ಪನವರು ಮತ್ತು ಜ್ವಾನ್ನೆಸೆಂಬವರು ಮಾತ್ರ ಅವರ ಹಿಂದೆ ಹೋದರು.

ಮೊಟ್ಟ ಮೊದಲು ಸಿಪಾಯಿಗಳು ಜೇಸುನಾಥರನ್ನು ಕೈಪಾಸನ ಮಾವನಾದ ಅನಾಸನ ಬಳಿಗೆ ಕರೆದುಕೊಂಡು ಹೋದನು. ಈತನು ಆ ವರ್ಷದಲ್ಲಿ ಪ್ರಥಮಾಚಾರಿಯಾಗಿದ್ದನು.

ಇವನು ಜೇಸುನಾಥರನ್ನು ಪರೀಕ್ಷಿಸಿ ಅವರನ್ನು ತಿರುಗಿ ಕೈಪಾಸನ ಬಳಿಗೆ ಕಳುಹಿದನು.

ಕೈಪಾಸನ ಸಭೆಯಲ್ಲಿ ವೇದಶಾಸ್ತ್ರಿಗಳು ಮತ್ತು ಹಿರಿಯರು ಕೂಡಿದ್ದರು ಜೇಸುನಾಥರು ಈ ಸಭೆಗೆ ಒಯ್ಯಲ್ಪಟ್ಟರು. ಜ್ವಾನ್ನೆಸಂಬವರು ಸಹ ಒಳಗೆ ಅವರ ಸಂಗಡ ಹೋದರು. ಆದರೆ ರಾಯಪ್ಪನವರು ಹೊರಗೆ ನಿಂತರು. ತರುವಾಯ ಜ್ವಾನ್ನೇಸರು ಅಲ್ಲಿಯ ಸೇವಕರನ್ನು ಕೇಳಿ ರಾಯಪ್ಪನವರನ್ನು ಸಹ ಒಳಗೆ ಕರೆದುಕೊಂಡು ಹೋದರು ಆಗ ರಾಯಪ್ಪನವರು ಅಲ್ಲಿಯ ಅಧಿಕಾರಿಯ ಸೇವಕರ ಕೂಡ ಬೆಂಕಿ ಕಾಸಿಕೊಳ್ಳಲು ಅಲ್ಲಿಯೇ ನಿಂತರು. ಯಾಕಂದರೆ ಆಗ ಬಹಳ ಚಳಿ ಇತ್ತು.

ಆಗ ಅಲ್ಲಿಗೆ ಒಬ್ಬ ಸೇವಕಳು ಬಂದು ರಾಯಪ್ಪನನ್ನು ನೋಡಿ, "ನಜರೇತಿನವನಾದ ಜೇಸುವಿನ ಸಂಗಡ ನೀನೂ ಇದ್ದಿಲ್ಲವೋ ?" ಎಂದು ಕೇಳಲು " ರಾಯಪ್ಪನವರು ನಾನು ಅವರನ್ನು ಅರಿಯೆನು ನೀನು ಏನು ಹೇಳುತ್ತಿಯೋ ನನಗೆ ತಿಳಿಯುವದಿಲ್ಲವೆಂದರು.

ತರುವಾಯ ಮತ್ತೊಬ್ಬ ಸೇವಕಳು ಅವರನ್ನು ನೋಡಿ "ನಜರೇತಿನವನಾದ ಜೇಸುವಿನ ಸಂಗಡ ಇವನು ಸಹ ಇದ್ದನೆ"ಂದು ಅಲ್ಲಿ ಕುಳಿತಿದ್ದವರಿಗೆ ಹೇಳಿದಳು. ಆಗ ರಾಯಪ್ಪನವರು "ನಾನು ಆ ಮನುಷ್ಯನನ್ನು ಅರಿಯನೆಂದು ಆಣೆ ಮಾಡಿ ಬೊಂಕಿದರು.

ಆನಂತರ ಸ್ವಲ್ಪ ಹೊತ್ತಾದ ಬಳಿಕ ಅಲ್ಲಿ ನಿಂತ ಜನರೆಲ್ಲರೂ ಬಂದು ನೀನು ಸಹ ಜೇಸುನಾಥರ ಶಿಷ್ಯನಲ್ಲವೋ ? ನಿನ್ನ ಮಾತುಗಳೇ ನಿನ್ನನ್ನು ತೋರಿಸುತ್ತವೆ ಅಂದರು.

ಇದನ್ನು ಕೇಳಿ ರಾಯಪ್ಪನವರು ದಿಗಿಲುಪಟ್ಟು ನಾನು ಆ ಮನುಷ್ಯನನ್ನು ಅರಿಯೆನೆಂದು ಶಪಿಸಲು, ಆಣೆಯಿಡಲು ತೊಡಗಿದರು. ಕೂಡಲೇ ಕೋಳಿ ಕೂಗಿತು. ಆಗ ರಕ್ಷಕರು ದುಃಖದಿಂದ ಹಿಂತಿರುಗಿ ರಾಯಪ್ಪನನ್ನು ನೋಡಿದರು ಆಗ ರಾಯಪ್ಪನವರು ಹುಂಜಕೂಗುವ ಮುಂಚೆ ಮೂರು ಸಾರಿ ನನ್ನನ್ನು ಅರಿಯನೆಂದು ಬೊಂಕುವಿ ಎಂದು ಜೇಸುನಾಥರು ಹೇಳಿದ ಮಾತುಗಳನ್ನು ಜ್ಞಾಪಿಸಿಕೊಂಡು ಬಹಳ ದುಃಖ ದಿಂದ ಹೊರಗೆ ಹೋಗಿ ಬಹಳ ಅತ್ತರು.

## 89 ಜೇಸುನಾಥರು ಕೈಪಾಸನ ಬಳಿಗೆ ಒಯ್ಯಲ್ಪಟ್ಟ ವರ್ತಮಾನ

ಕೈಪಾಸನ ಮಾವನಾದ ಅನಾಸನು ವೇದಶಾಸ್ತ್ರದವಿಷಯ ಜೇಸುನಾಥರನ್ನು ಕೇಳಿದನು. ಅದಕ್ಕೆ ಜೇಸುನಾಥರು ನಾನು ಎಲ್ಲವನ್ನು ಬಹಿರಂಗವಾಗಿ ದೇವಾಲಯಗಳಲ್ಲಿಯೂ ಸಿನಗೋಗಿ ನಲ್ಲಿಯೂ ಬೋಧಿಸುತ್ತೇನೆ. ಹೊರತು ರಹಸ್ಯವಾಗಿ ಏನೂ ಬೋಧಿಸಿಲ್ಲ ನಾನು ಬೋಧಿಸಿದ ಎಲ್ಲ ಸಂಗತಿಗಳು ಜೂದರು ಗಳೆಲ್ಲರಿಗೆ ಗೊತ್ತುಂಟು ಆದ್ದರಿಂದ ಯಾಕೆ ನೀನು ನನ್ನನ್ನು ಕೇಳುತ್ತೀ? ನಾನು ಹೇಳಿದ ವಿಷಯಗಳನ್ನು ಕೇಳಿದ ಜನರನ್ನು ಕೇಳು ಎಂದರು.

ಆಗ ಅಲ್ಲಿ ನಿಂತಿದ್ದ ಸೇವಕರಲ್ಲಿ ಒಬ್ಬನು ಜೇಸುನಾಥರನ್ನು ನೋಡಿ "ನೀನು ಪ್ರಥಮಾಚಾರಿಗೆ ಈ ಬಗೆಯಾಗಿ ಉತ್ತರ ಕೊಡುತ್ತಿಯಾ? ಎಂದು ಕೆನ್ನೆಯ ಮೇಲೆ ಒಂದು ಏಟನ್ನು ಕೊಟ್ಟನು.

ಅದಕ್ಕೆ ಜೇಸುನಾಥರು "ನಾನು ಕೆಡುಕನ್ನು ಮಾತಾಡಿದ್ದರೆ, ಆ ಕೆಡುಕನ್ನು ಹೇಳು ನಾನು ಒಳ್ಳೇದನ್ನು ಹೇಳಿದರೆ ಯಾಕೆ ನೀನು ನನ್ನನ್ನು ಬಡಿಯುತ್ತೀ ? ಎಂದರು.

ಕಡೆಗೆ ಅನಾಸನು ಜೇಸುನಾಥರನ್ನು ಕೈಪಾಸನ ಬಳಿಗೆ ಕಳಿಸಿದನು. ಅಲ್ಲಿ ಯಾಜಕರೆಲ್ಲರೂ ಕೂಡಿದ್ದರು ಇವರ ಮೇಲೆ ತಪ್ಪನ್ನು ಹೊರಿಸಲು ಬಹಳ ಪ್ರಯತ್ನ ಮಾಡಿದರು. ಆದರೆ ಯಾವ ತಪ್ಪು ಸಿಗಲಿಲ್ಲ. ಕಡೆಗೆ ಅವರನ್ನು ಹೇಗಾದರೂ ಮರಣ ದಂಡನೆಗೆ ಒಳಪಡಿಸಬೇಕೆಂದು ನೆನಸಿ ಎರಡು ತಪ್ಪುಗಳನ್ನು ಅವರ ಮೇಲೆ ಹೇಳಿದರು. ಯಾವೆಂದರೆ "ಇವನು ದೇವಾಲಯವನ್ನು ಕೆಡವಿಬಿಟ್ಟು ಮೂರು ದಿವಸಗಳಲ್ಲಿ ಪುನಃ ಕಟ್ಟಿಸುವನೆಂದು ಹೇಳಿದನು" ಅಂದರು.

ಆಗ ಕೈಪಾಸನು "ಇವರು ನಿನ್ನ ಮೇಲೆ ಹೇಳಿದ ಸಾಕ್ಷಿಗೆ ನೀನು ಏನು ಬದಲು ಹೇಳುತ್ತೀಯೆಂದುಕೇಳಲು, ಜೇಸುನಾಥರು ಮಾತನಾಡದೆ ಮೌನವಾಗಿದ್ದರು. ಆಗ ಕೈಪಾಸನು ಜೇಸುನಾಥರನ್ನು ನೋಡಿ, "ನೀನು ದೇವಸುತನಾದ ಕ್ರಿಸ್ತುವೋ ಎಂದು ನನಗೆ ಹೇಳುವ ಹಾಗೆ ಜೀವಿತರಾದ ಸರ್ವೇಶ್ವರನ ಮೇಲೆ ಆಣೆ ಇಟ್ಟು ನಿನಗೆ ಕಟ್ಟಿ ಮಾಡುತ್ತೇನೆ" ಅಂದನು. ಅದಕ್ಕೆ ಜೇಸುನಾಥರು ಪ್ರತ್ಯುತ್ತರವಾಗಿ; ನೀನು ಹೇಳಿದಹಾಗೆ ನಾವು ದೇವಕುಮಾರನಾಗಿರುತ್ತೇವೆ. ಮತ್ತು ಮನುಮಗನು ಸರ್ವಶಕ್ತಿಯುಳ್ಳ ಸರ್ವೇಶ್ವರನ ಬಲಪಾರ್ಶ್ವದಲ್ಲಿ ಆಸೀನನಾಗಿರುವದನ್ನು, ಆಕಾಶದ ಮೇಘಗಳ ಮೇಲೆ ಚಿತ್ತೈಸಿ ಬರುವದನ್ನೂ ನೀನು ಇನ್ನು ಮುಂದೆ ಕಾಣುವಿ" ಅಂದರು.

ಆಗ ಕೈಪಾಸನು ತನ್ನ ವಸ್ತ್ರಗಳನ್ನು ಹರಿದು ಇಗೋ, ಇವನು ದೇವದೂಷಣೆಯನ್ನು ಹೇಳುತ್ತಾನೆ; ಇನ್ನು ನಮಗೆ ಸಾಕ್ಷಿಗಳ್ಯಾಕೆ? ನೀವೇ ಈ ದೇವದೂಷಣೆಯನ್ನು ಕೇಳಿದರಲ್ಲಾ; ಅದಕ್ಕಾಗಿ ಏನು ಮಾಡೋಣ ಎಂದು ಕೇಳುವಲ್ಲಿ; ಅಲ್ಲಿ ಕೂಡಿದ್ದ ಸಭೆಯವರೆಲ್ಲರೂ, "ಇವನು ಸಾವಿಗೆ ಪಾತ್ರನೇ ಹೌದೆಂದು ಕೂಗಿದರು. ಮತ್ತು ಜೇಸುನಾಥರ ಮೇಲೆ ಉಗುಳಿದರು, ಗುದ್ದಿದರು, ಅವರ ಕಣ್ಣುಗಳನ್ನು ಕಟ್ಟಿ ತಲೆಯಮೇಲೆ ಕಟಿದರು. ಮತ್ತು ಮರುದಿನ ಬೆಳಗಿನ ಜಾವದಲ್ಲಿ ತಿರುಗಿ ಜೇಸುನಾಥರನ್ನು ರೋಮಾದೇಶ ಪೌರನಾದ ಪೊಂಸ್ಸ್ಯಪಿಲಾತನ ಬಳಿಗೆ ಕರೆದೊಯ್ದರು. ಯಾಕಂದರೆ ಕೈಪಾಸನಿಗೆ ಮರಣದಂಡನೆ ವಿಧಿಸಲು ಅಧಿಕಾರವಿರಲಿಲ್ಲ. ಆದ್ದರಿಂದ ರೋಮಾದೇಶದ ಚಕ್ರವರ್ತಿಯಿಂದ ಕಳುಹಿಸಲ್ಪಟ್ಟ ಗವರ್ನರನಿಗಿ ಮಾತ್ರ ಮರಣದಂಡನೆ ವಿಧಿಸಲು ಅಧಿಕಾರವಿತ್ತು.

## 90 ಜೇಸುನಾಥರು ಪಿಲಾತನ ಬಳಿಗೆ ಒಯ್ಯಲ್ಪಟ್ಟದ್ದು

ಜೇಸುನಾಥರು ಪಿಲಾತನ ಮನೆಯ ಪಡಸಾಲೆಯೊಳಗೆ ಹೋಗಿ ಪಿಲಾತನ ಮುಂದೆ ನಿಂತರು. ಜೂದರು ಮನೆಯನ್ನು ಪ್ರವೇಶಿಸದೆ ಹೊರಗೆ ನಿಂತಿದ್ದರು. ಆದಕಾರಣ ಪಿಲಾತನು ಹೊರಗೆ ಬಂದು, ಈ ಮನುಷ್ಯನ ಮೇಲೆ ಯಾವ ಅಪರಾಧವನ್ನು ಹೇಳಬಂದಿರೆಂದು ಕೇಳಿದನು. ಆದಕ್ಕವರು ಇವನು ನೇರಸ್ತನಾಗಿರುತ್ತಾನೆಂದು ನುಡಿದರು.

ಅದಕ್ಕೆ ಪಿಲಾತನು "ಹಾಗಾದರೆ ಇವನನ್ನು ನೀವೇ ನಿಮ್ಮ ನೇಮದ ಪ್ರಕಾರ ತೀರ್ವೆ ಮಾಡಿರೆಂದನು. ಆದರೆ ಜೂದರು ಜೇಸುನಾಥರನ್ನು ಕೊಲ್ಲಬೇಕೆಂದೆಣಿಸಿ, " ಇವನು ನಮ್ಮ

ಜಾತಿಯ ಜನರನ್ನು ಕೆಡಿಸುತ್ತಾನೆ. ಸೆಜಾರನಿಗೆ ತೀರ್ವೆಕೊಡ ಬೇಡವೆಂದು ಅಟಂಕಮಾಡುತ್ತಾನೆ ತನ್ನನ್ನು ರಾಯನೆಂತಲೂ, ಕ್ರಿಸ್ತನೆಂತಲೂ ಹೇಳುತ್ತಾನೆ " ಅಂದರು.

ಆಗ ಪಿಲಾತನು ಒಳಗೆ ಹೋಗಿ ಜೇಸುನಾಥರನ್ನು ನೋಡಿ ನೀನು ಜೂದರ ಅರಸನೋ? ಎಂದುಕೇಳಿದನು ಅದಕ್ಕೆ ಜೇಸುನಾಥರು ನನ್ನ ರಾಜ್ಯವು ಈ ಲೊಕಕ್ಕೆ ಸಂಭಂದವಾದದಲ್ಲ ಎಂದು ಅಂದರು.

ಪಿಲಾತನು ತಿರುಗಿ ನೀನು ಅರಸನೋ ? ಎಂದು ಕೇಳುವಲ್ಲಿ ಜೇಸುನಾಥರು ಹೌದೆಂದರು. ಆಗ ಪಿಲಾತನು ಹೊರಗೆ ಹೋಗಿ ಜನರನ್ನು ನೋಡಿ ಈ ಮನುಷ್ಯನಲ್ಲಿ ಯಾವ ಅಪರಾಧವು ಕಾಣಿಸುವದಿಲ್ಲವೆಂದನು. ಜೇಸುನಾಥರು ಗಲಿಲೇಯನೆಂದು ಅರಿತ ಪಿಲಾತನು ಅವರನ್ನು ಹೆರೋದನ ಬಳಿಗೆ ಕಳುಹಿಸಿದನು. ಆ ಕಾಲದಲ್ಲಿ ಗಲಿಲೇಯದ ಹೆರೋದನು ಜೆರುಸಲೇಮಿನಲ್ಲಿ ಇದ್ದನು. ಅವನು ಜೇಸುನಾಥರಿಗೆ ಅನೇಕ ಪ್ರಶ್ನೆಗಳನ್ನು ಹಾಕಿದನು. ಆದರೆ ಜೇಸುನಾಥರು ಯಾವ ಪ್ರತ್ಯುತ್ತರವನ್ನು ಕೊಡಲಿಲ್ಲ. ಪ್ರಥಮಾಚಾರಿಗಳು ವೇದಶಾಸ್ತ್ರಜ್ಞರು ಅವರನ್ನು ಬೈದರು, ಸಿಪಾಯಿಗಳು ಪರಿಹಾಸ್ಯ ಮಾಡಿದರು, ಅವರಿಗೆ ಒಂದು ಬಿಳಿ ಅಂಗಿಯನ್ನು ತೊಡಿಸಿದರು. ಆದರೂ ಜೇಸುನಾಥರು ಒಂದು ಶಬ್ದವನ್ನಾದರೂ ಹೇಳಲಿಲ್ಲ. ಆದ್ದರಿಂದ ಹೆರೋದನು ಜೇಸುನಾಥರನ್ನು ತಿರುಗಿ ಪಿಲಾತನ ಬಳಿಗೆ ಕಳುಹಿಸಿದನು.

ಪಿಲಾತನು ಪ್ರಥಮಾಚಾರಿಗಳನ್ನು ಮತ್ತು ಜನರನ್ನು ಕರೆದು ಹೇಳಿದ್ದೇನಂದರೆ, ನಾನು ಈ ಮನುಷ್ಯನಿಗೆ ಪ್ರಶ್ನೆ

ಮಾಡಿದೆನು. ಇವನಲ್ಲಿ ನನಗೆ ಯಾವ ಅಪರಾಧವೂ ಕಂಡು ಬರಲಿಲ್ಲ. ಮತ್ತು ಹೆರೋದನು ಸಹ ಯಾವ ತಪ್ಪು ಕಂಡು ಹಿಡಿಯಲಿಲ್ಲ. ಆದಕಾರಣ ಇವನನ್ನು ಹೊಡೆದು ಬಿಟ್ಟು ಬಿಡುವೆನು ಎಂದನು.

ಆ ಕಾಲದಲ್ಲಿ ಪಾಸ್ಕದ ಹಬ್ಬದ ದಿವಸದಲ್ಲಿ ಒಬ್ಬ ಅಪರಾಧಿಯನ್ನು ಬಿಡುಗಡೆ ಮಾಡುವ ಪದ್ಧತಿ ಇತ್ತು. ಆಗ ಬಂದೀಖಾನೆಯಲ್ಲಿ ಒಬ್ಬ ಬರಬ್ಬಾಸನೆಂಬ ಒಬ್ಬ ಕೊಲೆಪಾತಕನಿದ್ದನು. ಪಿಲಾತನು ಜೇಸುನಾಥರನ್ನು ಬಿಡುಗಡೆ ಮಾಡಲೆತ್ನಿಸಿ ಜೂದರನ್ನು ನೋಡಿ, "ಯಾರನ್ನು ಬಿಡುಗಡೆ ಮಾಡಬೇಕು? ಕ್ರಿಸ್ತನೆಂದು ಕರೆಯಲ್ಪಡುವ ಜೇಸುನಾಥರನ್ನೋ ಅಥವಾ ಬರಬ್ಬಾಸನನ್ನೋ ಎಂದು ಕೇಳುವಲ್ಲಿ, ಎಲ್ಲರೂ ಕೂಡಿ ಬರಬ್ಬಾಸನೆಂದರು.

ತರುವಾಯ ಪಿಲಾತನು "ಹಾಗಾದರೆ ಜೇಸುನಾಥರನ್ನು ಏನು ಮಾಡಬೇಕು" ಎಂದನು. ಅದಕ್ಕೆ ಅವನನ್ನು ಶಿಲುಬೆಗೆ ಜಡಿಯಿರಿ, ಶಿಲುಬೆಗೆಜಡಿಯಿರಿ ಎಂದುಕೂಗಿದರು. ಅದ್ದರಿಂದಪಿಲಾತನು ನೀರನ್ನು ತರಿಸಿ ಜನರ ಮುಂದೆ ತನ್ನ ಕೈಗಳನ್ನು ತೊಳೆದು ಈ ನೀತಿವಂತನ ರಕ್ತಕ್ಕೆ ನಾನು ನಿರಾಪರಾಧಿಯಾಗಿದ್ದೇನೆ ಎನ್ನಲೂ, ಅಲ್ಲಿದ್ದ ಜನರು ದೊಡ್ಡ ಶಬ್ದದಿಂದ ಇವನ ರಕ್ತವು ನಮ್ಮ ಮಕ್ಕಳಮೇಲೆ ಬೀಳಲಿ ಎಂದರು ಆಗ ಪಿಲಾತನು ಜೇಸುನಾಥರನ್ನು ಬಡೆಯುವದಕ್ಕೆ ಅಪ್ಪಣೆ ಕೊಟ್ಟನು.

## 91 ಮುಳ್ಳಿನ ಕಿರೀಟವು.

ಸಿಪಾಯಿಗಳು ಜೇಸುನಾಥರನ್ನು ಒಂದು ಕಲ್ಲಿನ ಕಂಭಕ್ಕೆ ಕಟ್ಟಿ ಹೊಡೆದರು. ಅವರ ಮೈಮೇಲೆ ಊದಾ ಬಣ್ಣದ ಬಟ್ಟೆಯನ್ನು ಹೊದಿಸಿ ಮುಳ್ಳುಗಳಿಂದ ಒಂದು ಕಿರೀಟವನ್ನು ಹೆಣೆದು

ಅವರ ತಲೆಯಮೇಲೆ ಇಟ್ಟು ಕೈಯಲ್ಲಿ ಒಂದು ಕೋಲನ್ನು ಕೊಟ್ಟರು.

ತರುವಾಯ ಅವರ ಮುಂದೆ ಬಂದು ಮೊಣಕಾಲೂರಿ ಜೂದರ ರಾಯನೇ ಶುಭವಾಗಲಿ ಎಂದು ಪರಿಹಾಸ್ಯಮಾಡುತ್ತಾ ಮುಖದಲ್ಲಿ ಉಗಳಿ ಕೆನ್ನೆಯ ಮೇಲೆ ಬಡೆದು, ಅವರ ಕೈಯಲ್ಲಿದ್ದ ಕೋಲನ್ನು ಕಿತ್ತು ಅದರಿಂದ ತಲೆಯ ಮೇಲೆ ಬಡೆಯಲು ಕಿರೀಟದ ಮುಳ್ಳುಗಳು ತಲೆಯ ಒಳಗೆ ಇಳಿದವು.

ಪಿಲಾತನು ತಿರುಗಿ ಹೊರಗೆ ಹೋಗಿ ಜೂದರನ್ನು ನೋಡಿ. "ನಾನು ಜೇಸುವನ್ನು ತಿರುಗಿ ತಂದು ನಿಮಗೆ ಒಪ್ಪಿಸುತ್ತೀನೆ .ಯಾಕಂದರೆ ಅವನಲ್ಲಿ ನನಗೆ ಯಾವ ಅಪರಾಧವೂ ಕಂಡುಬರಲಿಲ್ಲ ವೆಂದು ಅಂದನು.

ಜೇಸುನಾಥರು ಊದಾವಸ್ತ್ರವನ್ನು ಧರಿಸಿ ತಲೆಯ ಮೇಲೆ ಇಟ್ಟ ಮುಳ್ಳಿನ ಕಿರೀಟ ದೊಂದಿಗೆ ಹೊರಗೆ ಬಂದರು. ಪಿಲಾತನು ಆವರನ್ನು ಜನರಿಗೆ ತೋರಿಸಿ ಹೇಳಿದ್ದೇನಂದರೆ "ಇಗೋ ಮನುಷ್ಯನು ಎಂದು ಹೇಳಿದನು. ಆದರೆ ಜನರು ಆತನನ್ನು ಶಿಲುಬೆಗೆ ಜಡಿಯಿರಿ, ಶಿಲುಬೆಗೆ ಜಡಿಯಿರಿ ಎಂದು ಗಟ್ಟಿಯಾಗಿ ಕೂಗಿದರು.

ಅದಕ್ಕೆ ಪ್ರತ್ಯುತ್ತರವಾಗಿ ಪಿಲಾತನು "ನೀವೇ ಆತನನ್ನು ತೆಗೆದುಕೊಂಡು ಹೋಗಿ ಶಿಲುಬೆಗೆ ಜಡಿಯಿರಿ. ಆತನಲ್ಲಿ ನನಗೆ ಯಾವ ಅಪರಾಧವೂ ಕಂಡು ಬರಲಿಲ್ಲವೆಂದನು ಆಗ ಜೂದರು "ನಮ್ಮ ವೇದದ ಕಟ್ಟಳೆ ಪ್ರಕಾರ ಆತನು ಸಾಯಲೇಬೇಕು. ಯಾಕಂದರೆ ಆತನು ತನ್ನನ್ನು ತಾನೇ ದೇವಸುತನೆಂದು ಹೇಳುತ್ತಾನೆ ಎಂದರು.

ಪಿಲಾತನು ತಿರುಗಿ ಜೇಸುನಾಥರ ಬಳಿಗೆ ಹೋಗಿ "ನೀನು ಎಲ್ಲಿಂದ ಬಂದಿರುವಿ ಎಂದು ಕೇಳಿದನು. ಆದರೆ ಜೇಸುನಾಥರು ಪ್ರತ್ಯುತ್ತರವೇನೂ ಕೊಡಲಿಲ್ಲ. ಆಗ ಪಿಲಾತನು "ನನಗೆ ಉತ್ತರ ಹೇಳುವದಿಲ್ಲವೋ ? ನಿನ್ನನ್ನು ಶಿಲುಬೆಗೆ ಜಡಿಯಲು, ಅಥವಾ ಬಿಡುಗಡೆ ಮಾಡಲು ನನಗೆ ಅಧಿಕಾರ ಉಂಟೆಂದು ನಿನಗೆ ಗೊತ್ತಿಲ್ಲವೋ ? ಎಂದು ಹೇಳಿದಲ್ಲಿ; ಜೇಸುನಾಥರು ಮೇಲಿಂದ ಈ ಅಧಿಕಾರವು ನಿನಗೆ ಕೊಡಲ್ಪಡದಿದ್ದರೆ ನನ್ನ ಮೇಲೆ ನಿನಗೆ ಯಾವ ಅಧಿಕಾರವೂ ಇರಲಾದು. ಇದಕ್ಕಾಗಿ ನನ್ನನ್ನು ನಿನಗೆ ಒಪ್ಪಿಸಿದವನು ಅಧಿಕಪಾತಕವನ್ನು ಕಟ್ಟಿಕೊಂಡಿದ್ದಾನೆ ಯೆಂದರು.

ಪಿಲಾತನು ಜೇಸುನಾಥರನ್ನು ಬಿಡುಗಡೆ ಮಾಡಬೇಕೆಂದು ತಿರುಗಿ ಉಪಾಯವನ್ನು ಹುಡುಕುತ್ತಿದ್ದನು. ಅದ್ದರಿಂದ ಹೊರಗೆ ಬಂದನು. ಆದರೆ ಜೂದರೆಲ್ಲರೂ ಏಕವಾಗಿ ಕೂಗಿ, ನೀವು ಈ ಮನುಷ್ಯನನ್ನು ಬಿಡುಗಡೆ ಮಾಡಿದರೆ ನೀವು ಸೆಜಾರನ ಸ್ನೇಹಿತನಲ್ಲ. ಯಾಕಂದರೆ ತನ್ನನ್ನೇ ರಾಜನೆಂದು ಹೇಳಿಕೊಳ್ಳು ವವನು ಸೆಜಾರನಿಗೆ ವಿರೋಧಿಯಾಗಿರುತ್ತಾನೆಂದರು.

ಆಗ ಪಿಲಾತನು ಅವರಿಗೆ ಅಂಜಿದನು. ಜೇಸುನಾಥರನ್ನು ಬರಹೇಳಿ, ತಾನು ನ್ಯಾಯಾಸನದ ಮೇಲೆ ಕುಳಿತು ಜೂದರನ್ನು ನೋಡಿ "ಇಗೋ ! ನಿಮ್ಮ ರಾಯನೆಂದನು. ಇವನನ್ನು ಶಿಲುಬೆಗೆ ಜಡಿಯಿರಿ, ಶಿಲುಬೆಗೆ ಜಡಿಯಿರಿ ಎಂದು ಜೂದರು ಕೂಗಿದರು. ನಿಮ್ಮ ರಾಯನನ್ನು ನಾನು ಶಿಲುಬೆಗೆ ಜಡಿಯಲೋ ಎಂದು ಪಿಲಾತನು ಕೇಳಲು, ನಮಗೆ ಸೆಜಾರನ ಹೊರತು ಬೇರೆ ರಾಯನಿಲ್ಲವೆಂದು ಹೇಳಿದರು. ಆಗ ಪಿಲಾತನು ಆ ದುಷ್ಟರಿಗೆ

ವಿರೋಧವಾಗಿ ತಾನು ಏನೂ ಮಾಡಲಾಗದೆಂದು ತಿಳಿದು ಜೇಸುನಾಥರನ್ನು ಶಿಲುಬೆಗೆ ಜಡಿಯಲು ಅವರ ಕೈಯಲ್ಲಿ ಒಪ್ಪಿಸಿದನು. ಆಗ ಅವರು ಊದಾ ವಸ್ತ್ರವನ್ನು ಕಳೆದು ತಿರುಗಿ ಅವರ ಸ್ವಂತ ಬಟ್ಟೆಗಳನ್ನು ಹಾಕಿ ಶಿಲುಬೆಗೆ ಜಡಿಯಲು ಕರೆದೊಯ್ದರು.

## 92 ಶಿಲುಬೆಯ ಮಾರ್ಗವು.

ಜೇಸುನಾಥರು ತಾವು ಜಡೆಯಲ್ಪಡಬೇಕಾಗಿದ್ದ ಶಿಲುಬೆಯನ್ನು ಅವರೇ ಹೊತ್ತುಕೊಂಡು ಹೋಗುವಂತೆ ಸಿಪಾಯಿಗಳು ಅವರ ಮೇಲೆ ಹೊರಿಸಿದರು. ಜೇಸುನಾಥರು ಇದನ್ನು ತಮ್ಮ ಹೆಗಲಮೇಲೆ ಹೊತ್ತುಕೊಂಡು ಜೆರೂಸಲೇಮ್ ನಗರದ ಬೀದಿಗಳಲ್ಲಿ ತಿರುಗಿ ಹೋಗುತ್ತಿರುವಾಗ ದಾರಿಯಲ್ಲಿ ತಮ್ಮ ದಿವ್ಯ ಮಾತೆಯನ್ನು ಭೆಟ್ಟಿಯಾದರು. ಜೇಸುನಾಥರು ಶಿಲುಬೆಯನ್ನು ಹೊತ್ತುಕೊಂಡು ಊರ ಹೊರಗಿರುವ ಕಪಾಲಬೆಟ್ಟ ಅಥವಾ ಗೊಲ್ಗೊತ್ತ ಎಂಬ ಬೆಟ್ಟಕ್ಕೆ ಹೋದರು. ಅಲ್ಲಿ ಅವರು ಶಿಲುಬೆಗೆ ಜಡಿಯಲ್ಪಟ್ಟರು. ಜೇಸುನಾಥರು ರಾಭೋಜನದ ಸಮಯದಲ್ಲಿ ತಮ್ಮ ಶಿಷ್ಯರೊಂದಿಗೆ ಊಟ ಮಾಡಿದ್ದರೇ ಹೊರತು ತಿರುಗಿ ಉಂಡಿರಲಿಲ್ಲ. ಮತ್ತು ನಿಪ್ರಸಹ ಮಾಡಿರಲಿಲ್ಲ. ಇವರನ್ನು ಬಡೆದು ಹೊಡೆದದ್ದರಿಂದ ಬಹಳ ಆಯಾಸಗೊಂಡಿದ್ದರು. ಕಪಾಲ ಬೆಟ್ಟಕ್ಕೆ ಹೋಗುವಾಗ ಮಾರ್ಗದಲ್ಲಿ ಮೂರು ಸಾರೆ ಭಾರವಾದ ಶಿಲುಬೆಯನ್ನು ಹೊತ್ತುಕೊಂಡು ಮೊಕ್ಕಡೆಯಾಗಿ ಕೆಳಗೆ ಬಿದ್ದರು.

ಇದನ್ನು ಕಂಡು ಜೂದರು ಜೇಸುನಾಥರು ಮಾರ್ಗದಲ್ಲಿಯೇ ಸಾಯುವರೇನೋ ಎಂದು ಭಯಪಟ್ಟು ಸಿರೇನಿಯಾ

ಸಿಮೋನನನ್ನು ಅವರ ಹಿಂದೆ ಶಿಲುಬೆಯನ್ನು ಹೊರಲು ಅವನಿಗೆ ಕಡ್ಡಾಯಪಡಿಸಿದರು. ಜೇಸುನಾಥರು ಕೊಲೆಸ್ಥಳಕ್ಕೆ ಹೋದಾಗ ಅನೇಕ ಜನಗುಂಪು ಅವರ ಮುಂದೆಯೂ ಹಿಂದೆಯೂ ಹೊರಟಿತು. ಅವರಲ್ಲಿ ಅನೇಕ ಮಂದಿ ಜೇಸುನಾಥರನ್ನು ಹಿಂಬಾಲಿಸಿದ್ದವರೂ ಅವರ ಕೈಯಿಂದ ಸ್ವಸ್ಥಪಟ್ಟವರೂ ಇದ್ದರು, ಆದರೆ ಅವರಲ್ಲಿ ಒಬ್ಬನಾದರೂ ಸ್ವರವೆತ್ತಿ ಅವರನ್ನು ರಕ್ಷಿಸದೆ ಹೊದರು. ಇವಲ್ಲದೆ ಅವರ ಸ್ವಂತ ಶಿಷ್ಯರೇ ಅವರು ಬಿಟ್ಟು ಓಡಿ ಹೋದರು.

ಈ ಜನ ಗುಂಪಿನಲ್ಲಿ ಕೆಲವು ಮಂದಿ ಸ್ತ್ರೀಯರಿದ್ದರು. ಇವರು ಜೇಸುನಾಥರು ಹಾದು ಹೋಗುವಾಗ ಅವರ ಕಷ್ಟ ಭಾಧೆಗಳನ್ನು ಕಂಡು ಕಣ್ಣೀರು ಸುರುಸಿದರು. ಆಗ ಜೇಸುನಾಥರು ಅವರನ್ನು ಕಂಡು ನೀವು ನಮ್ಮ ಸಲುವಾಗಿ ಅಳಬೇಡಿರಿ. ನಿಮ್ಮ ಸಲುವಾಗಿಯೂ ನಿಮ್ಮ ಮಕ್ಕಳ ಸಲುವಾಗಿ ಅಳಿರಿ ಎಂದರು.

ಜೇಸುನಾಥರು ಕೊಲೆ ಸ್ಥಳವನ್ನು ಸೇರಿದಮೇಲೆ ಸಿಪಾಯಿಗಳು ಅವರ ಮೈಮೆಲಿದ್ದ ಬಟ್ಟೆಗಳನ್ನು ಕಿತ್ತಿದರು. ಅವರನ್ನು ಶಿಲುಬೆಯ ಮೇಲೆ ಮಲಗಿಸಿದರು. ಅವರ ಕೈಗಳಿಗೂ ಕಾಲುಗಳಿಗೂ ಮೊಳೆಗಳನ್ನು ಬಡೆದರು. ಅವರ ತಿರು ರಕ್ತವು ಭೂಮಿಯಬಿದ್ದು ನೆಲವನ್ನು ನೆನೆಯಿಸಿತು.

ತರುವಾಯ ಶಿಲುಬೆಯನ್ನು ಮೇಲಕ್ಕೆತ್ತಿ ನಿಲ್ಲಿಸಿದರು. ಜೇಸುನಾಥರು ಅದರ ಮೇಲೆ ತುಗಾಡುತ್ತಿದ್ದರು. ಜೇಸುನಾಥರೊಂದಿಗೆ ಬೇರೆ ಇಬ್ಬರು ಕಳ್ಳರನ್ನು ಎಡಕ್ಕೂ ಬಲಕ್ಕೂ ಶೀಲುಬೆಗೆ ಜಡಿದರು. ಜೇಸುನಾಥರ ಶಿಲುಬೆಯ ಮೇಲೆ "ಜೂದರ

ರಾಯನಾದ ನಜರೇತಿನ ಜೇಸು" ಎಂಬ ವಿಳಾಸವನ್ನು ಪಿಲಾತನು ಬರೆದು ಹಚ್ಚಿದನು.

ಸಿಪಾಯಿಗಳು ಜೇಸುನಾಥರ ವಸ್ತ್ರಗಳನ್ನು ತಮ್ಮೊಳಗೆ ಹಂಚಿಕೊಂಡರು. ಆದರೆ ಅವರ ಅಂಗಿಯು ಹೊಲಿಗೆ ಇಲ್ಲದೆ ಇದದ್ದರಿಂದ ಅದರ ಮೇಲೆ ಅದೃಷ್ಟ ಚೀಟಿಯನ್ನು ಹಾಕಿದರು.

ಆಗ ದುಷ್ಟರಾದ ಸಿಪಾಯಿಗಳು ಮತ್ತು ಯಾಜಕರು ಜೇಸುನಾಥರನ್ನು ನೋಡಿ ದೂಷಿದರು. ಮತ್ತು ಹೇಳಿದ್ದೇನಂದರೆ ನೀನು ನಿಜವಾಗಿ ದೇವರ ಮಗನಾಗಿದ್ದರೆ ನಿನ್ನನ್ನು ನೀನು ರಕ್ಷಿಸಿಕೊ ಮತ್ತು ಶಿಲುಬೆಯಿಂದ ಕೆಳಗೆ ಇಳಿದು ಬಾ ಎಂದರು. ಆದರೆ ಜೇಸುನಾಥರು ಸರ್ವೇಶ್ವರನನ್ನು ನೋಡಿ, ಅವರಿಗಾಗಿ ಪ್ರಾರ್ಥಿಸಿದರು. ತಂದೆಯೇ ಇವರು ಮಾಡುವದನ್ನು ಅರಿಯದೆ ಮಾಡುತ್ತಾರೆ. ಆದ್ದರಿಂದ ಅವರನ್ನು ಕ್ಷಮಿಸು ಎಂದು ಬೇಡಿಕೊಂಡರು

ಜೇಸುನಾಥರು ಇಂಥ ಕಷ್ಟವನ್ನೆಲ್ಲ ನಮ್ಮ ಮೇಲಿದ್ದ ಪ್ರೀತಿಗಾಗಿಯೂ ಮನುಷ್ಯರ ರಕ್ಷಣ್ಯಕ್ಕಾಗಿಯೂ ಅನುಭವಿಸಿದರು.

## 93 ಜೇಸುನಾಥರು ಶಿಲುಬೆಯ ಮೇಲೆ ಮರಣ ಹೊಂದುತ್ತಾರೆ

ಜೇಸುನಾಥರೊಂದಿಗೆ ಶಿಲುಬೆಯ ಮೇಲೆ ಜಡಿಯಲ್ಪಟ್ಟ ಕಳ್ಳರಲ್ಲಿ ಒಬ್ಬನು ಜೇಸುನಾಥರನ್ನು ಕುರಿತು ದೂಷಿಸಿ, ಅಂದದ್ದೇನಂದರೆ; ನೀನು ನಿಜವಾಗಿಯೇ ದೇವರ ಮಗನಾಗಿದ್ದರೆ, ನಿನ್ನನ್ನು ನೀನು ರಕ್ಷಿಸಿಕೋ ಮತ್ತು ನಮ್ಮನ್ನು ಸಹ ಕಾಪಾಡು ಎಂದನು.

ಆದರೆ ಅವನ ಜೊತೆಗಾರನಾದ ಇನ್ನೊಬ್ಬನು ಅವನನ್ನು ಗದ್ದರಿಸಿ ನೀನು ದೇವರಿಗೆ ಅಂಜುವುದಿಲ್ಲವೋ? ನಾವು ನಮ್ಮ ತಪ್ಪುಗಳಿಗಾಗಿ ತಕ್ಕ ಶಿಕ್ಷೆಯನ್ನು ಹೊಂದಿದ್ದೇವೆ. ಆದರೆ ಈ ಮನುಷ್ಯನು ಯಾವ ಕೆಡುಕನ್ನು ಮಾಡಿಲ್ಲ. ಜೇಸುನಾಥರನ್ನು ನೋಡಿ "ಆಳುವವರೇ ನೀವು ನಿಮ್ಮ ರಾಜ್ಯದಲ್ಲಿ ಸೇರಿದ ಮೇಲೆ ನನ್ನನ್ನು ಜ್ಞಾಪಿಸಿಕೊಳ್ಳಿ ಎಂದನು.

ಆಗ ಜೇಸುನಾಥರು "ನಿಜವಾಗಿ ನಿನಗೆ ಹೇಳುತ್ತೇವೆ. ನೀನು ಈ ದಿವಸ ನಮ್ಮೊಂದಿಗೆ ಮೋಕ್ಷರಾಜ್ಯದಲ್ಲಿ ಇರುವಿ ಎಂದರು. ಶಿಲುಬೆಯ ಅಡಿಯಲ್ಲಿ ಜೇಸುನಾಥರ ತಾಯಿಯು ಅವರ ಪ್ರಿಯ ಶಿಷ್ಯನಾದ ಜ್ವಾನ್ನೆಸರು ಮತ್ತು ಮರಿಯಮಗ್ದಲೇನಮ್ಮ ನಿಂತಿದ್ದರು ಜೇಸುನಾಥರು ತಮ್ಮ ತಾಯಿಯನ್ನು ಪ್ರೇಮದಿಂದನೋಡಿ ಆಕೆಗೆ ಜ್ವಾನ್ನೇಸ್ ಎಂಬವರನ್ನು ತೋರಿಸಿ "ಸ್ತ್ರೀಯೆ ಇಗೋ ನಿನ್ನ ಮಗನು ಎಂದರು. ಜ್ವಾನ್ನೆಸರಿಗೆ ತಮ್ಮ ತಾಯಿಯನ್ನು ತೋರಿಸಿ ಇಗೋ ನಿನ್ನ ತಾಯಿಯೆಂದರು. ಈ ವಾಕ್ಯಗಳಿಂದ ಜೇಸುನಾಥರು ತಮ್ಮ ತಾಯಿಯನ್ನು ನಮ್ಮ ತಾಯಿಯಾಗಿಯೂ ಕೊಟ್ಟರು.

ಜೇಸುನಾಥರು ಸುಮಾರು ಆರು ತಾಸು ಹೊತ್ತಿನಲ್ಲಿ ಶಿಲುಬೆಗೆ ಜಡಿಯಲ್ಪಟ್ಟಿದ್ದರು. ಆಗ್ಗಿನಿಂದ ಒಂಭತ್ತು ತಾಸಿನ ವರೆಗೆ ಅವರು ಶಿಲುಬೆಯ ಮೇಲೆಯೇ ಜೋತಾಡುತ್ತಿದ್ದರು. ಆಗ ಮಧ್ಯಾಹ್ನವಾಗಿದ್ದರೂ ಲೋಕವೆಲ್ಲವೂ ಕತ್ತಲೆಯಿಂದ ತುಂಬಿತ್ತು ಒಂಭತ್ತನೆಯ ತಾಸಿನಲ್ಲಿ ಜೇಸುನಾಥರು ದೊಡ್ಡ ಸ್ವರದಿಂದ ನನ್ನ ದೇವರೇ ಯಾಕೆ ನನ್ನನ್ನು ಕೈಬಿಟ್ಟಿರೆಂದು ಕೂಗಿದರು. ತರುವಾಯ ಸ್ವಲ್ಪ ಹೊತ್ತಾದ ಬಳಿಕ ತಮಗೆ ದಾಹವಾಗುತ್ತದೆಂದು ಹೇಳಿದರು.

ಆಗ ಸಿಪಾಯಿಯು ಓಡಿ ಹೋಗಿ (ಸ್ಪಂಜ್) ಸಮುದ್ರದ ಪಾಚಿಯನ್ನು ಹುಳಿರಸದಲ್ಲಿ ಅದ್ದಿ ಒಂದು ಕೋಲಿಗೆ ಸಿಕ್ಕಿಸಿ ಅವರಬಾಯಿಗೆ ಕುಡಿಯಲು ಕೊಟ್ಟನು. ಅವರು ಅದರ ರುಚಿ ನೋಡಿದ ನಂತರ ಸಕಲವೂ ಈಡೇರಿತು ಅಂದರು. ಮತ್ತು ದೊಡ್ಡ ಶಬ್ದದಿಂದ ಕೂಗಿ "ತಂದಯೇ ನಿಮ್ಮ ಕೈಯಲ್ಲಿ ನನ್ನ ಆತ್ಮವನ್ನು ಒಪ್ಪಿಸಿಕೊಡುತ್ತೇನೆ ಎಂದು ಹೇಳಿ ತಲೆಬೊಗ್ಗಿಸಿ ಪ್ರಾಣವನ್ನು ಬಿಟ್ಟರು.

ಜೇಸುನಾಥರು ಮರಣ ಹೊಂದಿದ್ದ ಸಮಯದಲ್ಲಿ ಕತ್ತಲೆ ಯಾಯಿತು. ಭೂಮಿಯು ಕಂಪಿಸಿತು. ದೇವಾಲಯದ ತೆರೆಯು ಮೇಲಿನಿಂದ ಕೆಳಗಿನ ತನಕ ಎರಡಾಗಿ ಹರಿದು ಹೋಯಿತು; ಬಂಡೆಗಳು ಸೀಳಿ ಹೋದವು. ಸಮಾಧಿಗಳು ತೆರೆಯಲ್ಪಡಲು ಸತ್ತವರು ಅನೇಕರು ಜೀವದಿಂದ ಎದ್ದರು.

ಅಲ್ಲಿ ಕಾವಲು ಕಾಯುತ್ತಿದ್ದ ಕಾವಲುಗಾರರು ಈ ಅದ್ಭುತಗಳನ್ನೆಲ್ಲ ಕಂಡು ದಿಗಿಲುಗೊಂಡು ಈ ನೀತಿವಂತನು ನಿಜವಾಗಿಯೇ ಸರ್ವೇಶ್ವರನ ಕುಮಾರನೇ ಅಂದರು.

ಮರುದಿವಸ ದೊಡ್ಡ ಹಬ್ಬವಾದ ಸಬ್ಬತ್ತು ಹಬ್ಬ ವಾಗಿತ್ತು. ಆದ್ದರಿಂದ ಸಿಪಾಯಿಗಳು ಅಲ್ಲಿ ಕಳ್ಳರನ್ನು ಜೋತಾಡ ಬಿಡಲು ಮನಸಿಲ್ಲದೆ ಅವರ ಕಾಲುಗಳನ್ನು ಮುರಿ ದರು ಆದರೆ ಜೇಸುನಾಥರು ಮೊದಲೇ ಪ್ರಾಣವನ್ನು ಬಿಟ್ಟಿದ್ದರಿಂದ ಅವರಕಾಲುಗಳನ್ನು ಮುರಿಯದೆ ಬಿಟ್ಟರು. ಅವರಲ್ಲಿ ಒಬ್ಬ ಸಿಪಾಯಿಯು ಭರ್ಜಿಯಿಂದ ಅವರ ಪಕ್ಕೆಯನ್ನು

ತಿವಿದನು ಕೂಡಲೇ ಅಲ್ಲಿಂದ ನೀರೂ ರಕ್ತವೂ ಹರಿಯಿತು. ನಮ್ಮ ಪಾಪಗಳ ಸಲುವಾಗಿ ಜೇಸುನಾಥರು ಕಡೆಬೊಟ್ಟು ಪರಿಯಂತರ ರಕ್ತವನ್ನು ಸುರಿಸಿದರು.

## 94 ಪುನರುತ್ಥಾನವನ್ನು ಕುರಿತು

ಸಂಜೆಯಾಗಲು ಜೇಸುನಾಥರ ಶಿಷ್ಯನಾದ ಅರಿಮತೆಯ ಊರಿನ ಜೋಸೇಫನೆಂಬವನು ಪಿಲಾತನ ಬಳಿಗೆ ಹೋಗಿ ಶಿಲುಬೆಯ ಮೇಲಿದ್ದ ರಕ್ಷಕರ ಶರೀರವನ್ನು ತನಗೆ ಕೊಡಬೇಕೆಂದು ಕೇಳಿದನು.

ಜೋಸೇಫನು ನಿಕೋದೇಮನ ಸಮೇತ ತಿರುಶರೀರವನ್ನು ಶಿಲುಬೆಯಿಂದ ಇಳಿಸಿ, ಆ ತಿರು ಶರೀರವನ್ನು ಅವರ ತಾಯಿಗೆ ಕೊಟ್ಟರು. ಆಕೆಯು ಜೇಸುನಾಥರು ಶಿಲುಬೆಯ ಮೇಲಿದ್ದ ಸಮಯದಲ್ಲೆಲ್ಲಾ ಅವರನ್ನು ಕಾಯುತ್ತಿದ್ದಳು. ಅವರ ಶರೀರವನ್ನು ಶುಭ್ರವಾದ ವಸ್ತ್ರದಲ್ಲ ಸುತ್ತಿದ್ದರು. ಆ ಕಾಲದ ಮತ್ತು ಜೂದರ ಆಚಾರದಪ್ರಕಾರ ಅದನ್ನು ಪರಿಮಳದಿಂದ ಲೇಪಿಸಿ ಪರಿವಟ್ಟದಿಂದ ಸುತ್ತಿದರು.

ಆ ದಿವ್ಯ ಶರೀರವನ್ನು ಅಲ್ಲಿ ಸಮೀಪದಲ್ಲಿಯೇ ಒಂದು ತೋಟದಲ್ಲಿದ್ದ ಒಂದು ಹೊಸಸಮಾಧಿಯಲ್ಲಿ ಅಡಕಮಾಡಿದರು. ತರುವಾಯ ಅದರ ಮೇಲೆ ಒಂದು ದೊಡ್ಡ ಬಂಡೆಯನ್ನು ಮುಚ್ಚಿ ಹೋದರು. ತರುವಾಯ ಪ್ರಥಮಾಚಾರಿಗಳು ವೇದಶಾಸ್ತ್ರಜ್ಞರು ಬಂದು ಅದಕ್ಕೆ ಮುದ್ರೆ ಹಾಕಿದರು. ಮತ್ತು ಜೇಸುನಾಥರ ಶಿಷ್ಯರು ಬಂದು ಅದನ್ನು ತೆಗೆದುಕೊಂಡು ಹೋಗದ ಹಾಗೆ ಆ ಸಮಾಧಿಯನ್ನು ಕಾಯುವದಕ್ಕೆ ಜವಾನರನ್ನು ಇಟ್ಟರು.

ಮರುದಿವಸ ಎಲ್ಲರೂ ವಿಶ್ರಾಂತಿಯನ್ನು ತೆಗೆದುಕೊಂಡರು. ಆ ದಿವಸ ಸಬ್ಬತ್ತು ಎಂಬ ದೊಡ್ಡ ಹಬ್ಬವಾಗಿತ್ತು. ಆದರೆ ಮರುದಿನ ಬೆಳಿಗ್ಗೆ ಕೆಲವು ಮಂದಿ ಪುಣ್ಯ ಸ್ತ್ರೀಯರು ಸಬ್ಬತು ಆದಕೂಡಲೇ ಸಮಾಧಿಯ ಬಳಿಗೆ ಬಂದರು. ಯಾಕಂದರೆ ಆ ತಿರು ಶರೀರಕ್ಕೆ ಪರಿಮಳ ತೈಲವನ್ನು ಹಚ್ಚಲು ಬಂದಿದ್ದರು.

ಆ ಪುಣ್ಯ ಸ್ತ್ರೀಯರು ಯಾರಂದರೆ, ಮರಿಯಮಗ್ದಲೇನಮ್ಮನು ಜಾಕೋಬನ ತಾಯಿಯಾದ ಮರಿಯಮ್ಮನು ಮತ್ತು ಸಲೋಮೆಯಮ್ಮನಾಗಿದ್ದರು. ಇವರು ಸಮಾಧಿಯ ಹತ್ತರ ಸೇರುತ್ತಾ ಆದರ ಮೇಲೆ ಮುಚ್ಚಿರುವ ಕಲ್ಲನ್ನು ಯಾರು ತಮಗೆ ಹೊರಳಿಸುವರೆಂದು ತಮ್ಮೊಳಗೆ ಮಾತನಾಡಿಕೊಳ್ಳುತ್ತಿದ್ದರು.

ಯಾಕಂದರೆ ಆ ಕಲ್ಲು ಬಹುಭಾರವಾಗಿತ್ತು. ಆದರೆ ಅವರು ಆ ಸ್ಥಳವನ್ನು ಸೇರಿದ ಕೂಡಲೇ ಅಲ್ಲಿ ಕಲ್ಲು ತಾನಾಗಿಯೇ ತೆರೆಯಲ್ಪಟ್ಟದ್ದನು ಕಂಡರು.

ಅದು ಹ್ಯಾಗಂದರೆ ಆ ದಿವಸ ಬೆಳಗುಮುಂಜಾವಿನಲ್ಲಿ ಜೇಸುನಾಥರು ಪುನರುತ್ಥಾನವಾಗಿ ಎದ್ದಿದ್ದರು. ಅವರು ಅಡಕ ಮಾಡಲ್ಪಟ್ಟ ಸ್ಥಳವನ್ನು ಬಿಟ್ಟು ಹೊರಗೆ ಬಂದಿದ್ದರು. ಆಗ ದೊಡ್ಡ ಭೂಕಂಪವು ಜರಗಿತು. ಒಬ್ಬ ದೇವದೂತನು ಆ ಬಂಡೆಯನ್ನು ಹೊರಳಿಸಿ ಅದರ ಮೇಲೆ ಕೂತುಕೊಂಡಿದ್ದನು. ಆತನ ಮುಖವು ಸೂರ್ಯನ ಹಾಗೆ ಪ್ರಕಾಶವಾಗಿದ್ದು ಆತನ ಬಟ್ಟೆಗಳು ಹಿಮದ ಹಾಗೆ ಬೆಳ್ಳಗಾದ್ದವು.

ಅಲ್ಲಿ ಕಾವಲು ಕಾಯುತ್ತಿದ್ದ ಸಿಪಾಯಿಗಳು ಇದನ್ನು ಕಂಡು ಬಹಳ ಭಯಪಟ್ಟರು. ದೇವದೂತನನ್ನು ಕಂಡು

ಮೂರ್ಛೆಹೊಂದಿದರು. ತರುವಾಯ ತಾವು ನೋಡಿದ್ದನ್ನೆಲ್ಲ ಫರಿಜೇಯರಿಗೆ ತಿಳಿಸಲು ಜೆರೂಸಲೇಮಿಗೆ ಓಡಿ ಹೋದರು. ಆದರೆ ಫರಿಜೇಯರು ಅವರಿಗೆ ಲಂಚವನ್ನು ಕೊಟ್ಟು ಅವರ ಶಿಷ್ಯರು ಅದನ್ನು ಎತ್ತಿಕೊಂಡು ಹೋದರೆಂದು ಹೇಳುವಹಾಗೆ ತಿಳಿಸಿದರು.

ಜೇಸುನಾಥರ ಪುನರುತ್ಥಾನದಿಂದ ತಾವು ಕಲಿಸಿದ ಬೋಧನೆಯನ್ನು ಸ್ಥಿರಪಡಿಸಿದರು ಮತ್ತು ತಾವು ನಿಜವಾದ ದೇವರೆಂದು ಸ್ಥಿರವಾಗಿ ತೋರಿಸಿ ಅವರಿಗಿದ್ದ ಸಂಶಯವನ್ನು ಕಳೆದರು.

ಜೇಸುನಾಥರ ಪುನರುತ್ಥಾನವು ಅಪೋಸ್ತಲರ ವಿಶ್ವಾಸವನ್ನು ಹೆಚ್ಚಿಸಿತು. ಮತ್ತು ಜೇಸುನಾಥರು ನಿಜವಾದ ದೇವರು ಇದ್ದಾರೆಂತಲೂ ತಮಗೆ ಪ್ರಮಾಣಿಕ್ಯವಾಗಿದ್ದವರಿಗೆ ಸಹಾಯ ಮಾಡುತ್ತಾರೆಂತಲೂ ತಿಳಿಸಿದರು.

## 95 [ಎ] ಜೇಸುನಾಥರು ಮರಿಯ ಮಗ್ದಲೇನ್ನಳಿಗೆ ಕಾಣಿಸಿದ್ದು.

ಮರಿಯ ಮಗ್ದಲೇನಳು ಜಾಕೋಬನ ತಾಯಿಯಾದ ಮರಿಯಮ್ಮನು ಮತ್ತು ಸಲೋಮೆಯೆಂಬವಳು ಸಮಾಧಿಯ ಬಳಿಗೆ ಹೋದರು. ಅಲ್ಲಿ ಒಬ್ಬ ಯೌವನಸ್ಥನು ಬಿಳಿ ಬಟ್ಟೆಗಳನ್ನು ಧರಿಸಿಕೊಂಡು ಇರುವದನ್ನು ಕಂಡು ಭಯಪಟ್ಟರು. ಆದರೆ ಆತನು ಅವರನ್ನು ನೋಡಿ ನೀವು ಅಂಜಬೇಡಿರಿ. ನೀವು ಶಿಲುಬೆಗೆ ಜಡಿಯಲ್ಪಟ್ಟ ನಜರೇತಿನ ಜೇಸುವನ್ನು ಹುಡುಕುತ್ತೀರಿ. ಅವರು ಜೀವಿತರಾಗಿ ಎದ್ದರು. ನಿಮಗೆ ಅವರು ಹೇಳಿದ ಹಾಗೆ ನಿಮಗಿಂತ ಮುಂಚೆ ಅವರು ಗಲಿಲೆಯಾ ದೇಶಕ್ಕೆ

ಹೋಗಿರುವರೆಂದು ಅವರ ಶಿಷ್ಯರಿಗೂ ರಾಯಪ್ಪನವರಿಗೂ ತಿಳಿಸಿರಿ ಅಂದನು. ಆದ್ದರಿಂದ ಆ ಹೆಂಗಸರು ಈ ಸುದ್ದಿಯನ್ನು ಅವರ ಶಿಷ್ಯರಿಗೆ ತಿಳಿಸಲು ಹೋದರು. ಪೇತ್ರನೂ ಮತ್ತು ಜ್ವಾನ್ನೇಸನು ಇಬ್ಬರೂ ಸಮಾಧಿಯ ಬಳಿಗೆ ಓಡಿದರು. ಆದರೆ ಅಲ್ಲಿ ಜೇಸುನಾಥರ ಶರೀರವು ಇದ್ದಿಲ್ಲ. ಅದನ್ನು ಸುತ್ತಿದ್ದ ಬಟ್ಟೆ ಮಾತ್ರ ಇತ್ತು. ಆದ್ದರಿಂದ ಅವರಿಬ್ಬರು ತಿರುಗಿ ಹೋದರು.

ಮರಿಮಗ್ದಲೇನಳು ತಿರುಗಿ ಹೋಗದೆ ಸಮಾಧಿಯಬಳಿಗೆ ನಿಂತು ಅಳುತ್ತಿದ್ದಳು. ಅಲ್ಲಿ ಸಮಾಧಿಯೊಳಗೆ ಇಬ್ಬರು ಸಮ್ಮನಸ್ಸುಗಳು ಅಲ್ಲಿ ಕುಳಿತಿರುವದನ್ನು ಕಂಡಳು. ಅವರು ಆಕೆಯನ್ನು ನೋಡಿ "ಸ್ತ್ರೀಯೇ ಯಾಕೆ ಅಳುತ್ತೀ ಎಂದದಕ್ಕೆ ಮರಿಯಮ್ಮನು ಅಂದದ್ದು, "ಅವರು ನನ್ನ ಆಳಿದವರನ್ನು ತೆಗೆದುಕೊಂಡು ಹೋಗಿದ್ದಾರೆ ಮತ್ತು ಅವರನ್ನು ಎಲ್ಲಿ ಮಡಗಿದ್ದಾರೊ ಗೊತ್ತಿಲ್ಲ ಎಂದಳು.

ಅಷ್ಟರೊಳಗೆ ತಿರುಗಿ ನೋಡಲು ಅಲ್ಲಿ ಜೇಸುನಾಥರು ನಿಂತಿರುವದನ್ನು ನೋಡಿದಳು. ಆದರೆ ಅವರೇ ಜೇಸುನಾಥರೆಂದು ಆಕೆಗೆ ಗೊತ್ತಿದ್ದಿಲ್ಲ. ಅವರು ಆಕೆಯನ್ನು ನೋಡಿ "ಸ್ತ್ರೀಯೇ ಯಾಕೆ ನೀನು ದುಃಖಿಸುತ್ತೀಯೋ ಎನ್ನಲು, ಮರಿಯಮ್ಮನು ಅವರನ್ನು ತೋಟಗಾರನೆಂದು ತಿಳಿದು, "ಅಯ್ಯಾ ನೀನು ಅವರನ್ನು ತೆಗೆದುಕೊಂಡು ಹೋಗಿದ್ದರೆ ಎಲ್ಲಿ ಇಟ್ಟಿರುವೆ ಎಂಬದನ್ನು ನನಗೆ ಹೇಳು. ನಾನು ಅವರನ್ನು ತೆಗೆದುಕೊಂಡು ಹೋಗುತ್ತೇನೆ ಎಂದಳು. ಆಗ ಜೇಸುನಾಥರು ಮರಿಯಮ್ಮಾ ಅಂದರು. ಆಕೆಯು ಜೇಸುನಾಥರು ಕಂಡು ಹಿಡಿದು ಮೊಣಕಾಲೂರಿ "ಗುರುವೇ" ಎನ್ನಲು ಜೇಸುನಾಥರು ನೀನು ಅಪ್ಪೋ

ಸ್ತಲರಬಳಿಗೆ ಹೋಗು ಮತ್ತು ನಾನು ನನ್ನ ತಂದೆ ಮತ್ತು ನಿಮ್ಮ ತಂದೆಯ ಬಳಿಗೂ, ನನ್ನ ದೇವರು ಮತ್ತು ನಿಮ್ಮ ದೇವರ ಬಳಿಗೂ ಹೋಗುತ್ತೇನೆಂದು ಅವರಿಗೆ ತಿಳಿಸು ಎಂದರು. ಹಾಗೆಯೇ ಮರಿಯಮ್ಮನು ಹೋಗಿ ತಾನು ಜೇಸುನಾಥರನ್ನು ನೋಡಿದಳೆಂದು ತಿಳಿಸಿದಳು.

## 96 (ಬಿ) ಎಮ್ಮಾವುಸ್ ಗ್ರಾಮಕ್ಕೆ ಹೋಗುತ್ತಿದ್ದ ಶಿಷ್ಯರಿಗೆ ಜೇಸುನಾಥರು ದರ್ಶನವಾದದ್ದು.

ಜೇಸುನಾಥರು ಪುಣ್ಯಸ್ತ್ರೀಯರಿಗೆ ದರ್ಶನವಾದಮೇಲೆ ಸ್ವಲ್ಪ ಹೊತ್ತಾದಬಳಿಕ ರಾಯಪ್ಪನವರಿಗೂ ಸಹಕಾಣಿಸಿಕೊಂಡರು. ಆ ದಿವಸ ಸಾಯಂಕಾಲದಲ್ಲಿ ಇಬ್ಬರು ಶಿಷ್ಯರು ಎಮ್ಮಾವುಸ್ ಪಟ್ಟಣಕ್ಕೆ ಹೋಗುತ್ತಿದ್ದರು. ಜೇಸುನಾಥರು ಅವರಿಗೆ ಕಾಣಿಸಿ ಕೊಂಡು ಅವರಸಂಗಡಲೇ ನಡೆದು ಹೋದರು. ಆದರೆ ಅವರು ಯಾರೆಂದು ಶಿಷ್ಯರಿಗೆ ಗೊತ್ತಿದ್ದಿಲ್ಲ. ಅವರು ಎಮ್ಮಾವುಸ್ ಪಟ್ಟಣವನ್ನು ಸೇರಿದಕೂಡಲೇ ಜೇಸುನಾಥರನ್ನು ಊಟಕ್ಕೆ ಕರೆದರು. ಭೋಜನಪಂಕ್ತಿಯಲ್ಲಿ ಜೇಸುನಾಥರು ರೊಟ್ಟಿಯನ್ನು ಕೈಯಲ್ಲಿ ತೆಗೆದುಕೊಂಡು ಅದನ್ನು ಆಶೀರ್ವದಿಸಿ ತುಂಡುಮಾಡಿ ಶಿಷ್ಯರಿಗೆ ಕೊಟ್ಟರು. ಕೂಡಲೇ ಶಿಷ್ಯರು ಅವರು ಜೇಸುನಾಥರೆಂದು ಕಂಡು ಹಿಡಿದರು. ಆದರೆ ಅವರು ಆ ಕ್ಷಣವೇ ಅದೃಶ್ಯವಾಗಿ ಹೋದರು. ಆದ್ದರಿಂದ ಅವರು ತಿರುಗಿ ಜೆರೂಸಲೇಮಿಗೆ ಹೋಗಿ ತಾವು ಜೇಸುನಾಥರನ್ನು ನೋಡಿದರೆಂದು ಅಪೋಸ್ತಲರಿಗೆ ತಿಳಿಸಿದರು.

## 97 ಜೇಸುನಾಥರು ಅಪೋಸ್ತಲರಿಗೆ ದರ್ಶನವಾದದ್ದು.

ಆ ರಾತ್ರಿ ಅಪೋಸ್ತಲರು ಕೂಡಿದ್ದು ಜೂದರಿಗೆ ಭಯ ಪಟ್ಟು ಮನೆಯ ಬಾಗಿಲುಗಳೆಲ್ಲವನ್ನು ಮುಚ್ಚಿಕೊಂಡಿದ್ದರು.

ಆಗ ಜೇಸುನಾಥರು ಬಂದು ಅವರ ಮಧ್ಯದಲ್ಲಿ ನಿಂತು ನಿಮಗೆ ಸಮಾಧಾನವಾಗಲೆಂದು ಪಾಲಿಸಿದ ಬಳಿಕ ತಮ್ಮ ಹಸ್ತವನ್ನು ಪಕ್ಕೆಯನ್ನು ಅವರಿಗೆ ತೋರಿಸಿದರು. ಅವರು ಅವರನ್ನು ನೋಡಿ "ಪಿತನಾದವರು ನಮ್ಮನ್ನು ಕಳಿಸಿದ ಹಾಗೆ ನಾವು ನಿಮ್ಮನ್ನು ಸಹ ಕಳಿಸುತ್ತೇವೆ. ಎಂದು ಹೇಳಿ ಅವರ ಮೇಲೆ ಊದಿ ಸ್ಪಿರಿತು ಸಾಂಕ್ತುವನ್ನು ಪರಿಗ್ರಹಿಸಿಕೊಳ್ಳಿ. ನೀವು ಯಾರ ಪಾಪವನ್ನು ಕ್ಷಮಿಸುವಿರೋ ಅವರ ಪಾಪಗಳು ಕ್ಷಮಿಸಲ್ಪಡುವವು. ಯಾರ ಪಾಪಗಳನ್ನು ಕ್ಷಮಿಸದೆ ಇರುವಿರೋ ಅವರ ಪಾಪಗಳು ಕ್ಷಮಿಸಲ್ಪಡುವವು ಎಂದರು.

ಈ ವಾಕ್ಯಗಳಿಂದ ಜೇಸುನಾಥರು ಅಪೋಸ್ತಲರಿಗೂ ಅವರ ಮೂಲಕ ಸತ್ಯ ತಿರುಸಭೆಯ ಸಕಲ ಮೇತ್ರಾಣಿಯವರಿಗೂ, ಗುರುಗಳಿಗೂ ಪಾಪಗಳನ್ನು ಕ್ಷಮಿಸುವ ಅಧಿಕಾರವನ್ನು ಕೊಟ್ಟರು.

ಜೇಸುನಾಥರು ಅಪೋಸ್ತಲರಿಗೆ ಕಾಣಿಸಿದಾಗ ಅವರಲ್ಲಿ ತೋಮಾಸೆಂಬವರೊಬ್ಬರು ಇದ್ದಿಲ್ಲ ಆದಕಾರಣ ಉಳಿದವರು ತಾವು ಜೇಸುನಾಥರನ್ನು ನೋಡಿದರೆಂದು ತಿಳಿಸಿದರು.

ಆದರೆ ತೋಮಾಸೆಂಬವರು "ನಾವು ಅವರ ಹಸ್ತಗಳಲ್ಲಿ ಮೊಳೆಗಳಿಂದ ಉಂಟಾದ ದ್ವಾರವನ್ನು ಕಂಡು ಅದರಲ್ಲಿ ನನ್ನ ಬೆರಳನ್ನು ಇಟ್ಟು ಅವರ ಪಕ್ಕೆಯಲ್ಲಿ ನನ್ನ ಕೈಯನ್ನು ಹಾಕಿ ನೋಡದ ಹೊರತು ವಿಶ್ವಾಸಿಸುವದಿಲ್ಲ" ಅಂದರು.

ಎಂಟು ದಿವಸಗಳಾದನಂತರ ಪುನಃ ಶಿಷ್ಯರು ತೋಮಾಸೆಂಬವರೊಂದಿಗೆ ಕದಹಾಕಿಕೊಂಡು ಒಳಗೆ ಇರುವಾಗ ಜೇಸುನಾಥರು ಬಂದು ಅವರ ಮಧ್ಯದಲ್ಲಿ ನಿಂತು ನಿಮಗೆ ಸಮಾಧಾನವಾಗಲಿ ಅಂದರು.

ತರುವಾಯ ತೋಮಾಸೆಂಬವರನ್ನು ನೋಡಿ" ಇಲ್ಲಿ ನಿನ್ನ ಬೆರಳು ಹಾಕಿನೋಡು. ನಿನ್ನ ಕೈಗಳನ್ನು ನಮ್ಮ ಪಕ್ಕೆಯಲ್ಲಿ ಇಡು ಮತ್ತು ಅವಿಶ್ವಾಸಿಯಾಗಿರದೆ ವಿಶ್ವಾಸಿಯಾಗಿರು, ಎಂದರು. ಆಗ ತೋಮಾಸೆಂಬವರು"ನನ್ನ ಆಳಿದವರೇ ನನ್ನ ದೇವರೇ ಎನ್ನಲು ಜೇಸುನಾಥರು ಅವರಿಗೆ ಹೇಳಿದ್ದೇನಂದರೆ ನೀನು ನಮ್ಮನ್ನು ಕಣ್ಣಿನಿಂದ ನೋಡಿದ ನಿಮಿತ್ತ ವಿಶ್ವಸಿಸಿದಿ. ಆದರೆ ನೋಡದೆ ವಿಶ್ವಾಸಿಸುವವರು ಭಾಗ್ಯವಂತರು ಅಂದರು.

ತರುವಾಯ ಒಂದು ರಾತ್ರಿಯಲ್ಲಿ ಅಪೋಸ್ತಲರು ಜನಸರೆತ್ ಎಂಬ ಸರೋವರದಲ್ಲಿ ಮೀನುಗಳನ್ನು ಹಿಡಿಯುತ್ತಿದ್ದರು. ಆ ರಾತ್ರಿಯೆಲ್ಲವೂ ಅವರು ಬಲೆ ಬೀಸಿದ್ದರೂ ಏನೂ ಸಿಕ್ಕಿರಲಿಲ್ಲ. ಮರುದಿನ ಮುಂಜಾವಿನಲ್ಲಿ ಜೇಸುನಾಥರು ಬಂದು ಧಡದಲ್ಲಿ ನಿಂತರು.

ಮೊದಲು ಅಪೋಸ್ತಲರು ಅವರನ್ನು ಕಂಡುಹಿಡಿಯಲಿಲ್ಲ. ಆದರೆ ಅವರು ನಿಮ್ಮ ಬಲೆಗಳನ್ನು ಬಲಗಡೆಗೆ ಬೀಸಿರಿ. ಆಗ ನಿಮಗೆ ಏನಾದರೂ ಸಿಗಬಹುದು ಎನ್ನಲು ಅವರು ಹಾಗೆಯೇ ಮಾಡಿ ಬಹಳ ಮೀನಗಳನ್ನು ಹಿಡಿದರು. ಆಗ ಜೇಸುನಾಥರ ಪ್ರಿಯ ಶಿಷ್ಯರಾದ ಜೊವಾನ್ನೆಸ್ ಎಂಬವರು ಪೇತ್ರನನ್ನು ನೋಡಿ "ಅವರು ನಮ್ಮ ಕರ್ತರೇ ಎನ್ನಲು ಎಲ್ಲರೂ ಹಿಡಿದ ಮೀನಗಳನ್ನು ತೆಗೆದುಕೊಂಡು ಧಡಕ್ಕೆ ಓಡಿ ಹೋದರು.

## ೯೩ (ಎ) ಜೇಸುನಾಥರು ರಾಯಪ್ಪರನ್ನು ತಮ್ಮ ತಿರುಸಭೆಗೆ ಶ್ರೇಷ್ಠರಾಗಿ ನೇಮಿಸಿದ್ದು.

ಅಪೋಸ್ತಲರು ಮೀನಗಳನ್ನು ಹಿಡಿದು ತಂದ ಮೇಲೆ ಜೇಸುನಾಥರು ಅವರನ್ನು ನೋಡಿ "ನೀವು ಬಂದು ಭೋಜನ ಮಾಡಿರೆಂದು ಹೇಳಿದರು ಭೋಜನ ತೀರಿದ ನಂತರ ಅವರು ಸಿಮೋನ್ ರಾಯಪ್ಪನನ್ನು ನೋಡಿ "ಜ್ವಾನ್ನೇಸನ ಮಗನಾದ

ಸಿಮೋನನೇ ನೀನು ನಮ್ಮನ್ನು ಅಧಿಕಾರವಾಗಿ ಸ್ನೇಹಿಸು ತ್ತಿಯೋ" ಅನ್ನಲು ಸಿಮೋನೆಂಬವರು "ಹೌದು ಆಳಿದವರೇ ನಾನು ನಿಮ್ಮನ್ನು ಸ್ನೇಹಿಸುತ್ತೇನೆಂದು ನಿಮಗೆ ತಿಳಿಯುವದು ಅಂದದಕ್ಕೆ ಹಾಗಾದರೆ ನಮ್ಮ ಕುರಿಮರಿಗಳನ್ನು ಮೇಯಿಸು ಅಂದರು. ತಿರುಗಿ ಅವನನ್ನು ನೋಡಿ "ಸಿಮೋನನೇ ನಮ್ಮನ್ನು ಸ್ನೇಹಿಸುತ್ತೀಯೋ ಎಂದು ಕೇಳಲು "ಹೌದು ಆಳಿದವರೆ ನಾನು ನಿಮ್ಮನ್ನು ಸ್ನೇಹಿಸುತ್ತೇನೆಂದು ನಿಮಗೆ ತಿಳಿಯುತ್ತದೆ. ಹಾಗಾ ದರೆ ನಮ್ಮ ಕುರಿಮರಿಗಳನ್ನು ಮೇಯಿಸು ಅಂದರು. ತಿರುಗಿ ಮೂರನೇ ಸರ್ತಿ ಅವನನ್ನು ನೋಡಿ; "ಸಿಮೋನನೇ ನಮ್ಮನ್ನು ಸ್ನೇಹಿಸುತ್ತಿಯೋ ಎಂಬದಾಗಿ ಕೇಳಲು, ಅವರು ವ್ಯಸನಪಟ್ಟು ಆಳಿದವರೇ ನಿಮಗೆ ಎಲ್ಲಾ ತಿಳಿಯುತ್ತದೆ. ನಾನು ನಿಮ್ಮನ್ನು ಸ್ನೇಹಿಸುತ್ತೇನೆಂದು ನೀವು ಅರಿತಿದ್ದೀರಿ ಅಂದರು. ಹಾಗಾದರೆ ನಮ್ಮ ಕುರಿಗಳನ್ನು ಮೇಯಿಸು ಎಂದರು.

ಈ ಪ್ರಕಾರವಾಗಿ ಜೇಸುನಾಥರು ರಾಯಪ್ಪರನ್ನು ತಿರು ಸಭೆಗೆ ತಲೆಯಾಗಿ ನೇಮಿಸಿ, ಅವರು ಗುರುಗಳನ್ನು ಮತ್ತು ಜನರನ್ನು ಸಹ ಕಾಪಾಡುವಹಾಗೆ ಹೇಳಿದರು. ಜೇಸುನಾಥರು ತಾವೇ ರಾಯಪ್ಪರನ್ನು ಆರಿಸಿದ್ದರಿಂದ ಇವರು ತಿರುಸಭೆಯ ಮೊದಲನೇ ಪಾಪು ಸ್ವಾಮಿಗಳಾದರು.

ಜೇಸುನಾಥರು ತಮ್ಮ ಪುನರುತ್ಥಾನದಿಂದ ಮೋಕ್ಷಾ ರೋಹಣದವರೆಗೆ ಈ ನಾಲ್ವತ್ತು ದಿವಸಗಳೊಳಗೆ ಅನೇಕಸಾರೆ ದರ್ಶನವಾದರು. ತಮ್ಮ ಶಿಷ್ಯರಿಗೆ ಮೋಕ್ಷರಾಜ್ಯದ ವಿಷಯ ತಿಳಿಸಿದರು. ಒಂದು ಸಾರೆ ಗಲಿಲೇಯ ಪಟ್ಟಣದಲ್ಲಿದ್ದ ಒಂದು ಪರ್ವತದ ಮೇಲೆ ಸುಮಾರು ಐದುನೂರು ಮಂದಿ ಶಿಷ್ಯರಿಗೆ ಕಾಣಿಸಿಕೊಂಡರು.

ಅವರು ತಮ್ಮ ಶಿಷ್ಯರಿಗೆ ತಿಳಿಸಿದ್ದೇನಂದರೆ; " ನಮಗೆ ಪರಲೋಕದಲ್ಲಿಯೂ, ಮತ್ತು ಭೂಲೋಕದಲ್ಲಿಯೂ ಸರ್ವ

ಅಧಿಕಾರವು ಕೊಡಲ್ಪಟ್ಟಿದೆ. ಆದ್ದರಿಂದ ನೀವು ಹೋಗಿ ಎಲ್ಲಾ ಜನಾಂಗಗಳಿಗೆ ಬೋಧಿಸಿರಿ. ಮತ್ತು ಅವರಿಗೆ ತಂದೆಯುವೂ ಮಗನವೂ ಸ್ಪಿರಿತು ಸಾಂಕ್ತುವಿನವೂ ಪೆಸರಿನಲ್ಲಿ ಜ್ಞಾನಸ್ನಾನವನ್ನು ಕೊಡಿರಿ ನಾವು ನಿಮಗೆ ಆಜ್ಞಾಪಿಸಿದ ಎಲ್ಲಾ ಕಟ್ಟಳೆಗಳನ್ನು ಅನುಸರಿಸುವಂತೆ ಕಲಿಸಿರಿ. "ಇಗೋ! ನಾವು ಈ ಲೋಕಾಂತ್ಯದವರೆಗೂ ನಿಮ್ಮ ಸಂಗಡವಿರುವೆವು" ಎಂದರು. ಸತ್ಯ ತಿರುಸಭೆಯು ಜೇಸುನಾಥರು ಹೇಳಿದ ಎಲ್ಲ ಸತ್ಯಗಳನ್ನು ತಪ್ಪದೇ ಕಲಿಸುವದು.

## 99 [ಬಿ] ಮೋಕ್ಷಾರೋಹಣ.

ಜೇಸುನಾಥರು ಪುನರುತ್ಥಾನವಾದ ನಾಲ್ವತ್ತನೇ ದಿವಸದಲ್ಲಿ ತಮ್ಮ ಶಿಷ್ಯರೆಲ್ಲರನ್ನು ಕರೆದುಕೊಂಡು ಒಲಿವೆತ್ತು ಪರ್ವತಕ್ಕೆ ಹೋದರು. ಅಲ್ಲಿ ಅವರು ತಮ್ಮ ಕೈಗಳನ್ನೆತ್ತಿ ಅವರನ್ನು ಆಶೀರ್ವದಿಸಿದರು. ಅವರು ನೋಡುತ್ತಿದ್ದ ಹಾಗೆ ಜೇಸುನಾಥರು ಮೋಕ್ಷಕ್ಕೆ ಎತ್ತಲ್ಪಟ್ಟರು ಆಗ ಒಂದು ಮೇಘವು ಅವರು ಮೋಕ್ಷಕ್ಕೆ ಎತ್ತಲ್ಪಟ್ಟು ಪಿತನಾದ ಸರ್ವೇಶ್ವರನ ಬಲಪಾರ್ಶ್ವದಲ್ಲಿ ಕುಳಿತರು ಅಪೋಸ್ತಲರು ಅವರನ್ನು ನೋಡುತ್ತಿರುವಾಗ ಇಬ್ಬರು ದೇವದೂತರು ಅವರಿಗೆ ಕಾಣಿಸಲ್ಪಟ್ಟು ಹೇಳಿದ್ದೇನಂದರೆ ಈಗ ಮೋಕ್ಷಕ್ಕೆ ಎತ್ತಲ್ಪಟ್ಟ ಜೇಸುನಾಥರೇ ಪುನಃ ಲೋಕಾಂತ್ಯದಲ್ಲಿ ಇಲ್ಲಿಗೆ ಇಳಿದು ಬರುವರು ಎಂದರು. ಈ ದಿವಸವನ್ನು ಕೊಂಡಾಡುವದಕ್ಕಾಗಿ ನಾವು ಪಾಸ್ಕ ಹಬ್ಬದ ನಂತರ ನಾಲ್ವತ್ತನೇ ದಿವಸದಲ್ಲಿ ಮೋಕ್ಷಾರೋಹಣ ಹಬ್ಬವನ್ನು ಕೊಂಡಾಡುತ್ತೇವೆ. ಇದು ಸಾಲದ ಹಬ್ಬವಾಗಿರುತ್ತದೆ.

## 100 ಸ್ಪಿರಿತು ಸಾಂಕ್ತುವಿನ ಆಗಮನವನ್ನು ಕುರಿತು

ಜೇಸುನಾಥರು ಮೋಕ್ಷಾರೋಹಣವಾದನಂತರ ಅಪೋಸ್ತಲರು ಮತ್ತು ಶಿಷ್ಯರು ಜೆರೂಸಲೇಮಿಗೆ ತಿರುಗಿ ಹೋದರು.

ಅಲ್ಲಿ ಅವರು ಜೇಸುನಾಥರು ಸ್ಪಿರಿತುಸಾಂಕ್ತುವನ್ನು ಕಳಿಸುವೆ ವೆಂದು ಹೇಳಿದವಾಗ್ದತ್ತವು ನೆರವೇರುವವರೆಗೆ ಅಲ್ಲಿಯೇ ಇದ್ದರು. ಅವರ ಸಂಗಡ ಕನ್ಯಮರಿಯಮ್ಮನವರು ಸಹ ಇದ್ದರು. ಇವ ರೆಲ್ಲರೂ ಕೂಡಿ ಸುಮಾರು ೧೨೦ ಮಂದಿ ಇದ್ದರು.

ಶಿಷ್ಯರು ತಮ್ಮಲ್ಲಿ ಜೂದಾಸನು ಕಡಿಮೆಯಾದದ್ದರಿಂದ ಅವನ ಸ್ಥಳದಲ್ಲಿ ಮತ್ತೊಬ್ಬ ಅಪೋಸ್ತಲರನ್ನು ನೇಮಿಸುವದ ಕ್ಕಾಗಿ ನಿಶ್ಚೈಸಿದರು. ಆದ್ದರಿಂದ ಜೇಸುನಾಥರನ್ನು ಮೊದಲಿ ನಿಂದ ಹಿಂಬಾಲಿಸಿದ ಇಬ್ಬರು ಶಿಷ್ಯರಲ್ಲಿ ಅದೃಷ್ಟ ಚೀಟಿಯನ್ನು ಹಾಕಿದರು. ಅದು ಮತ್ತೀಯುಸನಮೇಲೆ ಬಿತ್ತು. ಆಗ್ಗಿನಿಂದ ಅವರು ಆ ಅಪೋಸ್ತಲರಲ್ಲಿ ಒಬ್ಬರಾದರು.

ಸ್ಪಿರಿತುಸಾಂಕ್ತುವಿನ ಹಬ್ಬದದಿವಸ ಎಲ್ಲಾ ಶಿಷ್ಯರು ಒಂದು ಸ್ಥಳದಲ್ಲಿ ಕೂಡಿದರು. ಆಗ ಒಂದು ದೊಡ್ಡ ಬಿರುಗಾಳಿಬೀಸಿತು. ಪ್ರತಿ ಒಬ್ಬೊಬ್ಬರ ತಲೆಯಮೇಲೆ ಅಗ್ನಿಯ ನಾಲಿಗೆಯು ಕಾಣಿಸಲ್ಪಟ್ಟವು. ಅವರೆಲ್ಲರೂ ಸ್ಪಿರಿತುಸಾಂಕ್ತುವಿನಿಂದ ತುಂಬಿ ದವರಾಗಿ ಅನೇಕಭಾಷೆಗಳನ್ನು ಮಾತನಾಡಲಾರಂಭಿಸಿದರು.

ಆ ಕಾಲದಲ್ಲಿ ಜೆರೂಸಲೇಮ್ ನಗರದ ಜನರು ಬೇರೆಬೇರೆ ತರದ ಭಾಷೆಯನ್ನು ಆಡುತ್ತಿದ್ದರು. ಅವರೆಲ್ಲರೂ ಶಿಷ್ಯರು ಮಾತಾಡುವದನ್ನು ಕೇಳಿ ಬಹಳ ಆಶ್ಚರ್ಯಪಟ್ಟು ಇವರು ಗಲಿ ಲೇಯಸ್ತರಲ್ಲವೋ? ಹಾಗಾದರೆ ನಾವು ಪ್ರತಿಯೊಬ್ಬರು ತಮ್ಮ ಭಾಷೆಯಲ್ಲಿ ಕೇಳುವದೇನು? ಎಂದು ಆಶ್ಚರ್ಯಪಟ್ಟರು.

ಆಗ ರಾಯಪ್ಪನವರು ಎದ್ದು ನಿಂತು ತಮ್ಮ ಸ್ವರವನ್ನು ಮೇಲಕ್ಕೆತ್ತಿ ಮೊದಲನೇ ಸಾರಿ ಪ್ರಸಂಗ ಮಾಡತೊಡಗಿದರು. ಏನಂದರೆ "ಓ ಇಸ್ರಾಯೇಲಸ್ತರೇ ನನ್ನ ವಾರ್ತೆಗಳನ್ನು ಕೇಳಿರಿ. ನೀವು ದೇವಮಹಿಮೆಯ ನಜರೇತಿನ ಜೇಸುವನ್ನು ಕೊಂದು

ಹಾಕಿದಿರಿ. ಆದರೆ ಅವರು ಜೀವಿತರಾಗಿ ಎದ್ದರು. ಅವರ ಪುನರುತ್ಥಾನಕ್ಕೆ ನಾವೆಲ್ಲರೂ ಸಾಕ್ಷಿದಾರರಾಗಿರುತ್ತೇವೆ. ಈಗ ನೀವು ನೋಡಿದ ಮತ್ತು ಕೇಳಿದಹಾಗೆ ಪಿತನಾದವರು ನಮಗೆ ಸ್ಪಿರಿತುಸಾಂಕ್ತುವನ್ನು ಕಳುಹಿಸಿದರು ಆದರಿಂದ ನೀವು ಕೊಂದುಹಾಕಿದ ಜೇಸುನಾಥರು ನಿಜವಾದ ಕರ್ತರೂ ಮತ್ತು ಕ್ರಿಸ್ತುನಾಥರೆಂದು ನಿಮ್ಮಲ್ಲಿ ಪ್ರತಿಯೊಬ್ಬೊಬ್ಬನೂ ನಂಬುವನಾಗಲಿಯೆಂದರು.

ರಾಯಪ್ಪನವರ ಪ್ರಸಂಗವನ್ನು ಕೇಳಿದವರಲ್ಲಿ ಅನೇಕರು ತಮ್ಮ ಪಾಪಗಳಿಗಾಗಿ ಬಹಳ ಮನಸ್ತಾಪಪಟ್ಟರು. ತಾವು ಏನು ಮಾಡಬೇಕೆಂದು ಕೇಳಿದರು. ಅದಕ್ಕೆ ರಾಯಪ್ಪನವರು ನೀವು ತಪಸ್ಸನ್ನುಮಾಡಿರಿ. ಮತ್ತು ನಿಮ್ಮಲ್ಲಿ ಪ್ರತಿಯೊಬ್ಬೊಬ್ಬನು ಪಾಪಪರಿಹಾರಕ್ಕಾಗಿ ಜ್ಞಾನಸ್ನಾನವನ್ನು ತಕ್ಕೊಳ್ಳಲಿ ಆಗನಿಮಗೆಸಹ ಸ್ಪಿರಿತುಸಾಂಕ್ತುವಿನ ವರಪ್ರಸಾದವು ಸಿಕ್ಕುವದು ಎಂದರು. ರಾಯಪ್ಪನವರ ವಾಕ್ಯಗಳನ್ನು ನಂಬಿ ಜ್ಞಾನಸ್ನಾನವನ್ನು ತೆಗೆದುಕೊಂಡವರು ಸುಮಾರು ಮೂರುಸಾವಿರ ಮಂದಿಯಾಗಿದ್ದರು.

ಸ್ಪಿರಿತುಸಾಂಕ್ತುವಿನ ಆಗಮನದ ಹಬ್ಬವನ್ನು ಕೊಂಡಾಡುವದಕ್ಕಾಗಿ ನಾವು ಸ್ಪಿರಿತುಸಾಂಕ್ತುವಿನ ಹಬ್ಬವನ್ನು ಮಾಡುತ್ತೇವೆ. ಇದು ಜೇಸುನಾಥರ ಮೋಕ್ಷಾರೋಹಣದ ಹಬ್ಬದ ನಂತರ ಹತ್ತನೇ ದಿವಸದಲ್ಲಿ ಬರುತ್ತದೆ. ಇದು ವರ್ಷದಲ್ಲಿ ಬರುವ ಹಬ್ಬಗಳಲ್ಲಿ ಇದು ಒಂದು ದೊಡ್ಡ ಹಬ್ಬವಾಗಿರುತ್ತದೆ.

ಆ ಕಾಲದಿಂದ ನಮ್ಮ ಕತೋಲಿಕ್ ವೇದವು ಎಲ್ಲೆಲ್ಲಿಯೂ ಹರಡಿ ಲೋಕವೆಲ್ಲಾ ತುಂಬಿರುತ್ತದೆ. ಇದು ಕತೋಲಿಕವು. ಅಂದರೆ ಎಲ್ಲಾ ಜನಾಂಗಗಳಲ್ಲಿಯೂ ಯಾವಾಗಲು ಇರುವಂಥಾದ್ದಾಗಿರುತ್ತದೆ.

**ಸಂಪೂರ್ಣ.**

ಈ ಪುಸ್ತಕವನ್ನು
ಎ. ಎಚ್. ಜಮಖಂಡಿ
ಇವರು ತಮ್ಮ
ಯುನಾಯಿಟೆಡ್ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು.